

# ದಾನಸಿರಿ



ಪ್ಪ ಜತ್ತಿ ಅಭಿನಂದನ ಗ್ರಂಥ

• ಡಾ. ಅಶೋಕ ಸಮಗಂಡಿ
• ಅಬ್ಬಾಸ ಮೇಲಿನಮನಿ

# ದಾನಸಿರಿ

## ಶ್ರೀ ದಾನಪ್ಪ ಜತ್ತಿ ಅಭಿನಂದನ ಗ್ರಂಥ

ಪ್ರಧಾನ ಸಂಪಾದಕ :

**ಡಾ. ಅಶೋಕ ಸಮುಗಂಡಿ**

ಸಂಪಾದಕ :

**ಅಬ್ಬಾಸ ಮೇಲಿನಮನಿ**



ಶ್ರೀ ದಾನಪ್ಪ ಜತ್ತಿ ಅಭಿನಂದನ ಗ್ರಂಥ ಸಮಿತಿ

ಗುಳೇದಗುಡ್ಡ–೫೮೭ ೨೦೩ ವಿಜಾಪೂರ ಜಿಲ್ಲೆ

DANASIRI :
Sri Danappa Jatti Felicitation Volume. Edited by Dr. Ashok Samagandi, Abbas Melinamani. Published by Sri Danappa Jatti Abhinandan Grantha Samiti, Guledgudd - 587 203 (Dist.: Bijapur) Pages: 8+233=241



First Edition : 1997

ಪ್ರಥಮ ಮುದ್ರಣ : ಸಪ್ಟೆಂಬರ ೨೫, ೧೯೯೭

ಮುಖಪುಟ : ಡಾ. ಬಿ. ಕೆ. ಹಿರೇಮಠ

ಬೆಲೆ : ಅರವತ್ತು ರೂಪಾಯಿಗಳು



ಗ್ರಂಥಗಳಿಗೆ ಬರೆಯಿರಿ :

**ಡಾ. ಅಶೋಕ ಸಮಗಂಡಿ,**
ಪ್ರಧಾನ ಸಂಪಾದಕ
ಶ್ರೀ ದಾನಪ್ಪ ಜತ್ತಿ ಅಭಿನಂದನ ಗ್ರಂಥ ಸಮಿತಿ
**ಗುಳೇದಗುಡ್ಡ – ೫೮೭ ೨೦೩**
ವಿಜಾಪೂರ ಜಿಲ್ಲೆ

**ದಾನಪ್ಪ ಜತ್ತಿ ಶಾಸ್ತ್ರಿಗಳು,**
ಪುರಾಣ – ಪ್ರವಚನ – ಕೀರ್ತನಕಾರ
**ತಿಕೋಟಾ – ೫೮೬ ೧೩೦**
ವಿಜಾಪೂರ ಜಿಲ್ಲೆ

ಮುದ್ರಣ :
ಪ್ರಭು ಪ್ರಿಂಟಿಂಗ ಪ್ರೆಸ್,
ಜ. ತೋಂಟದಾರ್ಯ ಮಠದ ಹತ್ತಿರ, ಗದಗ.
ದೂರವಾಣಿ : ೮೧೮೧




# ನಮ್ಮ ಮಾತು

ವಿಜಾಪೂರ ಜಿಲ್ಲೆಯ ತಿಕೋಟಾದ ಶ್ರೀ ದಾನಪ್ಪ ಜತ್ತಿಯವರು ಸುಮಾರು ನಲವತ್ತು ವರ್ಷಗಳಿಂದ ಕಲೆಗಾಗಿ ಬದುಕು ನೂಕುತ್ತ ಬಂದವರು. ತೀವ್ರ ಸ್ಪರ್ಧೆಯ ಇಂದಿನ ಕಂಪ್ಯೂಟರ್ ಯುಗದಲ್ಲೂ ಭಾರತೀಯ ಸಂಸ್ಕೃತಿಯ ಬೇರುಗಳಿಗೆ ಹುಲುಸಾದ ನೀರು, ಗೊಬ್ಬರ ಉಣಿಸಿದವರು. ಮೌಲ್ಯಗಳಿಂದ ಪೋಷಿಸಿ ಜನರ ಹೃದಯಗಳಿಗೊಂದು ಹೃಷ್ಟ-ಪುಷ್ಟವಾದ ಸಂಸ್ಕಾರ ಒದಗಿಸುವ ಕಾರ್ಯದಲ್ಲಿ ನಿರತರಾಗಿ ಅವರು ಯಶಸ್ಸು ಹೊಂದಿರುವದು ಅತ್ಯಂತ ಗಮನಾರ್ಹ ವಿಷಯ. ದಟ್ಟ ಪ್ರತಿಭೆ, ಆಳವಾದ ಅಧ್ಯಯನ, ಸುತ್ತಮುತ್ತಲಿನ ಗಾಢವಾದ ಅನುಭವಗಳನ್ನು ತಮ್ಮದಾಗಿಸಿಕೊಂಡವರು. ದಾನಪ್ಪ ಕೀರ್ತನ, ಪುರಾಣ, ಪ್ರವಚನಗಳ ಮೂಲಕ ಜನತೆಯನ್ನು ಅದರೊಟ್ಟಿಗೆ ಸಮಾಜವನ್ನು ಸ್ಪಂದಿಸುತ್ತಿರುವುದು ಹೆಮ್ಮೆಯ ವಿಷಯ.

ತಮ್ಮ ಬಾಡಿದ ಬದುಕನ್ನು ಸತತ ಅಭ್ಯಾಸದ ಮೂಲಕ ಚಿಗುರಿಸಿಕೊಂಡು ಕಲೆ, ಸಾಹಿತ್ಯ, ಸಂಗೀತ. ಸಂಸ್ಕೃತಿಯಲ್ಲಿ ಜೀವದುಂಬಿ, ಅರಿವಿನ ನುಡಿಯಲ್ಲಿ, ಪ್ರಾಮಾಣಿಕ ನಡೆಯಲ್ಲಿ ಮುನ್ನಡೆದು ಕೀರ್ತಿಭಾಜನರಾಗಿರೋದು ಸಾಮಾನ್ಯ ಮಾತಲ್ಲ. ತಾವು ರೂಢಿಸಿಕೊಂಡಿರುವ ವಿಶಿಷ್ಟ ಶೈಲಿಯ ಮೂಲಕ ಪಾದರಸದಂಥ ಕ್ರಿಯೆಗೆ ಬಣ್ಣದುಂಬಿ, ಜನತೆಯ ಧಾರ್ಮಿಕ, ಸಾಂಸ್ಕೃತಿಕ ಬೆಳವಣಿಗೆಗೆ ಯಾವಾಗಲೂ ಶ್ರಮಿಸುತ್ತಿರುವ ಸಂಗತಿ ತೀರ ಅಚ್ಚರಿಯ ವಿಷಯವೇ ಸರಿ.

ದಾನಪ್ಪ ಜತ್ತಿಯವರು ಇದೀಗ ಪುರಾಣ-ಕೀರ್ತನೆ-ಪ್ರವಚನಗಳ ಮೂಲಕ ಗಟ್ಟಿಯಾದ ಹೆಸರು ಮಾಡಿದವರು. ಜೊತೆಗೆ ತಮ್ಮ ಮಾನವೀಯ ನಡೆ-ನುಡಿಗಳ ಮೂಲಕ ಬಹಳಷ್ಟು ಜನಪ್ರಿಯತೆಯನ್ನು ಗಳಿಸಿಕೊಂಡಿರುವರು; ಇಷ್ಟಕ್ಕೆ ಅವರ ವ್ಯಕ್ತಿತ್ವ ಪೂರ್ಣವಾಗುವುದಿಲ್ಲ. ಅದೆಷ್ಟೋ ಜನರಿಗೆ ಅವರ ಪ್ರತಿಭೆಯ ವೈವಿಧ್ಯತೆಯ ಪರಿಚಯವಿಲ್ಲ. ಇದನ್ನು ಪರಿಚಯಿಸುವ ನಿಟ್ಟಿನಲ್ಲಿ ಈ ಮೂಲಕ ಅವರನ್ನು ಅಭಿನಂದಿಸುವ ಒಂದು ಗ್ರಂಥವನ್ನು ಹೊರತರಬೇಕೆಂಬ ಹಂಬಲ ನಮ್ಮದಾಗಿತ್ತು. ಎಲ್ಲರಿಗೂ ಆತ್ಮೀಯರಾದ ದಾನಪ್ಪ ಅವರು ೫೪ ವಸಂತಗಳನ್ನು ಸಾರ್ಥಕವಾಗಿ ಕಳೆದು ೫೫ನೆಯ ವಸಂತಕ್ಕೆ ಕಾಲಿಡುವ ಈ ಸಂದರ್ಭದಲ್ಲಿ ನಮ್ಮ ಆಕಾಂಕ್ಷೆ ಹೂವಾಗಿ ಅರಳುತ್ತದೆ.

ನಟನೆಯಿಂದ, ನಿರ್ದೇಶನದಿಂದ, ಕಥೆ, ಕವನಗಳಿಂದ, ಸಂಪಾದಿತ ಕೃತಿಯಿಂದ, ಸಾಮಾಜಿಕ ಕಾರ್ಯಯೋಜನೆಗಳಿಂದ, ಪುರಾಣ–ಪ್ರವಚನಗಳಿಂದ, ಸಂಗೀತ ಸೇವಯಿಂದ, ಹಾಸ್ಯಪ್ರಜ್ಞೆಯಿಂದ ಜನತೆಯ ಬದುಕಿಗೊಂದು ಚೈತನ್ಯ ತಂದು ಕೊಟ್ಟಿರುವ ದಾನಪ್ಪನವರು ಈ ಮೌಲ್ಯಗಳೇ ತಮ್ಮ ಸಿರಿಯೆಂದು ಭಾವಿಸಿದವರು. ಅವುಗಳನ್ನು ಪ್ರಾಂಜಲ ಮನಸ್ಸಿನಿಂದ, ಸಾರ್ಥಕವಾದ ರೀತಿಯಲ್ಲಿ ಸಮಾಜಕ್ಕೆ ದಾನಮಾಡುತ್ತಿರುವರು. ಇದರ ಪ್ರತೀಕವಾಗಿಯೇ ಅವರನ್ನು ಅಭಿನಂದಿಸುವ ಈ ಗ್ರಂಥಕ್ಕೆ 'ದಾನಸಿರಿ' ಎಂದು ಹೆಸರಿಡಲಾಗಿದೆ.

ನಮ್ಮ ವಿನಂತಿಯನ್ನು ಮನ್ನಿಸಿ ಪೂಜ್ಯಸ್ವಾಮೀಜಿಯವರು, ಹಿರಿಯ ಸಾಹಿತಿಗಳು, ಆತ್ಮೀಯರು, ಸ್ನೇಹಿತರು ನಮ್ಮ ಸೀಮಿತ ಅವಧಿಯೊಳಗಾಗಿ ಆಶೀರ್ವಚನ, ಲೇಖನ, ಕವನ, ವಿಮರ್ಶೆಗಳನ್ನು ಕಳುಹಿಸಿಕೊಟ್ಟು ನಮ್ಮ. ಕೆಲಸಕ್ಕೆ ಚೇತನ ತುಂಬಿದ್ದಾರೆ. ಅವರಿಗೆಲ್ಲ ನಮ್ಮ ಸಮಿತಿ ಋಣಿಯಾಗಿದೆ. ಅಭಿನಂದನ ಗ್ರಂಥಕ್ಕೆ ಬರಹಗಳ ಆಹ್ವಾನದ ಸುದ್ದಿಯನ್ನು ತಮ್ಮ ಪತ್ರಿಕೆಗಳಲ್ಲಿ ಪ್ರಕಟಿಸಿ ನಮ್ಮ ಈ ಕಾರ್ಯಕ್ಕೆ ನೆರವಾದ ನಾಡಿನ ಎಲ್ಲ ಪತ್ರಿಕೆಗಳನ್ನು ಈ ಸಂದರ್ಭದಲ್ಲಿ ನೆನೆಯದೇ ಇರಲಾರೆವು.

ಈ ಗ್ರಂಥ ಸೃಷ್ಟಿಯ ಕಾರ್ಯದಲ್ಲಿ ಪ್ರಾರಂಭದಿಂದಲೂ ತಮ್ಮ ಶ್ರದ್ಧಾಪೂರ್ವ, ಸಂಯಮ ಮಾರ್ಗದರ್ಶನದೊಂದಿಗೆ ಪೂಜ್ಯ ಗುರುಗಳಾದ ಡಾ. ಬಿ. ಕೆ. ಹಿರೇಮಠ ಅವರು ದಾನಸಿರಿಗೊಂದು ಕಳೆ ತಂದಿದ್ದಾರೆ. ಗ್ರಂಥಕ್ಕೆ ಹೆಸರು ಸೂಚಿಸಿ, ಕೆಲಸಗಳ ಒತ್ತಡಗಳಲ್ಲೂ ಸಾಂಕೇತಿಕವಾದ ಮುಖಪುಟವನ್ನು ರಚಿಸಿಕೊಟ್ಟಿದ್ದಾರೆ. ಈ ಸಂದರ್ಭದಲ್ಲಿ ಅವರಿಗೆ ಎಷ್ಟು ಕೃತಜ್ಞತೆ ಹೇಳಿದರೂ ಕಡಿಮೆಯೇ. ಸಮಿತಿಯ ಪರವಾಗಿ ಅವರಿಗೆ ನಾವಿಬ್ಬರೂ ಋಣಿಯಾಗಿದ್ದೇವೆ.

ಈ ಗ್ರಂಥಕ್ಕೆ ಆರ್ಥಿಕವಾಗಿ ನೆರವು ನೀಡಿದ ಹಿರಿಯ ಚೇತನಗಳಿಗೆ ತುಂಬಿದೆದೆಯ ನಮನಗಳು. ಗ್ರಂಥವನ್ನು ತ್ವರಿತವಾಗಿ, ಅಷ್ಟೇ ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟ ಗದುಗಿನ ಪ್ರಭು ಪ್ರಿಂಟಿಂಗ ಪ್ರೆಸ್ಸಿನ ಮಾಲಿಕರಾದ ಶ್ರೀ ಶಾಂತವೀರ ಜಂಗಮನಿ ಅವರಿಗೂ, ಅವರ ಸಿಬ್ಬಂದಿಗೂ ನಮ್ಮ ವಂದನೆಗಳು ಸಲ್ಲುತ್ತವೆ.

ಅದೇರೀತಿಯಾಗಿ ಪರೋಕ್ಷವಾಗಿ, ಅಪರೋಕ್ಷವಾಗಿ ಸಹಾಯ, ಸಹಕಾರ, ನೆರವು ನೀಡಿದ ಎಲ್ಲ ಮಹನೀಯರನ್ನು ಇಲ್ಲಿ ನೆನಪಿಸಿಕೊಳ್ಳುತ್ತ ಈ ದಾನಸಿರಿಯನ್ನು ಅವರ ಕೈಗಿಡುತ್ತಿದ್ದೇವೆ.

ಗುಳೇದಗುಡ್ಡ, — ಡಾ. ಅಶೋಕ ಸಮಗಂಡಿ
ಆಗಸ್ಟ ೧೫, ೧೯೯೨ — ಅಬ್ಬಾಸ ಮೇಲಿನಮನಿ



## ಪುಟ ತೆರೆದಂತೆ......

### ಭಾಗ : ಒಂದು – ಆಶೀರ್ವಚನ



### ಭಾಗ : ಎರಡು – ವ್ಯಕ್ತಿತ್ವ

## ಭಾಗ : ಮೂರು – ಪುಸ್ತಕಗಳು – ಕ್ಯಾಸೆಟ್‌ಗಳು



## ಭಾಗ : ನಾಲ್ಕು – ಕವಿತೆಗಳು



ಜಗಜ್ಯೋತಿ ಬಸವೇಶ್ವರರು
ಶ್ರೀ ದಾನಪ್ಪ ಜತ್ತಿಯವರ ಆರಾಧ್ಯದೈವ



ಕಲಾವಿದರ ಕಲ್ಪವೃಕ್ಷ - ಭಕ್ತಾನುರಾಗಿ
ಜಿಡಗಾ - ಅಚಲೇರಿ - ಮುಗಳಖೋಡ ಸುಕ್ಷೇತ್ರದ ಪರಮಪೂಜ್ಯ
ಶ್ರೀ ಶ್ರೀ ಶ್ರೀ ಷಡಕ್ಷರ ಶಿವಯೋಗಿ ಸಿದ್ಧರಾಮ ಮಹಾಸ್ವಾಮಿಗಳು
ಅವರ ಚರಣ ಕಮಲಗಳಲ್ಲಿ
ಈ ಗ್ರಂಥ ಸಮರ್ಪಿತ

# ಸಾರಸ್ವತ ಲೋಕದ ಅಮೂಲ್ಯ ನಿಧಿ

ಶ್ರೀ ೧೦೦೮ ಜಗದ್ಗುರು

**ಡಾ. ಚಂದ್ರಶೇಖರ ಶಿವಾಚಾರ್ಯ ಮಹಾಸ್ವಾಮೀಜಿ,**

ಶ್ರೀ ಜಗದ್ಗುರು ವಿಶ್ವಾರಾಧ್ಯ ಸಿಂಹಾಸನ, ಜಂಗಮವಾಡಿಮಠ,

ವಾರಣಾಸಿ – ೨೨೧ ೦೦೧ (ಉ.ಪ್ರ.)

ತಮ್ಮಲ್ಲಿನ ಪ್ರತಿಭೆ – ಪಾಂಡಿತ್ಯ – ಕಲೆಗಳನ್ನು ಧರ್ಮಕ್ಕಾಗಿ ಹಾಗೂ ಧರ್ಮ ಪ್ರಸಾರಕ್ಕಾಗಿ ದುಡಿಸಿದ ಹಾಗೂ ದುಡಿಸುವ ಜನಗಳು ಕೈಬೆರಳಿನ ಎಣಿಕೆಗೆ ಸಿಕ್ಕುವಷ್ಟು ಮಾತ್ರ. ಅಂಥ ಕೆಲವೇ ಜನಗಳಲ್ಲಿ ದಾನಪ್ಪ ಜತ್ತಿ ಒಬ್ಬರು. ಕನ್ನಡ ಸಾರಸ್ವತ ಲೋಕದ ಅಮೂಲ್ಯ ಸಂಪತ್ತನ್ನು ತಮ್ಮ ನುಡಿಸೇವೆಗಾಗಿ ಧಾರಾಳ ವಾಗಿ ಬಳಸಿಕೊಂಡಿದ್ದಾರೆ. ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಪ್ರವಚನ. ಕೀರ್ತನಗಳ ಮೂಲಕ ಜನ – ಮಾನಸದಲ್ಲಿ ತುಂಬಿದ್ದಾರೆ. ಇವರ ಕೀರ್ತನ. ಪ್ರವಚನಗಳು ಉತ್ತರ ಕರ್ನಾಟಕದ ಪ್ರತಿಯೊಂದು ಮನೆ – ಮನಗಳನ್ನು ತಲುಪಿವೆ. ಇವರ ನುಡಿಯಲ್ಲಿ ಜನರನ್ನು ಹಿಡಿದು ನಿಲ್ಲಿಸುವ ಶಕ್ತಿ ಇದೆ. ಇವರ ವಾಣಿಯು ತುಂಬೆಲ್ಲ ಹಾಸ್ಯದ ಹೃದು – ಮಧುರ ತರಂಗಗಳನ್ನು ಕಾಣಬಹುದು. ಅನಾವಶ್ಯಕ ರಾಗ – ದ್ವೇಷಾದಿಗಳು ಇವರ ನುಡಿಸೇವೆಯಲ್ಲಿ ಕಂಡುಬಂದುದಿಲ್ಲ. ಪಾರದರ್ಶಕ ದಂತೆ ಇವರ ಭಾಷೆ ಸರಳ–ಸುಂದರ. ಇವರ ಮಾತುಗಳಲ್ಲಿ ದಿಟ್ಟತನವಿದೆ. ಹದುಳತನವಿದೆ. ಇವರು ತಮ್ಮ ಜೀವನದ ಬಹುಪಾಲು ಭಾಗವನ್ನು ನುಡಿಸೇವೆ ಗಾಗಿಯೇ ಬಳಸಿದ್ದಾರೆ.

ಶ್ರೀ ದಾನಪ್ಪ ಜತ್ತಿಯವರ ವ್ಯಕ್ತಿತ್ವವನ್ನು ಗುರುತಿಸಿ ಇವರನ್ನು ಅಭಿನಂದಿಸು ತ್ತಿರುವುದು ಹಾಗೂ ಆ ನಿಮಿತ್ತ ಅಭಿನಂದನ ಗ್ರಂಥವೊಂದನ್ನು ಹೊರತರುತ್ತಿರು ವುದು ಶ್ರೀಸನ್ನಿಧಿಗೆ ತುಂಬಾ ಸಂತೋಷವನ್ನುಂಟುಮಾಡಿದೆ. ಜಗದ್ಗುರು ಶ್ರೀ ವಿಶ್ವಾರಾಧ್ಯರು ಹಾಗೂ ಕಾಶಿ ವಿಶ್ವನಾಥ – ಅನ್ನಪೂರ್ಣೇಶ್ವರಿಯವರು ಇವರಿಗೆ ಸುಖ – ಸಂಪತ್ತು – ಸ್ವಾಸ್ಥ್ಯ – ಸೌಕರ್ಯಗಳನ್ನಿತ್ತು ಕಾಪಾಡಲೆಂದು ತುಂಬುಹೃದಯದಿಂದ ಹಾರೈಸುತ್ತೇವೆ.

# ಸರ್ವಮುಖಿ ಪ್ರತಿಭಾವಂತ

**ಶ್ರೀಮದನಂತ ಶ್ರೀ ವಿಭೂಷಿತ, ಷಟ್‍ಸ್ಥಲಬ್ರಹ್ಮಿ, ಘನಲಿಂಗ ಚಕ್ರವರ್ತಿ**
**ಶ್ರೀ ವೀರಮಹಂತೇಶ್ವರ ಶಿವಾಚಾರ್ಯ ಮಹಾಸ್ವಾಮಿಗಳು**
**(ನೀಲಗುಂದ) ಮಲ್ಲಿಕಾರ್ಜುನ ನಗರ, ವಿಜಾಪೂರ**

ನಮ್ಮ ನಾಡಿನ ಹೆಮ್ಮೆಯ ಪ್ರವಚನಕಾರರೂ – ವಚನಕಾರರೂ ಆದ ಶರಣ ಶಿರೋಮಣಿ ದಾನಪ್ಪ ಜತ್ತಿಯವರು ನಾಡಿಗೆ ಸಲ್ಲಿಸಿದ ಬಹುಮುಖ ಸೇವೆಗಾಗಿ ಸಂಭಾವನಾ ಗ್ರಂಥವೊಂದನ್ನು ತರಲಿರುವ ವಿಷಯ ತಿಳಿದು ಬಹಳ ಸಂತೋಷ ವೆನಿಸಿತು. ಅದನ್ನೂ ನಮ್ಮ ಪ್ರೀತಿ ಪಾತ್ರ ಊರಾದ ಗುಳೇದಗುಡ್ಡದ ಜನತೆಯೇ ಕೈಗೊಂಡಿರುವದನ್ನು ತಿಳಿದು ಇನ್ನೂ ಸಂತಸವೆನಿಸಿತು.

ಶ್ರೀ ದಾನಪ್ಪ ಜತ್ತಿಯವರು ನಮ್ಮ ನಾಡಿನ ಬಲು ಅಪರೂಪದ ವ್ಯಕ್ತಿ. 'ಬಹುಮುಖಿ ಪ್ರತಿಭಾವಂತ'ರೆನ್ನುವ ಶಬ್ದವೂ ಅವರನ್ನು ಪೂರ್ಣವಾಗಿ ಬಣ್ಣಿಸಲು ಅಸಮರ್ಥವಾಗುತ್ತದೆ. ಅವರು ಸರ್ವಮುಖಿ ಪ್ರತಿಭಾವಂತರು. ಅವರಲ್ಲಿ ಏನಿದೆ ? ಎಂದು ಹುಡುಕುವದಕ್ಕಿಂತ ಅವರಲ್ಲಿ ಏನಿಲ್ಲ ? ಎಂದು ಹುಡುಕುವದೇ ಹೆಚ್ಚು ಸುಲಭ.

ವಿಧಾತನ ವಿಶೇಷ ಸೃಷ್ಟಿಯಾದ ಶರಣ ದಾನಪ್ಪ ಜತ್ತಿಯವರು ಕೈಹಾಕದ ಕ್ಷೇತ್ರವಿಲ್ಲ. ಬಾಯಿ ಹಾಕದ ವಿಷಯವಿಲ್ಲ. ರಾಜಕಾರಣದಿಂದ ಹಿಡಿದು ಧರ್ಮ ಕಾರಣದವರೆಗೆ, ನಾಟಕ, ಸಿನೇಮಾ ವೇದಿಕೆಯಿಂದ, ಪ್ರವಚನ ವೇದಿಕೆಯವರೆಗೆ ಅವರ ಬದುಕಿನ ಬಳ್ಳಿ ಹರಡಿದೆ. ವಿಶೇಷವೆಂದರೆ ಎಲ್ಲ ಕ್ಷೇತ್ರಗಳಲ್ಲೂ ತಮ್ಮ ಜತ್ತಿ ಛಾಪನ್ನು ಒತ್ತಿಯೇ ಬಂದಿದ್ದಾರೆ. ತಮ್ಮ ವಿಶ್ಲೇಷಣೆಯಿಂದ ಎಲ್ಲರ ತಲೆಗಳಿಗೆ ಹಿಡಿದ ಜೋಮನ್ನು ಬಿಡಿಸಬಲ್ಲ ಜತ್ತಿಯವರು ತಮ್ಮ ಸಿರಿಕಂಠದ ಸುಗಮ ಸಂಗೀತದಿಂದ ಎಲ್ಲರ ತಲೆದೂಗುವಂತೆ ಮಾಡುತ್ತಾರೆ. ಜೊತೆಗೆ ತಮ್ಮ ನಂಜಿಲ್ಲದ ಸರಸ ಹಾಸ್ಯದಿಂದ ಎಲ್ಲರ ಹೊಟ್ಟೆ ಹುಣ್ಣಾಗುವಂತೆಯೂ ಮಾಡುತ್ತಾರೆ.

ದಾನಪ್ಪ ಜತ್ತಿಯವರು ನಮ್ಮ ನಡುವಣ ಅಮೂಲ್ಯ ಆಸ್ತಿ. ಈ 'ಆಸ್ತಿ'ಯ ಮೌಲ್ಯವನ್ನು ಸಂಭಾವನಾ ಗ್ರಂಥದ ಮೂಲಕ ಇನ್ನೂ ಹೆಚ್ಚಿಸುತ್ತಲಿದ್ದೀರಿ. ಇದರಿಂದ ನಮಗೆ ತುಂಬ ಸಂತೋಷವುಂಟಾಗಿದೆ. ತಮ್ಮ ಕಾರ್ಯಕ್ಕೆ ಪೂರ್ಣ ಶುಭ ಕೋರುತ್ತೇವೆ.

# ಅಭಿಜಾತ ಕಲಾವಿದ

ಶ್ರೀಮನ್ನಿರಂಜನ ಜಗದ್ಗುರು

**ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರು,**

ಶ್ರೀ ತೋಂಟದಾರ್ಯ ಸಂಸ್ಥಾನಮಠ. ಡಂಬಳ–ಗದಗ

ವಿಜಾಪೂರ ಜಿಲ್ಲೆಯ ತಿಕೋಟಾದವರಾದ ಶ್ರೀ ದಾಸಪ್ಪ ಜತ್ತಿ ಅವರು ಅಭಿಜಾತ ಕಲಾವಿದರು. ಪ್ರಾರಂಭದಲ್ಲಿ ಇವರು ನಾಟ್ಯಾಭಿನಯಗಳಲ್ಲಿ ತೊಡಗಿದ್ದರು. ನಂತರ ಪುರಾಣ ಪ್ರವಚನಗಳಂಥ ಸಾಂಸ್ಕೃತಿಕ ರಂಗಕ್ಕೆ ಆಗಮಿಸಿದ್ದು ಒಂದು ಯೋಗಾಯೋಗ.

ಮೊದ ಮೊದಲು ಕೇವಲ ಹಾಸ್ಯ ಪ್ರಧಾನವಾಗಿಯೇ ಇರುತ್ತಿದ್ದ ಅವರ ಕಾರ್ಯಕ್ರಮಗಳು ಬರುಬರುತ್ತ ಭಕ್ತಿ ಪ್ರಧಾನವಾಗಿ ಬದಲಾವಣೆಹೊಂದಿದ್ದು ಒಂದು ಉದಾತ್ತ ಬೆಳವಣಿಗೆಯಾಗಿದೆ. ವಿಷಯ ಲೋಲುಪ್ತತೆಯಲ್ಲಿ ತೊಡಗಿರುವ ಇಂದಿನ ವೈಜ್ಞಾನಿಕ ಮನ್ವಂತರದಲ್ಲಿ ಶ್ರೀ ಜತ್ತಿಯವರಂಥವರ ಅಗತ್ಯ ತುಂಬಾ ಇದೆ.

ಈಗ ೫೫ನೇ ವರ್ಧಂತ್ಯುತ್ಸವ. ಅವರ ಜೀವನದಲ್ಲಿ ಹೊಸ ತಿರುವುಕೊಟ್ಟು ಶ್ರೀ ಜತ್ತಿಯವರು ಹೊಸ ಹುರುಪಿನಿಂದ ಇನ್ನೂ ಹೆಚ್ಚಾಗಿ ಸಮಾಜಕ್ಕೆ ಸೇವೆ ಮಾಡುವಂತಾಗಲಿ ಎಂದು ಈ ಮೂಲಕ ಹಾರೈಸಲಾಗಿದೆ.

# ಶ್ರೇಷ್ಠ ಪ್ರತಿಭಾವಂತ

## ಶ್ರೀ ನಿ.ಪ್ರ. ಮಹಾಂತಸ್ವಾಮಿಗಳು,

ಶ್ರೀಗುರು ಮೃತ್ಯುಂಜಯ ಮಹಾಸ್ವಾಮಿಗಳು, ಶ್ರೀ ಮುರುಘಾಮಠ, ಧಾರವಾಡ

ವಿಜಾಪೂರ ಜಿಲ್ಲೆಯ ತಿಕೋಟಾದವರಾದ ಶ್ರೀಯುತ ದಾನಪ್ಪ ಜತ್ತಿಯವರು ಶ್ರೇಷ್ಠ ಪ್ರತಿಭಾವಂತ ಕಲಾವಿದರು. ಈಗ ಅವರು ೫೪ ವರ್ಷ ತುಂಬುಜೀವನ ಬಾಳಿ ೫೫ನೇ ವರ್ಷದಲ್ಲಿ ಪಾದಾರ್ಪಣೆ ಮಾಡಲಿದ್ದು. ಈ ಸುಸಂದರ್ಭದ ಸವಿನೆನಪಿಗಾಗಿ ಅಭಿನಂದನಾ ಗ್ರಂಥವೊಂದನ್ನು ಪ್ರಕಟಿಸಲಿರುವಿರೆಂದು ತಿಳಿದು ಬಹು ಸಂತೋಷವಾಯಿತು.

ಕಲಾವಿದರನ್ನು ಸಮಯೋಚಿತವಾಗಿ ಗುರುತಿಸಿ ಪ್ರೋತ್ಸಾಹ ನೀಡಿದಲ್ಲಿ ಕಲೆಯು ವಿಕಾಸಗೊಂಡು ಉನ್ನತಿ ಪಡೆಯುವದರಲ್ಲೇನೂ ಸಂದೇಹವಿಲ್ಲ. ಹಿಂದಿನ ಕಾಲದ ರಾಜ-ಮಹಾರಾಜರ ಆಶ್ರಯದಲ್ಲಿ ಕಲೆಗೆ ಸ್ಥಾನಮಾನವಿತ್ತದ್ದೇನೋ ನಿಜ. ಆದರೆ ಈಗಿನ ಕಾಲದಲ್ಲಿ ಸರಕಾರವೂ ಸಮಾಜವೂ ಸೌಹಾರ್ದತೆಯಿಂದ ಕಲೆಯ ಪೋಷಣೆಗೆ ಸಹಾಯ, ಸಹಕಾರ ನೀಡಬೇಕಾದುದು ಅವಶ್ಯವಾಗಿದೆ. ಕಲೆ, ಸಂಸ್ಕೃತಿಗಳೇ ನಾಡಿನ ಹೆಗ್ಗುರುತು.

ಶ್ರೀ ದಾನಪ್ಪ ಜತ್ತಿಯವರು ಇನ್ನೂ ಬಹುಕಾಲ ಬಾಳಿ, ನಾಡಿನ ಕಲಾಕ್ಷೇತ್ರದಲ್ಲಿ ಸೇವೆ ಸಲ್ಲಿಸುವಂತಾಗಲೆಂದೂ ಹಾಗೂ ಅವರ ಕಲಾಪುಷ್ಪ ಸುಗಂಧ ಸೌರಭವು ನಾಡಿನ ತುಂಬೆಲ್ಲ ಸೂಸಲೆಂದೂ ಹಾರೈಸುತ್ತೇವೆ.

ಇತಿ ಮಂಗಲಾಶೀರ್ವಾದಗಳು

# ಹೃದಯ ಗೆದ್ದ ಪ್ರವಚನಕಾರ

**ಪರಮಪೂಜ್ಯ ಶ್ರೀಮನ್ನಿರಂಜನ ಜಗದ್ಗುರು**

**ಪಂಚಮ ಶ್ರೀ ಶಿವಲಿಂಗೇಶ್ವರ ಮಹಾಸ್ವಾಮಿಗಳವರು,**

**ಸಿದ್ಧಸಂಸ್ಥಾನಮಠ, ನಿಡಸೋಸಿ**

ಈ ನಾಡಿನಲ್ಲಿ ಬಹಳಷ್ಟು ಜನ ಪ್ರವಚನಕಾರರು ಆಗಿಹೋಗಿದ್ದಾರೆ. ಹಾಗೆಯೇ ಬರುತ್ತಲೂ ಇದ್ದಾರೆ. ಈ ಪ್ರವಚನದ ಮೂಲ ಉದ್ದೇಶನೆಂದರೆ ಜನರ ಮನವನ್ನು ಧರ್ಮ, ನೀತಿ. ಸಾಹಿತ್ಯಿಕ ಮೌಲ್ಯಗಳ ಕಡೆಗೆ ಪರಿವರ್ತಿಸುವದು. ಪುರಾಣ ಅಥವಾ ಪ್ರವಚನ ಇದು ಒಂದು ಮಾಧ್ಯಮ. ಇದರ ಮುಖಾಂತರವಾಗಿ ಜನರಲ್ಲಿ ಭಕ್ತಿಭಾವವನ್ನು ಹುಟ್ಟಿಸಿ, ಮನಸ್ಸಿಗೆ ಶಾಂತಿ ಸಿಗುವಂತೆ ಮಾಡುವುದೇ ಮೂಲ ಉದ್ದೇಶವಾಗಿದೆ. ಅಂತಹ ಒಂದು ಧರ್ಮಕ್ಕೆ ಸೀಮಿತವಾದ ಈ ಪ್ರವಚನ ಗಳು ಇತ್ತಿತ್ತಲಾಗಿ ಸಾಹಿತ್ಯದ ಮುಖಾಂತರ ಜನಕ್ಕೆ ಮುಟ್ಟಿಸುವ ಅನೇಕ ಜನ ಪ್ರವಚನಕಾರರು ಬರುತ್ತಿದ್ದಾರೆ. ಅಂತಹವರಲ್ಲಿ ಶ್ರೀ ದಾನಪ್ಪ ಜತ್ತಿಯವರೂ ಒಬ್ಬರು.

ಮೊದಮೊದಲು ಹವ್ಯಾಸಿ ನಾಟಕರಂಗದಲ್ಲಿ ಅಭಿನಯಿಸುತ್ತಿದ್ದ ಇವರು ಈಗ ಪ್ರವಚನ ರಂಗಕ್ಕೆ ಬಂದು. ಸುಮಾರು ಎರಡು ದಶಕಗಳಿಂದ ಜನರ ಹೃದಯವನ್ನು ಗೆದ್ದಿದ್ದಾರೆ. ಪ್ರಸ್ತುತ ಇವರ ಪ್ರವಚನ ಅಂದು-ಇಂದಿನ ಸೇತುವೆಯಂತೆ ಕೇವಲ ಧಾರ್ಮಿಕ ಭಾವನೆಗಳಿಗೆ ಸೀಮಿತವಾಗಿರದೇ ಮೂಢನಂಬಿಕೆ. ಅಂಧಶ್ರದ್ಧೆ ಇಂಥವು ಗಳನ್ನು ವೈಜ್ಞಾನಿಕವಾಗಿ ಜನರ ಮನಸ್ಸಿನಿಂದ ತೆಗೆಯುವಂತಹ ಕಾರ್ಯ ಇವರದು. ಇವರ ವಾಣಿಯಿಂದ ಹೊರಹೊಮ್ಮುವ ಹಳಗನ್ನಡ–ನಡುಗನ್ನಡ–ನವ್ಯಗನ್ನಡ, ಭಾವಗೀತೆಗಳು. ರಾಮಾಯಣ ದರ್ಶನದಂತಹ ಕಾವ್ಯಗಳು, ವಚನ ಸಾಹಿತ್ಯದ ಗಂಗ ಸುಲಲಿತವಾಗಿ ಹರಿದುಬರುತ್ತವೆ. ಹೇಳುವ ಶೈಲಿ, ಸಂಗೀತದ ಮಾಧುರ್ಯ. ಶಬ್ದ ಸೌಷ್ಠವ ಇವು ಇವರ ಪ್ರವಚನ ಶೈಲಿಯ ಆಕರ್ಷಣೆಗಳು. ಇವರ ಪ್ರವಚನ ವೆಂದರೆ ಜನತೆಗೊಂದು ಹಬ್ಬ.

ಡಾ. ಕಾವ್ಯಾನಂದರ 'ಶರಣ ಚರಿತಾಮೃತ' ಇವರಿಗೆ ಕಂಠಪಾಠ. ಸಾಮಾನ್ಯ ವಾಗಿ ಸಾಹಿತಿಗಳ, ಸ್ವಾಮಿಗಳ. ಸಾಮಾಜಿಕ ಕಾರ್ಯಕರ್ತರ, ರಾಜಕಾರಣಿಗಳ ಬಗೆಗೆ ಅಭಿನಂದನಾ ಗ್ರಂಥವನ್ನು ಹೊರತರುವುದನ್ನು ಕೇಳಿದ್ದೇವೆ. ನೋಡಿದ್ದೇವೆ. ಆದರೆ ಇಂದು ಕನ್ನಡ ನಾಡಿನ ಉದ್ದಗಲಕ್ಕೂ ಪ್ರವಚನ ಗೈದ ಶ್ರೀ ದಾನಪ್ಪ ಜತ್ತಿ, ತಿಕೋಟಾ ಇವರ ಅಭಿನಂದನಾ ಗ್ರಂಥ ಬರುತ್ತಿರುವುದು ತುಂಬಾ ಸಂತೋಷ. ಈ ಕಾರ್ಯ ಅತ್ಯಂತ ಶ್ಲಾಘನೀಯ. ಶ್ರೀ ಬಸವೇಶ್ವರ ಹಾಗೂ ಶ್ರೀ ದುರ ದುಂಡೀಶ್ವರರು ಆಯುರಾರೋಗ್ಯ ಕೊಟ್ಟು ಕಾಪಾಡಲಿ ಎಂದು ಆಶಿಸುತ್ತೇವೆ.

# ಕರ್ತವ್ಯ ನಿರತ ಸದಾಚಾರಿ

**ಶ್ರೀ ವೇ.ಪಂ. ಡಾ. ಪುಟ್ಟರಾಜ ಕವಿ ಗವಾಯಿಗಳವರು,**
**ಶ್ರೀ ವೀರೇಶ್ವರ ಪುಣ್ಯಾಶ್ರಮ, ಪಂಚಾಕ್ಷರ ನಗರ. ಗದಗ**

"ಸ್ವಧರ್ಮ ನಿರತಂ ನಿತ್ಯಂ ಸ್ತುವಂತ್ಯಪಿ ದಿವೌಕಸಃ"

ಯಾವಾಗಲೂ ತನ್ನ ಧರ್ಮದಲ್ಲಿ ನಿರತನಾದಂಥ ಮನುಷ್ಯನನ್ನು ದೇವತೆಗಳು ಕೂಡ ಕೊಂಡಾಡುತ್ತಾರೆ ಎಂಬ ಸುಭಾಷಿತ ವಚನದಂತೆ ನಮ್ಮ ಶ್ರೀ ದಾನಪ್ಪ ಜತ್ತಿಯವರು ಸತ್‌ಕರ್ತವ್ಯ ನಿರತರು – ಸದಾಚಾರಿಗಳು – ಸಂಪನ್ನರು – ಗುರು ಲಿಂಗ ಜಂಗಮ ಭಕ್ತರು – ನುಡಿಯಂತೆ ನಡೆಯುಳ್ಳವರು ಆಗಿ ಜನರು ಕೊಟ್ಟಷ್ಟರಲ್ಲಿಯೇ ಸಂತೃಪ್ತರಾಗಿ, ಶರಣ ತತ್ತ್ವ ಪ್ರಚಾರಕರಾಗಿ. ಪುರಾಣ ಪ್ರವಚನ ಕಾಯಕವನ್ನು ಕೈಕೊಂಡು ತುಂಬುಜೀವನವನ್ನು ನಡೆಸುತ್ತಿರುವರು. ಇವರೇ ಈಗಿನ ಕಾಲದಲ್ಲಿ ನಿಜವಾದ ಶರಣರು. ಇಂಥ ಶರಣರಿಗೆ ಅಭಿನಂದನೆ ಗ್ರಂಥವನ್ನು ಹೊರತರುವ ಪ್ರಯತ್ನವು ತುಂಬಾ ಶ್ಲಾಘನೀಯವಾದ ವಿಚಾರವು. ಇವರ ಅಭಿನಂದನ ಗ್ರಂಥವು ಲೋಕಕ್ಕೆ ಆದರ್ಶಮಯವಾಗಲೆಂದು ಹಾರೈಸಿ. ಶ್ರೀ ದಾನಪ್ಪ ಶರಣರಿಗೆ ಆಯುರಾರೋಗ್ಯ ಭಾಗ್ಯವನ್ನು ಶಿವನಲ್ಲಿ ಪ್ರಾರ್ಥಿಸುವೆ.

ಓಂ ಸತ್ಯಂ ಶಿವಂ ಸುಂದರಂ.

ಸರ್ವಂ ಭದ್ರಂ ಭೂಯಾತ್.

# ಸರಳ ವ್ಯಕ್ತಿತ್ವ

## ಶ್ರೀ ಮ.ನಿ.ಜ. ಫಕೀರ ಸಿದ್ಧರಾಮ ಮಹಾಸ್ವಾಮಿಗಳು,

### ಶ್ರೀ ಜಗದ್ಗುರು ಫಕೀರೇಶ್ವರ ಸಂಸ್ಥಾನಮಠ, ಶಿರಹಟ್ಟಿ

ಶ್ರೀ ದಾನಪ್ಪ ಜತ್ತಿಯವರು ಸಮ್ಮಿವರು. ಮನೆತನದ ಕಸಬನ್ನು ಬಿಟ್ಟು ಗುರು ಸನ್ನಿಧಿಯಲ್ಲಿ ಕುಳಿತು ಪುರಾಣ – ಪ್ರವಚನ – ಕೀರ್ತನೆಗಳನ್ನು ಮೈಗೂಡಿಸಿ ಕೊಂಡು ಕನ್ನಡ ನಾಡಿನ ತುಂಬ ಸಂಚರಿಸಿ ಧರ್ಮ ಜಾಗ್ರತಿ ಮಾಡುವುದರೊಂದಿಗೆ ಜನರಿಗೆಲ್ಲ ಚಿರಪರಿಚಿತರಾಗಿದ್ದಾರೆ.

ಜತ್ತಿಯವರದು ಸರಳ ಸ್ವಭಾವ. ಅವರಿಂದ ಸಮಾಜಕ್ಕೆ ಇನ್ನೂ ಹೆಚ್ಚಿನ ಸೇವೆ ಮುಟ್ಟಲಿ. ಜತ್ತಿಯವರಿಗೆ ಶ್ರೀ ಜಗದ್ಗುರು ಫಕೀರೇಶ ದೀರ್ಘಾಯುಷ್ಯ ಹಾಗೂ ಸಕಲ ಸೌಭಾಗ್ಯಗಳನ್ನು ಕೊಟ್ಟು ಕಾಪಾಡಲೆಂದು ತುಂಬು ಹೃದಯದಿಂದ ಹರಸುವೆವು.

ಆಶೀರ್ವಾದಗಳು.

# ಅನುಪಮ ಪ್ರವಚನಕಾರ

## ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು
## ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳವರು,
### ಮೂರುಸಾವಿರಮಠ, ಹುಬ್ಬಳ್ಳಿ

ಪುರಾಣ ಪ್ರವಚನ ಬಲ್ಲಿದರಾದ ಶ್ರೀ ದಾನಪ್ಪ ಜತ್ತಿ. ತಿಕೋಟಾ ಅವರಿಗೆ ೫೪ ವರ್ಷ ತುಂಬಿದ ಸಂಸ್ಮರಣೆಯಲ್ಲಿ ಅವರ ಅಭಿಮಾನಿಗಳು ಅಭಿನಂದನಾ ಗ್ರಂಥ ಸಮರ್ಪಿಸುವ ಸಂಗತಿ ತಿಳಿದು ನಮಗೆ ಅತೀವ ಹರ್ಷವೆನಿಸಿದೆ.

ಶ್ರೀ ದಾನಪ್ಪನವರನ್ನು ನಾವು ಬಹುಕಾಲದಿಂದ ಬಲ್ಲೆವು. ಆಧುನಿಕತೆಯ ಹೆಸರಿನಲ್ಲಿ ಪುರಾಣ – ಪ್ರವಚನಗಳ ಬಗೆಗೆ ಜನತೆಯ ಆಸಕ್ತಿ ಕಡಿಮೆಯಾಗುತ್ತಿರುವ ಇಂದಿನ ದಿನಮಾನಗಳಲ್ಲಿ ಶ್ರೀ ಜತ್ತಿಯವರಂತಹ ಅನುಪಮ ಪ್ರವಚನಕಾರರಿಂದ ನಮ್ಮ ಧರ್ಮ. ಸಂಸ್ಕೃತಿಗಳು ಇನ್ನೂ ಕೂಡಾ ಸಮರ್ಥವಾಗಿ ಜನಮನದಲ್ಲಿ ಹಸಿರಾಗಿ ಉಳಿದಿವೆ. ಕೆಲವರು ಸಾಹಿತ್ಯ ರಚನೆ ಮಾಡಬಹುದು. ಆದರೆ ಅದನ್ನು ಜನರ ಮನ – ಮನೆಗಳಿಗೆ ತಲುಪಿಸುವ ಕಾರ್ಯ ಇಂತಹ ಪ್ರವಚನಕಾರರಿಂದ. ಗಮಕಿಗಳಿಂದಲೇ ಮಾತ್ರ ಸಾಧ್ಯ.

ಇಂದು ಪುರಾಣ – ಪ್ರವಚನಗಳನ್ನು ನಿರ್ವಹಿಸುವದು ಎಷ್ಟೊಂದು ಕಷ್ಟದಾಯಕವೆಂಬುದು ನಮಗೆ ಅನುಭವವಾಗಿದೆ. ಈ ತರಹದ ಕಾರ್ಯಕ್ರಮಕ್ಕೆ ಕೇಳುಗರೇ ಅಷ್ಟಿ. ಆದರೆ ಅವರನ್ನು ಆಧುನಿಕ ಮಾಧ್ಯಮಗಳಿಂದ ಇತ್ತ ಕರೆತರುವ ಆಕರ್ಷಣೆ ಶ್ರೀ ಜತ್ತಿಯವರಂತಹವರಿಂದ ಮಾತ್ರ ಸಾಧ್ಯ ! ನಾವು ಜತ್ತಿಯವರ ಹಲವಾರು ಪುರಾಣ – ಪ್ರವಚನ – ಉಪನ್ಯಾಸಗಳನ್ನು – ಸಂಗೀತ ಕಾರ್ಯಕ್ರಮಗಳನ್ನು ಕೇಳಿದ್ದೇವೆ. ಅವರ ಮಾತಿನ ಶೈಲಿ. ನವಿರಾದ ಹಾಸ್ಯಗಳು ಸದಾ ಜನಮನವನ್ನು ಗೆದ್ದಿವೆ. ಶ್ರೀ ದಾನಪ್ಪನವರು ಸತತಾಭ್ಯಾಸಿಗಳು. ಅಂತೆಯೇ ಅವರ ಕಾರ್ಯಕ್ರಮಗಳು ಸದಾ ಹೊಸತನದಿಂದ ಕೂಡಿರುತ್ತವೆ. ಅವರು ಒಳ್ಳೆಯ ಬರಹಗಾರರೂ ಹೌದು. ಇತ್ತೀಚೆಗೆ ಅವರ ರೇಡಿಯೋ ಕೀರ್ತನೆಗಳೂ ಸುಂದರವಾಗಿ ಮೂಡಿಬಂದಿವೆ.

ಎಲೆಯ ಮರೆಯ ಹೂವಿನಂತಿದ್ದುಕೊಂಡು ಸದಾಕಾಲ ಧರ್ಮ. ಸಂಸ್ಕೃತಿಯ ಪ್ರಚಾರಕರಾಗಿರುವ ಶ್ರೀ ದಾನಪ್ಪ ಜತ್ತಿಯವರಿಗೆ ಕರ್ತೃ ಜಗದ್ಗುರು ಶ್ರೀ ಗುರು ಸಿದ್ಧೇಶ್ವರರು ಆಯುರಾರೋಗ್ಯ ಭಾಗ್ಯವನ್ನು ದಯಪಾಲಿಸಲೆಂದು ನಾವು ಸದಮಲಾಂತಃಕರಣದಿಂದ ಹಾರೈಸುತ್ತೇವೆ.

# ಆದರ್ಶ ಸಾಧಕ - ಅನುಪಮ ಬೋಧಕ

**ಶ್ರೀ ಷ.ಬ್ರ. ಬಸವಲಿಂಗಸ್ವಾಮಿಗಳು,**
**ಹಿರಿಯಮಠ ಪಟ್ಟಾಧ್ಯಕ್ಷರು, ತೆಲಸಂಗ (ಬೆಳಗಾವಿ ಜಿಲ್ಲೆ)**

ಇದೀಗ ಬರೆಯುವುದು ದಾನಪ್ಪ ಜತ್ತಿಯವರ ಅಭಿನಂದನಾ ಗ್ರಂಥಕ್ಕೆ ಆಶೀರ್ವಚನ. ಆದ್ಯರ ವಚನಗಳನ್ನು ಪಠಣ ಮಾಡಿಕೊಂಡು ನಡೆ-ನುಡಿಗಳಲ್ಲಿ ಸಾಮರಸ್ಯವನ್ನು ಸಾಧಿಸಿದ ಆದರ್ಶ ಸಾಧಕ. ಅನುಪಮ ಬೋಧಕ ದಾನಪ್ಪನವರು.

"......ಅಧರಕ್ಕೆ ಕಹಿ, ಉದರಕ್ಕೆ ಸಿಹಿ ಕೂಡಲಸಂಗನ ಶರಣರ ವಚನ ಜೀವ ಸವಿದಂತೆ". ಅಧರಕ್ಕೆ ಕಹಿ, ಉದರಕ್ಕೆ ಸಿಹಿ ಹಲವು. ಅಧರಕ್ಕೆ ಸಿಹಿ. ಉದರಕ್ಕೆ ಕಹಿ ಕೆಲವು. ಅಧರೋದರಗಳಿಗೆ ಕಹಿ – ಹಲಕೆಲವು. ಅಧರ – ಉದರಗಳಿಗೆ ಮಧುರವಾದುದು ಅತಿದುರ್ಲಭ. ಇದನ್ನೇ ಕಾಳಿದಾಸನು "ಹಿತಂ ಮನೋಹಾರಿಚ ದುರ್ಲಭಂ ವಚಃ" ಎಂದು ಹೇಳಿರುವನು.

ಆಧ್ಯಾತ್ಮ ಸಾಹಿತ್ಯವೆಂಬುದು ಪರಿಣಾಮದಲ್ಲಿ ಅಮೃತೋಪಮವಾದರೂ ಪ್ರಾರಂಭದಲ್ಲಿ ವಿಷೋಪಮ. ಕೇಳದಂತೆ ಅತಿ ಕಠಿಣವಾದ ಆಧ್ಯಾತ್ಮ ಸಾಹಿತ್ಯವನ್ನು ಸಹ ಅಸದೃಶ್ಯ ಹಾಸ್ಯ ರಸದ ಮೂಲಕ ಶ್ರೀ ದಾನಪ್ಪನವರು ದ್ರಾಕ್ಷಾಪಾಕದಂತೆ ಸುಲಭವಾಗಿ ಉಣಿಸುವ ನೀಡುಗರಿವರು.

ಶ್ರೀ ದಾನಪ್ಪನವರ ತಾಯ್ತಂದೆಗಳು ಧರ್ಮಾಭಿಮಾನಿಗಳು; ಜಂಗಮಪ್ರೇಮಿಗಳು. ಭಕ್ತಿ, ಜ್ಞಾನ, ಕ್ರಿಯೆ ಈ ತ್ರಿವೇಣಿ ಸಂಗಮದಲ್ಲಿ ಮಿಂದು ಮಡಿಯುಟ್ಟವರು. ಅವರು ತೋರಿದ ಭಕ್ತಿ ಪಥದಲ್ಲಿಯೇ ಪಾದಾರ್ಪಣೆ ಮಾಡಿದ ಪ್ರವಚನ ಪ್ರಭಾಕರ ಶ್ರೀ ದಾನಪ್ಪನವರ ಸರಸ ವಾಙ್ಮಯ ಗಂಗಾಪ್ರವಾಹವು ನಾಡ ಮುಮುಕ್ಷುಗಳನ್ನೇ ಉದ್ಧರಿಸಲಿ. ಹಾಗೂ ಅವರಿಗೆ ದೇವರು ಸಕಲ ಶ್ರೇಯೋಭಿವೃದ್ಧಿಯನ್ನೇ ಕರುಣಿಸಲಿ ಎಂದು ತುಂಬುಹೃದಯದಿಂದ ಆಶಿಸುತ್ತೇನೆ.

# ಅಪ್ಪಟ ಬಸವನಿಷ್ಠ

**ಶ್ರೀ ನಿ.ಪ್ರ. ಮಹಾಂತಸ್ವಾಮಿಗಳವರು,**
ಚಿತ್ತರಗಿ ಸಂಸ್ಥಾನಮಠ, ಇಲಕಲ್ಲ

ಕೆರೆ ಹಳ್ಳಗಳು ಬ್ಬೈದೆಗೆದರೆ
ಗೊಳ್ಳಿ ಗೊಂಜೆ ಚಿಪ್ಪುಗಳ ಕಾಣಬಹುದು
ವಾರಿಧಿಯು ಬ್ಬೈದೆಗೆದರೆ
ಮುತ್ತು–ರತ್ನಗಳ ಕಾಣಬಹುದು
ನಮ್ಮ ಕೂಡಲಸಂಗನ ಶರಣರು ಮನದೆಗೆದು
ಮಾತನಾಡಿದರೆ ಲಿಂಗವ ಕಾಣಬಹುದು

ಎಂಬ ಅಪ್ಪ ಬಸವಣ್ಣನವರ ದಿವ್ಯವಾಣಿಯಂತೆ, ಭವ್ಯ ಬದುಕನ್ನು ಹೊಂದಿ ತಮ್ಮ ಪುರಾಣ ಪ್ರವಚನ, ಕೀರ್ತನಗಳಿಂದ ನಾಡಿನ ನೂರಾರು ಹಳ್ಳಿ–ಪಟ್ಟಣಗಳಲ್ಲಿ ಜನ ಮನದ ಕಣ್ಮಣಿಯಾಗಿರುವ ಶ್ರೀಯುತ ದಾನಪ್ಪ ಜತ್ತಿಯವರು ಅಪ್ಪಟ ಬಸವ ನಿಷ್ಠರು, ತತ್ವಾನ್ವೇಷಕರು. ಬಸವ ಪ್ರೀತಿಯ ಸಮೀಪವರ್ತಿಗಳು. ಮೇಲಾಗಿ ವಾಗ್ಮಿಗಳು. ಸಾರ್ಥಕ ಬದುಕಿನ ಇಂಥ ಮಹಾನ್ ಪ್ರತಿಭಾವಂತ ಶರಣ ಶ್ರೀಯುತ ದಾನಪ್ಪ ಜತ್ತಿಯವರಿಗೆ, ಅವರ ಸಾರ್ಥಕ ಸೇವೆಗೆ ಸಂದ ಗೌರವವೆಂದು ಅರ್ಪಿಸುತ್ತಿರುವ ಅಭಿನಂದನಾ ಗ್ರಂಥ ಕಾಣಿಕೆ ನಿಜವಾಗಿಯೂ ಎಲ್ಲರೂ ಅಪ್ಪಿ ಕೊಳ್ಳುವಂಥದ್ದೇ।

ಇಂಥ ಪುರಸ್ಕಾರಕ್ಕೆ ಪಾತ್ರರಾಗಿರುವ ಶ್ರೀಯುತ ದಾನಪ್ಪ ಜತ್ತಿಯವರಿಗೆ ಅಪ್ಪ ಬಸವಣ್ಣ ಆಯುಷ್ಯ, ಆರೋಗ್ಯ, ಸದ್ಬುದ್ಧಿಯನ್ನು ಕೊಟ್ಟು ಕಾಪಾಡಲಿ ಎಂದು ಹೃದಯಾರೆ ಹಾರೈಸುತ್ತೇವೆ।

## ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ಡಾ. ಜ.ಚ.ನಿ.

ಶ್ರೀಶೈಲ ನಿಡುಮಾಮಿಡಿ, ನಿಜಾನುಭಾವ ನಿವಾಸ,

೪೯, ಬಸವನಗುಡಿ, ಬೆಂಗಳೂರು-೪

ಶ್ರೀ ದಾನಪ್ಪ ಜತ್ತಿ ಅವರಿಗೆ ಅಭಿನಂದನ ಗ್ರಂಥವನ್ನು ಅರ್ಪಿಸುತ್ತಿರುವುದು ಸಂತೋಷದ ವಿಚಾರ. ಇದು ಸೂಕ್ತವೂ ಕೂಡಾ. ದಾನಪ್ಪನವರು ಸ್ವಯಂ ಸಾಹಸಿಗಳು, ಪ್ರತಿಭಾವಂತರು. ಪ್ರವಚನ – ಪುರಾಣ – ಕೀರ್ತನ ಕುಶಲರು. ಈ ಕಲೆಗಳು ಅವರಿಗೆ ಕರಗತವಾಗಿ ಸಾಮಾಜಿಕರ, ಸಾರ್ವಜನಿಕರ ಸೇವೆ ನಿಡುಗಾಲ ಸಲ್ಲಿಸುತ್ತಾ ಬಂದಿದ್ದಾರೆ. ಅವರನ್ನು ನಾವು ತುಂಬಾ ಬಲ್ಲೆವು. ದಾನಪ್ಪನವರು ನಮ್ಮ ಕರಕಂಜಸಂಜಾತರು.

ಅವರ ಕೀರ್ತಿವಲ್ಲರಿ ಅನುಗಾಲವೂ ಹಚ್ಚುಹಸಿರಾಗಿ ಕಂಗೊಳಿಸಲಿ.

# ಶರಣ ಚರಿತೆಯ ಸುಗಂಧ

## ಡಾ. ಸಿದ್ಧಯ್ಯ ಪುರಾಣಿಕ

"ಶರಣ ಚರಿತಾಮೃತ"ದ ಮೂರನೆಯ ಮುದ್ರಣ ಇಷ್ಟರಲ್ಲಿಯೇ ಪ್ರಕಟವಾಗಲಿದೆ. ಸಕಾಲಕ್ಕೆ ಹೊಸ ಮುದ್ರಣಗಳು ಹೊರಬೀಳುತ್ತ ಬಂದಿದ್ದರೆ ಅದರ ಇನ್ನೂ ಎರಡು ಮೂರು ಆವೃತ್ತಿಗಳು ಪ್ರಕಟವಾಗುತ್ತಿದ್ದುವೆಂದು ಧಾರಾಳವಾಗಿ ಹೇಳಬಹುದು.

ಅದರ ಈ ಜನಪ್ರಿಯತೆಗೆ ಅದು ಒಳಗೊಂಡಿರುವ ಶರಣರ ಚರಿತ್ರೆಗಳು ಕಾರಣವಾಗಿರುವಂತೆ ಕಲಾಶ್ರೀ ದಾನಪ್ಪ ಜತ್ತಿ ಅವರ ಪ್ರೇಮ ಶ್ರಮವೂ ಕಾರಣವಾಗಿದೆಯೆಂದು ಪ್ರಾಂಜಲ ಮನಸ್ಸಿನಿಂದ ಒಪ್ಪಿಕೊಳ್ಳುತ್ತೇನೆ. ಇಷ್ಟೊಂದು ಆ ಕೃತಿಯನ್ನು ಹಚ್ಚಿಕೊಂಡ ಇನ್ನೊಬ್ಬರನ್ನು ನಾನು ಕಂಡಿಲ್ಲ. ಅದನ್ನವರು ತಮ್ಮ ಜೀವನದ ಜೊತೆಗಾರನನ್ನಾಗಿ ಮಾಡಿಕೊಂಡುಬಿಟ್ಟಿದ್ದಾರೆ. ಅದರ ಪ್ರವಚನವನ್ನು ನೂರಾರು ಊರುಗಳಲ್ಲಿ ಮಾಡಿ, ನೂರೆತ್ತುಗಳ ಬಂಡಿಯಲ್ಲಿ ಅದರ ಮೆರವಣಿಗೆ ಜರುಗುವಂತೆ ಮಾಡಿದ್ದಾರೆ. ತತ್ಪರಿಣಾಮವಾಗಿ ಅನೇಕ ಪ್ರತಿಷ್ಠಿತ ಮಠಗಳಲ್ಲಿ, ಶ್ರಾವಣಮಾಸದಲ್ಲಿ 'ಶರಣ ಚರಿತಾಮೃತ'ದ ಪ್ರವಚನಗಳು ಏರ್ಪಡುತ್ತವೆ. ಇದೀಗ ಕೈಸೇರಿದ 'ಶಾಂತಿಕಿರಣ' ಮಾಸಪತ್ರಿಕೆಯಲ್ಲಿ ಭಾಲ್ಕಿ ಹಿರೇಮಠದ ಉತ್ತರಾಧಿಕಾರಿಗಳಾದ ಪೂಜ್ಯಶ್ರೀ ಮ.ಘ.ಚ. ಬಸವಲಿಂಗ ಪಟ್ಟದದೇವರು ಈ ಸಲ ಶ್ರಾವಣಮಾಸದಲ್ಲಿ ಒಂದುತಿಂಗಳವರೆಗೆ ಅಖಂಡವಾಗಿ ಡಾ. ಸಿದ್ಧಯ್ಯ ಪುರಾಣಿಕರ "ಶರಣ ಚರಿತ್ರಾಮೃತ" ಕುರಿತು ಪ್ರವಚನ ಮಾಡಿದರೆಂದು ಪ್ರಕಟವಾಗಿದೆ.

ಇವರು ಶರಣ ಚರಿತಾಮೃತಕ್ಕಾಗಿಯೇ ವಿನೂತನ ಪ್ರವಚನ ಶೈಲಿಯೊಂದನ್ನು ರೂಪಿಸಿಕೊಂಡಿರುವುದು ಎಲ್ಲೆಡೆಗೆ ಅದರ ಪ್ರವಚನಕ್ಕಾಗಿ ಇವರನ್ನೇ ಆಹ್ವಾನಿಸುವುದಕ್ಕೆ ಮುಖ್ಯ ಕಾರಣವಾಗಿದೆ. ಅದರ ವಾಕ್ಯ ವಾಕ್ಯವನ್ನು ಅರಗಿಸಿಕೊಂಡಿರುವ ಇವರು ಅಸಂದಿಗ್ಧವಾಗಿ, ಮನೋಹರವಾಗಿ, ಸಂಗೀತದ ಸಹಗೂಡಿಸಿ ತನ್ಮಯತೆಯೊಡನೆ ಪ್ರವಚನ ಮಾಡುವುದರಿಂದ ಶ್ರೋತೃಗಳು ಮುಗ್ಧರಾಗಿ ಮೈಮರೆಯುತ್ತಾರೆ.

ಇಂಥವರಿಗೆ ಅಭಿನಂದನ ಗ್ರಂಥ ಸಮರ್ಪಿಸಲಿರುವುದು ಸರ್ವಥಾ ಸಮರ್ಥನೀಯವಾದುದು. ಶರಣರ ಕರುಣೆಯಿಂದ ಶ್ರೀ ದಾನಪ್ಪ ಜತ್ತಿಯವರು ನೂರ್ಕಾಲ ನಿರೋಗಿಗಳಾಗಿ ಬಾಳಿ ಶರಣ ಚರಿತೆಯ ಸುಗಂಧವನ್ನು ಸುತ್ತಲೂ ಪಸರಿಸುತ್ತಿರಲಿ ಎಂದು ಹಾರೈಸುತ್ತೇನೆ.

## ಶ್ರೀ ಮ.ನಿ.ಪ್ರ. ಜಗದ್ಗುರು ಅನ್ನದಾನೇಶ್ವರ ಮಹಾಸ್ವಾಮಿಗಳು,

ಸಂಸ್ಥಾನಮಠ, ಮುಂಡರಗಿ

ಮಂಡೆ ಮಾಸಿದಡೆ ಮಹಾ ಮಜ್ಜನವ ಮಾಡುವದು
ವಸ್ತ್ರ ಮಾಸಿದಡೆ ಮಡಿವಾಳರಿಗಿಕ್ಕುವುದು
ಮನದ ಮೈಲಿಗೆ ತೊಳೆಯಬೇಕಾದಡೆ
ಕೂಡಲ ಚೆನ್ನಸಂಗಯ್ಯನ ಶರಣರ ಅನುಭಾವವ ಮಾಡುವದು

ಮಂಡೆಯೆಂದರೆ – ಮಸ್ತಕ ಅಥವಾ ತಲೆ. ತಲೆಯ ಕೂದಲು ಜಿಡ್ಡುಗಟ್ಟಿದರೆ ಮಹಾ ಮಜ್ಜನ ಮಾಡುತ್ತಾರೆ. ಅರ್ಥಾತ್ ಎಣ್ಣೆಹಚ್ಚಿ ಸೀಗೆಕಾಯಿ ಪುಡಿ, ಸಬಕಾರ ಗಳನ್ನು ಉಪಯೋಗಿಸಿ ಬಿಸಿನೀರು ಹಾಕಿಕೊಳ್ಳುವರು. ಇದರಿಂದ ತಲೆ ಮತ್ತು ಶರೀರ ಸ್ವಸ್ಥವಾಗುತ್ತದೆ. ಜಡತ್ವ ಹೋಗಿ ಆರಾಮವೆನಿಸುವುದು. ಅದರಂತೆ ಶರೀರದಮೇಲೆ ಇರುವ ವಸ್ತ್ರಗಳು ಹೊಲಸಾದಾಗ ಮಡಿವಾಳರಿಗೆ ಕೊಡುತ್ತಾರೆ. ಅಥವಾ ಸಾಬೂನು ಹಚ್ಚಿ ತಾವಾದರೂ ತೊಳೆಯಬಹುದು. ಶರೀರ ಹಾಗೂ ಶರೀರದ ಮೇಲಿನ ಬಟ್ಟೆಗಳನ್ನು ಸಾಬೂನು, ನೀರುಗಳಿಂದ ಸ್ವಚ್ಛಗೊಳಿಸಬಹುದು. ಆದರೆ ಶರೀರದೊಳಗಿರುವ ಮನಸ್ಸು ವ್ಯಸನಗಳಿಂದ ಮಲಿನವಾದರೆ ಸಬಕಾರ, ನೀರು ಸ್ವಚ್ಛಗೊಳಿಸಲಾರವು. ಬಾಹ್ಯ ಯಾವ ವಸ್ತುವಿನಿಂದ ಮನಸ್ಸಿನ ಮೈಲಿಗೆ ಹೋಗುವುದಿಲ್ಲ. ಮನಸ್ಸಿನ ಮಾಲಿನ್ಯವನ್ನು ಕಳೆಯಲು ಒಂದೇ ಒಂದು ಸಾಧನ ಅದು ಶಿವಶರಣರ ಅನುಭವದ ಜ್ಞಾನವೊಂದೇ! ಅನುಭಾವ, ಆಧ್ಯಾತ್ಮಿಕ ಸಂಪತ್ತು. ಭೂಮಿ–ಹೇಮ–ಕಾಮಿನಿಯರು ಲೌಕಿಕ ಸಂಪತ್ತು. ಇದು ನಶ್ವರವಾದುದು. ಕಾರಣ ಅನುಭವ ಸಂಪತ್ತನ್ನು ಸಾಧಿಸಬೇಕು, ಸಂಪಾದಿಸಬೇಕು. ಅನುಭವ ಜನ್ಯ ವಾದ ಅನುಭಾವವನ್ನು ಕುರಿತು ಚೆನ್ನಬಸವಣ್ಣನವರ ಇನ್ನೊಂದು ವಚನವನ್ನು ನೋಡಬಹುದು :

ಅನುಭಾವ ಅನುಭಾವವೆಂದೆಂಬಿರಿ
ಅನುಭಾವವೆಂಬುದು ನೆಲದ ಮರೆಯ ನಿಧಾನ ಕಾಣಿಭೋ !
ಅನುಭಾವವೆಂಬುದು ಶಿಶು ಕಂಡ ಕನಸು ಕಾಣಿಭೋ !
ಅನುಭಾವವೆಂಬುದು ಅಂತರಂಗದ ರತ್ನ ಕಾಣಿಭೋ !
ಅನುಭಾವವೆಂಬುದು ರಚ್ಚೆಯ ಮಾತೆ ?
ಅನುಭಾವವೆಂಬುದು ಸಂತೆಯ ಸುದ್ದಿಯೆ ?

ಅನುಭಾವವೆಂಬುದು ಬೀದಿಯ ಪಸರವೆ ?
ಏನೆಂಬೆ ಹೇಳಾ ಮಹಾ ಘನವನು ?
ಆನೆಯ ಮಾನದೊಳಿಕ್ಕಿದಡಡಗುವುದೆ ದರ್ಪಣದೊಳಡಗುವುದಲ್ಲದೆ ?
ಕಂಡಕಂಡಲ್ಲಿ ಗೋಷ್ಠಿ, ನಿಂದನಿಂದಲ್ಲಿ ಅನುಭಾವ
ಬಂದಬಂದಲ್ಲಿ ಪ್ರಸಂಗವ ಮಾಡುವ
ಪಾತಕರ ತೋರದಿರಯ್ಯ ಕೂಡಲ ಚೆನ್ನಸಂಗಮದೇವಾ

ಅನುಭಾವವೆಂಬುದು ಭೂಮಿಯ ಒಳಗೆ ಅಡಗಿರುವ ಸಂಪತ್ತಿನಂತೆ. ಶಿಶು ಕಂಡ ಕನಸಿನಂತೆ ಅವ್ಯಕ್ತವಾಗಿದೆ. ಅದು ಅಂತರಂಗದ ರತ್ನ. ಅನುಭಾವವು ಹರಟೆಯ ಮಾತಲ್ಲ. ಸಂತೆಯ ಸುದ್ದಿಯೂ ಅಲ್ಲ. ಬೀದಿಗಳಲ್ಲಿ ಒದರುವ ಜಾಹೀರಾತವೂ ಅಲ್ಲ. ಅನುಭಾವದ ಘನತೆಯನ್ನು ಹೇಳಲಿಕ್ಕಾಗುವುದಿಲ್ಲ. ಅದನ್ನು ಅಂತರಂಗದಲ್ಲಿ ಅನುಭವಿಸಿ ಆನಂದಿಸಬೇಕಷ್ಟೇ ! ಆನೆಯನ್ನು ಅಳತೆಯ ಸೇರಿನಲ್ಲಿ ಹಿಡಿದಿರಿಸಲಿಕ್ಕಾಗದು. ಆದರೆ ಅವನ್ನು ಕನ್ನಡಿಯೊಳಗೆ ಹಿಡಿಯಬಹುದು. ಅದು ಕಾರಣ ಅನುಭಾವಕ್ಕೆ ಮಾರುಹೋದ ದೇವರದಾಸಿಮಯ್ಯನು,

ಕರಿಯನಿತ್ತಡೆ ಒಲ್ಲೆ, ಸಿರಿಯನಿತ್ತಡೆ ಒಲ್ಲೆ
ಹಿರಿದಪ್ಪ ರಾಜ್ಯವನಿತ್ತಡೆ ಒಲ್ಲೆ
ನಿಮ್ಮ ಶರಣರ ಸೂಳ್ನುಡಿಯ
ಒಂದರಗಳಿಗೆ ಇತ್ತಡೆ ನಿಮ್ಮನಿತ್ತೆ ಕಾಣಾ ರಾಮನಾಥ

ಎಂದಿರುವನು. ಆನೆ ಸಂಪತ್ತು, ಧನ – ಕನಕಾದಿ ಸಂಪತ್ತು ಅಷ್ಟೆ ಏಕೆ ? ಹಿರಿದಾದ ರಾಜ್ಯ ಸಂಪತ್ತು. ಅನುಭಾವ ಸಂಪತ್ತಿಗೆ ಸಾಟಿಯಾಗಲಾರದು. ಶಿವಶರಣರ ಸೂಳ್ನುಡಿಯ ಸಂಪತ್ತಿನಲ್ಲಿ ಶಿವನ ಸಾಕ್ಷಾತ್ಕಾರವಾಗುವದು. ಅಂಥ ಅನುಭವ ಸಂಪತ್ತನ್ನು ಅಳವಡಿಸಿಕೊಂಡು ಶಿವಾನುಭಾವಿಯಾಗಿ ಸಮಾಜದ ಜನತೆಯಲ್ಲಿರುವ ಅಜ್ಞಾನವನ್ನು ಕಳೆಯಲು ಸತತ ಶ್ರಮಿಸುತ್ತಿರುವ ದಾನಪ್ಪ ಜತ್ತಿಯವರ ಜೀವನ ಧನ್ಯವೆಂದೇ ಹೇಳಬೇಕು. ಕಳೆದ ಮೂರು ದಶಕಗಳ ಮೇಲೆ ಅನುಭವ ಸಂಪತ್ತಿನ ಸಂಗ್ರಹ ಹಾಗೂ ವಿತರಣೆ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ, ಶಿವಾನುಭವಿಯೆನಿಸಿದ್ದಾರೆ.

ಶಿವಯೋಗಮಂದಿರ ಆಧ್ಯಾತ್ಮಿಕ ಕೇಂದ್ರ. ನಿಸರ್ಗದ ಮಡಿಲಲ್ಲಿ, ಮಲಾಪಹಾರಿಯ ದಡದಲ್ಲಿ ವಟು ಸಾಧಕರಿಗೆ ಧಾರ್ಮಿಕ ಶಿಕ್ಷಣವನ್ನು ನೀಡುತ್ತಿರುವ ಶಿವಯೋಗಮಂದಿರ ಜಾತ್ರೆಗೆ ಅದೇ ತಾನೆ ದಾನಪ್ಪ ಜತ್ತಿಯವರು ಪ್ರವಚನಕಾರರಾಗಿ ಆಗಮಿಸಿದ್ದರು. ಪರಮಪೂಜ್ಯ ಹಾನಗಲ್ಲ ಸದಾಶಿವ ಮಹಾಸ್ವಾಮಿಗಳ ಸನ್ನಿಧಿಯಲ್ಲಿ ಕಾರಣಿಕ ಯುಗಪುರುಷರೂ, ಶಿವಯೋಗಮಂದಿರ ಸಂಸ್ಥಾಪಕರು

ಆದ ಶ್ರೀ ಕುಮಾರ ಶಿವಯೋಗಿಗಳ ಪುಣ್ಯಾರಾಧನೆಯ ಅಂಗವಾಗಿ ಶಿವಾನುಭವ ಗೋಷ್ಠಿ ಜತ್ತಿಯವರಿಂದ ಪ್ರಾರಂಭವಾಗಿತ್ತು. ಸರಳ ಮತ್ತು ಸುಂದರ ಶೈಲಿಯಲ್ಲಿ ತಿಮ್ಮನ ಕಥೆಗಳೊಂದಿಗೆ ಜತ್ತಿಯವರ ಶಿವಾನುಭವ ಪಟು ಸಾಧಕರಿಗೆ ಸಂತಸವನ್ನು ನೀಡಿತು. ಜ್ಞಾನ ದಾಸೋಹ ಮಾಡುವ ಶಿವಯೋಗಮಂದಿರ ಸಂಸ್ಥೆಯ ಪವಿತ್ರ ವಾತಾವರಣ ಜತ್ತಿಯವರ ಜೀವನವಲ್ಲಿ ಹೊಸ ಬೆಳಕನ್ನು ಬೀರಿತು. ಪೂಜ್ಯ ಸದಾಶಿವ ಮಹಾಸ್ವಾಮಿಗಳು – ಪ್ರವಚನ ಕಲೆಯನ್ನು ಕಂಡು ಉತ್ತಮ 'ಶಿವಾನುಭವಿ' ಆಗೆಂದು ಹರಸಿದರು. ಶಿವಯೋಗಿಯ ನುಡಿ ಇಂದು ಸಾರ್ಥಕ ವಾಗಿದೆ.

ಶಿವಯೋಗಮಂದಿರ ಸಂಸ್ಥೆಯು ಪರುಷಮಣಿ ಇದ್ದಂತೆ. ಪರುಷಮಣಿ ಅದೆಂಥ ಕಬ್ಬಿಣವನ್ನಾಗಲಿ ತನ್ನ ಸ್ಪರ್ಶನದಿಂದ ಹೊನ್ನಾಗಿಸುವಂತೆ ಈ ಸಂಸ್ಥೆಯ ನೆರಳಲ್ಲಿ, ಶ್ರೀ ಕುಮಾರೇಶನ ಆಶ್ರಯದಲ್ಲಿ ಅನೇಕ ಜನರು ರೂಪುಗೊಂಡು ಸಮಾಜಕ್ಕೆ ಅತ್ಯುಪಯುಕ್ತ ಕಲಾಕಾರರು ಆಗುತ್ತಬಂದಿದ್ದಾರೆ. ಜನ್ಮಾಂಧರಾದ ಪಂ. ಪಂಚಾಕ್ಷರ ಗವಾಯಿಗಳು ಶ್ರೀ ಕುಮಾರೇಶನ ಕರುಣೆಗೆ ಪಾತ್ರರಾದರು. ಇವರ ಮುಖಾಂತರ ಕೀರ್ತನಕಾರರು, ಪುರಾಣಿಕರು, ಸಂಗೀತಗಾರರು, ನಾಟಕಕಾರರು. ನಾಟ್ಯಕಲಾವಿದರು ಮತ್ತು ಪ್ರವಚನಕಾರರು ರೂಪುಗೊಂಡಿದ್ದಾರೆ. ತಮ್ಮ ಜೀವನ ವನ್ನು ಪಾವನಗೊಳಿಸಿಕೊಂಡುದಲ್ಲದೆ ಸಮಾಜದಲ್ಲಿ, ಧರ್ಮ ಪ್ರಸಾರ ಕಾರ್ಯದಲ್ಲಿ ತಮ್ಮನ್ನು ಅರ್ಪಿಸಿಕೊಂಡಿದ್ದಾರೆ. ಈ ದೆಸೆಯಲ್ಲಿ ಶಿವಯೋಗ ಮಂದಿರದಿಂದ ಹಾನಗಲ್ಲ ಶ್ರೀಗಳವರ ಆಶೀರ್ವಾದ ಪಡೆದ ದಾನಪ್ಪ ಜತ್ತಿಯವರು ಅತ್ಯುತ್ತಮ ಕಲಾವಿದರಾಗಿದ್ದಾರೆ. ಶರಣರ ಚರಿತ್ರೆಗಳನ್ನು ಜನಗ ಮನಮುಟ್ಟುವಂತೆ ಕೀರ್ತನ, ಪ್ರವಚನ, ಪುರಾಣಗಳಿಂದ ತಿಳಿಸಿ ಪ್ರಸಿದ್ಧರಾಗಿದ್ದಾರೆ. ನಾಡಿನುದ್ದಗಲಕ್ಕೂ ಸಂಚರಿಸಿ ಶಿವಾನುಭವ ಸೇವೆಗೈದಿದ್ದಾರೆ.

ಇವರು ದಿ. ೩೧–೮–೯೨ಕ್ಕೆ ೫೫ನೇ ವಸಂತದಲ್ಲಿ ಕಾಲಿಡುತ್ತಿರುವಾಗ ಅಭಿಮಾನಿಗಳು, ಸಮಾಜದ ನಾಗರಿಕರು ಅಭಿನಂದನ ಗ್ರಂಥವನ್ನು ಸಲ್ಲಿಸಿ, ಮಾಡಿ ದವರ ಉಪಕೃತಿಯನ್ನು ಸ್ಮರಿಸುವುದು ಸತ್ಪರಂಪರೆಯೆಂದೇ ಹೇಳಬೇಕು. ಇದು ಸ್ತುತ್ಯ ಸಂಗತಿ. ಬದುಕಿನ ಹತ್ತು ಹಲವಾರು ರಂಗಗಳಲ್ಲಿ ದಾನಪ್ಪನವರು ತಮ್ಮನ್ನು ತಾವು ತೊಡಗಿಸಿಕೊಂಡು ಸಮಾಜ ಸೇವೆ ಗೈದಿದ್ದಾರೆ. ಇವರಿಗೆ ಶ್ರೀ ಮಹಾ ಶಿವಯೋಗಿಯು ಪೂರ್ಣಾಯುಷ್ಯವನ್ನು ದಯಪಾಲಿಸಿ ಇನ್ನೂ ಇವರಿಂದ ಜ್ಞಾನ ಪ್ರಸಾರ ಮಾಡಿಸಲೆಂದು ಹೃದಯಾರೆ ಹರಸುತ್ತೇವೆ. ಅಭಿಮಾನಿಗಳ ಈ ಕಾರ್ಯ ಯಶಸ್ವಿಯಾಗಲೆಂದು ಆಶಿಸುತ್ತೇವೆ.

# ಸೃಜನಶೀಲ ಕಲಾವಿದ

## ಸಂಗಪ್ಪ ಹೂಗಾರ

ದಾನಪ್ಪನವರ ಕೀರ್ತನೆ ಹಾಗೂ ಪುರಾಣ. ಪ್ರವಚನಗಳನ್ನು ಕೇಳಿದರೆ ಸಣ್ಣ ಹುಡುಗರೂ ಕಿವಿ ಹಿಗ್ಗಿಸುತ್ತಾರೆ. ಅಷ್ಟು ಪೋಷಕ. ರೋಚಕ ಅವರ ಕಲೆ. ಸಂದರ್ಭಕ್ಕೆ ತಕ್ಕ ಹಾವಭಾವ, ಮಾರ್ಮಿಕವಾಗಿ ಪ್ರಸ್ತುತ ಪಡಿಸುವ ವಿಚಾರ ನಿಜವಾಗಿಯೂ ಹೆಮ್ಮೆಪಡುವಂಥದ್ದು.

ವಿಜಾಪೂರ ಜಿಲ್ಲೆಯ ತಿಕೋಟಾದ ಸಿದ್ರಾಮಪ್ಪ-ದೊಡ್ಡಮ್ಮ ಎಂಬ ಸಾತ್ವಿಕ ದಂಪತಿಗಳ ಉದರದಲ್ಲಿ ಜನಿಸಿ, ವಿಶಾಲ ಜಗತ್ತನ್ನೇ ಪಾಠಶಾಲೆಯನ್ನಾಗಿ ಬಳಸಿ ಕೊಂಡು ಬೆಳೆದುಬಂದ ದಾನಪ್ಪ ಬಾಲ್ಯದ ಬದುಕಿನಿಂದಲೇ ಕಲೆ, ಸಾಹಿತ್ಯ, ಸಂಗೀತ, ಆಧ್ಯಾತ್ಮ ಸೆಳವಿನಲ್ಲಿ ಈಜು ಕಲಿತವರು. ಮಾನವನ ಬದುಕಿನಲ್ಲಿ ಸಹಜ ವಾಗಿರುವ ಏರು-ಪೇರುಗಳನ್ನು ಸಹಿಸುತ್ತ ಬಂದ ದಾನಪ್ಪನವರು ಪಕ್ವಗೊಂಡು ಸುಮಾರು ಮೂವತ್ತು ವರ್ಷಗಳಿಂದ ಕನ್ನಡನಾಡಿನ ತುಂಬೆಲ್ಲ ಪುರಾಣ, ಪ್ರವಚನ. ಕೀರ್ತನೆಗಳ ಮೂಲಕ ಪ್ರಸಿದ್ಧಿಹೊಂದಿದ್ದಾರೆ.

ಪ್ರವಚನದ ಉದ್ದಕ್ಕೂ ಅವರು ಬಳಸುವ ವಾಣಿ ಕೇಳಿದಾಗ ಮೈ ಜುಂ ಎನ್ನುತ್ತದೆ. ಅವರು ಜನಸಾಮಾನ್ಯರಿಗೂ ತಿಳಿಯುವ ಹಾಗೆ ನಿರೂಪಿಸುವ ಆಧ್ಯಾತ್ಮ ವಿಚಾರ, ಧರ್ಮದ ನಿಲುವು, ಸಂಸ್ಕೃತಿಯ ಸಾರ ವಿಶ್ವವಿದ್ಯಾಲಯದ ಮಹಾನ್ ವಿದ್ವಾಂಸರೆನ್ನುವ ಹೆಸರು ಗಳಿಸಿದವರ ಸಾಲಿನಲ್ಲಿ ಮೇರುವಾಗಿ ನಿಲ್ಲುವುದು. ಅವರ ಕಲಾಪ್ರತಿಭೆ, ಬುದ್ಧಿವಂತಿಕೆ ನಿಜವಾಗಿ ದೇವರು ಕೊಟ್ಟ ದೇಣಿಗೆ.

'ತಿಮ್ಮ' ದಾನಪ್ಪನವರ ಆತ್ಮೀಯ ಸ್ನೇಹಿತ. ಜತ್ತಿಯವರೊಂದಿಗೆ ಲೀನ ವಾಗಿರುವ 'ತಿಮ್ಮ' ಇವರ ಪ್ರಸಿದ್ಧಿಗೆ, ಪ್ರತಿಭೆಗೆ ಕಾರಣವಾಗಿದ್ದಾನೆ. ಕೀರ್ತನ ಹೇಳುವ ಸಂದರ್ಭದಲ್ಲಿ ನಡುನಡುವೆ ವಚನ, ತ್ರಿಪದಿ ಹಾಡುಗಳ ಜೊತೆಗೆ ತಿಮ್ಮನೂ ಆಗಾಗ ಕಾಣಿಸಿಕೊಳ್ಳುತ್ತಾನೆ. ಅವರದು ಪರಿಶುದ್ಧ ಕಲೆ, ಜನತೆ ಅದನ್ನು ಮೆಚ್ಚಿಕೊಂಡು ಪ್ರವಚನ ಪಟು, ವಚನರಚನಾ ಚತುರ, ಮಾದರಿ ಮಾನವ, ಕೀರ್ತನ ಕೇಸರಿ ಮೊದಲಾದ ಬಿರುದುಗಳಿಂದ ಕೀರ್ತಿಯ ಕಿರೀಟ ತೊಡಿಸಿದ್ದಾರೆ.

ಒಂದಾನೊಂದು ಸಮಯದಲ್ಲಿ ಪುರಾಣ, ಪ್ರವಚನ ಆಲಿಸುವುದರಿಂದ ಆಧ್ಯಾತ್ಮ, ತತ್ತ್ವಜ್ಞಾನದತ್ತ ಜನತೆ ಒಲಿಯುತ್ತಿದ್ದರು, ಅದಕ್ಕೆ ಬೆಲೆ ಕೊಡು ತ್ತಿದ್ದರು. ಅಲ್ಲದೆ ಪುರಾಣಿಕರು ಕೂಡ ಆಧ್ಯಾತ್ಮ ಸಾಧಕರಾಗಿ, ನೈತಿಕವಾಗಿ,

ಮೌಲಿಕ ಬದುಕನ್ನು ನಡೆಸಿ ಬೆಳಕು ತೋರಿಸುತ್ತಿದ್ದರು. ಆದರೆ ಈಗ ಅಂಥ ಪರಿಸ್ಥಿತಿ ಇಲ್ಲ. ನಾಟಕ, ಸಿನೇಮಾ, ರೇಡಿಯೋ, ಟಿ.ವಿ.ಯ ದಾಪುಗಾಲಿನ ಪರಿಣಾಮದಿಂದ ಜನತೆಗೆ ಪುರಾಣ, ಪ್ರವಚನ ಆಲಿಸುವ ಸಂಯಮ ಇಲ್ಲ. ಅದಕ್ಕೆ ಬೆಲೆಯನ್ನು ಕೂಡ ಕೊಡುವುದಿಲ್ಲ. ಆದರೆ ದಾನಪ್ಪ ಜತ್ತಿ ಹೊಸ ಯುಗದ ಪ್ರವಾಹದಲ್ಲಿ ಕೂಡ ಛಲವಂತರಾಗಿ, ಧೀಮಂತವಾಗಿ, ಮನುಷ್ಯತ್ವವನ್ನು ಉಳಿಸಿ ಕೊಂಡು ಅದಕ್ಕೆ ಪೂರಕವಾದ ಪರಿಕರಗಳನ್ನು ಬೆಳೆಸಿಕೊಂಡು ಪುರಾಣ, ಕೀರ್ತನೆ, ಪ್ರವಚನದ ಮೂಲಕವೇ ಕೆಟ್ಟು ಹೋಗುತ್ತಿರುವ ಜನತೆಯ ಹೃದಯದಲ್ಲಿ ಧಾರ್ಮಿಕ, ಆಧ್ಯಾತ್ಮಿಕ ಮೌಲ್ಯಗಳನ್ನು ಬಿತ್ತುತ್ತ, ಅವರ ಭಾವನೆಗಳೊಂದಿಗೆ ಸ್ಪಂದಿಸುತ್ತ ದಿಗ್ವಿಜಯ ಸಾಧಿಸುತ್ತಿರುವುದು ಒಂದು ಪವಾಡವೇ ಎನಿಸುತ್ತದೆ.

ಇಂಥ ಪ್ರತಿಭಾವಂತ ಹಾಗೂ ಸೃಜನಶೀಲ ವ್ಯಕ್ತಿಯಾದ ದಾನಪ್ಪ ಜತ್ತಿಯವರು ೫೪ ವಸಂತ ಋತುಗಳನ್ನು ಗೆದ್ದು ೫೫ರ ವಸಂತ ಋತುವಿನಲ್ಲಿ ಅಡಿಯಿರಿಸಿದ್ದಾರೆ. ಈ ಲೇಖನದ ಮೂಲಕ ದಾನಪ್ಪನವರಿಗೆ ನಮ್ಮ ಶಾರದಾ ಕರಡಿ ಮಜಲು ಸಂಘದ ಪರವಾಗಿ ಅಭಿನಂದಿಸುತ್ತೇನೆ. ಅವರ ಬದುಕು ಬೆಳದಿಂಗಳಾಗಲಿ, ಜನತೆಗೆ ಸನ್ಮಂಗಳ ನೀಡಲಿ ಎಂದು ಹಾರೈಸುತ್ತೇನೆ.

## ಪ್ರೊ. ಮಲ್ಲಿಕಾರ್ಜುನ ಹುಲಗಬಾಳಿ

೧೯೬೭, ಸೆಪ್ಟೆಂಬರ ತಿಂಗಳ ಮೂರನೆಯ ವಾರ. ಅಂದು ಬನಪಟ್ಟಿ ಕಾಡ ಸಿದ್ಧೇಶ್ವರನ ಜಾತ್ರೆ. ನಮ್ಮ ಎದುರು ಮನೆಗೆ ಒಬ್ಬ ಅತಿಥಿ ಜಾತ್ರೆಗೆಂದು ಬಂದಿದ್ದರು. ಒಂದು ನಮೂನೆ ಧೋತರ ಉಟ್ಟಿದ್ದ ಅವರನ್ನು ಕುತೂಹಲದಿಂದ ನೋಡುತ್ತಿದ್ದೆ. ಅವರ ಮಾತು, ಹಾವಭಾವ, ಹಾಡುಗಾರಿಕೆ, ಹಿತ–ಮಿತ ಹಾಸ್ಯದ ನುಡಿ ಮತ್ತು ಇವೆಲ್ಲಕ್ಕೂ ಮಿಗಿಲಾಗಿ ಅವರ ಸರಳತೆ ನನ್ನನ್ನು ಆಕರ್ಷಿಸಿದ್ದವು. ಎದುರು ಮನೆಯುವರು ಬಂದಿದ್ದ ತಮ್ಮ ಅತಿಥಿಯ ಹೆಸರನ್ನು ಹೇಳಿದರು. ಆಗ ನಾನು "ಓಹೋ !...ಅವರೇನಾ ಇವರು ?" ಎಂದು ಉದ್ಗರಿಸಿದ್ದೆ. ಅದಾಗಲೆ ಆ ವ್ಯಕ್ತಿಯ ಬಗ್ಗೆ ಓದಿದ್ದೆ, ಕೇಳಿದ್ದೆ. ಹೀಗಾಗಿ ಸಹಜವಾಗಿಯೇ ನನಗೆ ಒಂದು ರೀತಿಯ ಉಮೇದಿಕೆ ಬಂದಿತ್ತು.

ಅದೇ ವರ್ಷ ಎಸ್.ಎಸ್.ಎಲ್.ಸಿ. ಮುಗಿಸಿದ್ದ ನಾನು, ಇನ್ನೂ ಹುಡುಗ ಬುದ್ಧಿಯವನಾಗಿದ್ದೆ. ಎದುರು ಮನೆಯುವರಲ್ಲಿದ್ದ ದೊಡ್ಡ ಕನ್ನಡಿಯ ಮೇಲೆ ಮೇಣದ ಬತ್ತಿಯ ಸಹಾಯದಿಂದ ಆ ವ್ಯಕ್ತಿಯ ಹೆಸರನ್ನು ದೊಡ್ಡದಾಗಿ ಬರೆದಿದ್ದೆ. ಯಾರೂ ಇಲ್ಲದಾಗ. ಆ ನಂತರ ತಮ್ಮ ಹೆಸರನ್ನು ನೋಡಿದ ಆ ವ್ಯಕ್ತಿ "ಅರೆ, ನನ್ನ ಹೆಸರನ್ನು ಹೀಗೆ ಕನ್ನಡಿಯಲ್ಲಿ ಯಾರು ಬರೆದಿದ್ದಾರೆ ?" ಎಂದು ಕೇಳಿದ್ದರು. ಇದೆಲ್ಲಾ ನನ್ನದೆ ಕಿತಾಪತಿ ಎಂಬುದು ಆ ಮನೆಯುವರಿಗೆ ಗೊತ್ತಿತ್ತು. ನನ್ನ ಹೆಸರನ್ನು ಯಾವ ಮುಲಾಜಿಲ್ಲದೆ ಅವರಿಗೆ ಹೇಳಿಬಿಟ್ಟರು. ಆ ಕ್ಷಣವೇ ನಮ್ಮ ಮನೆಗೆ ಆ ವ್ಯಕ್ತಿ ಬಂದರು. ಸಿಟ್ಟಿನಿಂದ ನನ್ನನ್ನು ಬೈಯಬಹುದೆಂದುಕೊಂಡಿದ್ದೆ. ಹಾಗಾಗಲಿಲ್ಲ.

'ನಿಮಗೆ ಸಾಹಿತ್ಯದ ಬಗ್ಗೆ ಆಸಕ್ತಿಯೆ ?' ಎಂದರು.

'ಹೂಂ' ಎಂದೆ.

'ಏನೇನು ಓದಿದ್ದೀರಿ ?' ಎಂದರು. 'ನಿಮ್ಮ ಅಮೂಲ್ಯ ಕಾಣಿಕೆ' ಅಂದೆ. ದೊಡ್ಡದಾಗಿ ಅವರು ನಕ್ಕರು. ನಾನೂ ನಕ್ಕೆ. ಅವರು ಮತ್ತೆ ಬೇರಾರೂ ಅಲ್ಲ, ಶ್ರೀ ದಾನಪ್ಪ ಜತ್ತಿ, ತಿಕೋಟಾ.

ಹೀಗೆ ನನ್ನನ್ನು ನಾನು ಶ್ರೀ ದಾನಪ್ಪ ಜತ್ತಿ ಅವರಿಗೆ ಪರಿಚಯಿಸಿಕೊಂಡ ಪರಿ.

ಅದಾಗಿನಿಂದ ನಮ್ಮ ಸ್ನೇಹ ಬಲಿಯುತ್ತ – ಬೆಳೆಯುತ್ತ ಬಂದಿದೆ. ಅವರ ಒಡನಾಟ ಹೆಜ್ಜೇನಿನ ಸವಿ ನೀಡುವಂಥದ್ದು. ರಸಿಕನಾಡಿದ ಮಾತಿನಂತೆ, ಎಲ್ಲವೂ

ಚೆನ್ನ. ನಿಷ್ಕಪಟ ನಗೆ, ಮಗುವಿನಂಥ ಮುಗ್ಧ ನಿಷ್ಕಳಂಕ ಮನಸ್ಸು – ಎಂಥವರ ಹೃದಯವನ್ನೂ ಗೆಲ್ಲಬಲ್ಲವು ಎಂಬುದಕ್ಕೆ ಜತ್ತಿಯವರ ವ್ಯಕ್ತಿತ್ವವೇ ಸಾಕ್ಷಿ.

ವಿದ್ಯಾರ್ಥಿಯಾಗಿದ್ದಾಗಲೇ ಸ್ಥಳೀಯ ವಾರಪತ್ರಿಕೆ 'ಸಂತವಾಣಿ'ಯಲ್ಲಿ 'ಹುಚ್ಚೆದ್ದು – ಗೀಚಿದ್ದು' ಬರೆಯುತ್ತಿದ್ದೆ. ಆಗಿನ ನನ್ನ ಕಾವ್ಯನಾಮ 'ವಿಮ್ಮಾರೆಚ್.' ಅದನ್ನು ಬರೆಯುತ್ತಿದ್ದವನು ನಾನೇ ಎಂಬುದು ಸಂಪಾದಕರಿಂದ ಜತ್ತಿ ಅವರಿಗೆ ತಿಳಿಯಿತು. ಮುಂದೆ ಭೆಟ್ಟಿಯಾದಾಗ ಅವರು "ನನಗ ಬಾಳಂದ್ರ ಬಾಳ ಆನಂದಾ ಗೇತಿ. ಮತ್ತ ಆಶ್ಚರ್ಯಾನೂ ಆಗೇತಿ. ಛಲೋ ಬರೀತೀರಿ. ಹಿಂಗ ಬರ್ಕೋಂತ ಹೋಗ್ರಿ..." ಎಂದು ಅಭಿಮಾನದಿಂದ ನುಡಿದರು.

ಕಾಲಾನಂತರದಲ್ಲಿ ಅವರು ಸಾಹಿತ್ಯ ಕ್ಷೇತ್ರದ ಜತೆಗೆ ರಂಗಭೂಮಿ. ಸಿನೇಮಾ ರಂಗ. ಆಕಾಶವಾಣಿ. ಕೀರ್ತನ – ಪ್ರವಚನಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಅವರ 'ಭಾವ ಸೌರಭ' ಕವನ ಸಂಕಲನವನ್ನು ಪತ್ರಿಕೆಯೊಂದರಲ್ಲಿ ವಿಮರ್ಶಿಸಿದ್ದೆ. ಆ ವಿಮರ್ಶೆಯಲ್ಲಿದ್ದ ಒಂದೆರಡು ಕಹಿನುಡಿಗಳನ್ನು ಅವರು ಕ್ರೀಡಾಮನೋಭಾವ ದಿಂದ ಸ್ವೀಕರಿಸಿದ್ದರು.

ಅವರ ಮೊಟ್ಟ ಮೊದಲ ಪತ್ರಿಕಾ ಸಂದರ್ಶನವನ್ನು ನಾನೇ ಮಾಡಿದ್ದು ಎಂದು ನನಗನಿಸುತ್ತದೆ. ಸುಮಾರು ೨೪ ವರ್ಷಗಳ ಹಿಂದೆ (೧೯೬೮) 'ಸಂತವಾಣಿ'ಯಲ್ಲಿ ಅವರ ಪೂರ್ಣ ಪ್ರಮಾಣದ ಸಂದರ್ಶನ ಪ್ರಕಟವಾಗಿತ್ತು. ಆ ಸಂದರ್ಶನದಲ್ಲಿ ನಾನು ಒಂದು ಮಾತು ಬರೆದಿದ್ದೆ "ಜತ್ತಿಯವರಲ್ಲಿ ಅಗಾಧ ಪ್ರತಿಭೆ ಅಡಗಿದೆ. ಇಲ್ಲಿ ಸಾಹಿತ್ಯ – ಸಂಗೀತಗಳು ಮೇಳವಿಸಿವೆ. ಮುಂದೊಂದು ದಿನ ಇವರು ಕೀರ್ತಿಯ ಉತ್ತುಂಗ ಶಿಖರವನ್ನು ಏರಿಯಾರು. ನಾಡಿನ ತುಂಬ ಹೆಸರುವಾಸಿ ಯಾಗಬಲ್ಲರು".

ನನ್ನ ನಿರೀಕ್ಷೆ ನಿಜವಾಗಿದೆ ಎನ್ನುವುದಕ್ಕಿಂತ ಜತ್ತಿ ಅವರು ತಮ್ಮಲ್ಲಿದ್ದ ಪ್ರತಿಭೆ ಯನ್ನು ಚೆನ್ನಾಗಿ ದುಡಿಸಿಕೊಂಡಿದ್ದಾರೆ. ಅವರ ಅವಿರತ ಅಧ್ಯಯನ, ಅವಿಶ್ರಾಂತ ಪ್ರಯತ್ನ, ಸಾಹಸ ಮನೋಭಾವ ಹಾಗೂ ಪ್ರಯೋಗಶೀಲತೆಯಿಂದಾಗಿ ಅವರಿಂದು ನಾಡಿನ ಉದ್ದಗಲಕ್ಕೂ ಚಿರಪರಿಚಿತರಾಗಿದ್ದಾರೆ.

ವಯಸ್ಸಿನಲ್ಲಿ ನನಗಿಂತಲೂ ಹಿರಿಯರಾದ ಅವರನ್ನು ನಾನು 'ಅಣ್ಣ ಎಂದೇ' ಗೌರವಿಸುತ್ತೇನೆ. ವಿಚಿತ್ರವೆಂದರೆ ಅವರು ನನ್ನನ್ನು 'ಮಲ್ಲಣ್ಣ' ಎಂದೇ ಕರೆಯು ತ್ತಾರೆ. ಸಣ್ಣವರಿರಲಿ. ದೊಡ್ಡವರಿರಲಿ ಎಲ್ಲರನ್ನೂ ಗೌರವದಿಂದ ಕಾಣುವ ಹಿರಿಯಗುಣ ಅವರಿಗಿದೆ.

ಅವರ ಸ್ನೇಹ ಬಳಗವೂ ದೊಡ್ಡದಿದೆ. ನನಗಿಂತಲೂ ಹೆಚ್ಚಾಗಿ ಅವರಿಗೆ ನಮ್ಮೂರಿನಲ್ಲಿ ಗೆಳೆಯರಿದ್ದಾರೆ. ಬನಹಟ್ಟಿಗೆ ಬಂದಕೂಡಲೇ ತಮ್ಮ ಆಗಮನವ

ಸುದ್ದಿ ಮುಟ್ಟಿಸುತ್ತಿದ್ದರು. ಆಮೇಲೆ ಅವರು ನಮ್ಮೂರಲ್ಲಿರುವಷ್ಟು ದಿನ ನಾನು ಅವರ ಕೂಡ ಇರುತ್ತಿದ್ದೆ. ಮರಳಿ ಊರಿಗೆ ಹೋಗುವಾಗ ಬಸ್‌ಸ್ಟ್ಯಾಂಡವರೆಗೆ ಹೋಗಿ ಬಸ್ ಬಗುವವರೆಗೂ ನಾವು ಕೂಡಿ ಇರುತ್ತಿದ್ದೆವು. ಆದರೆ ಈಗೀಗ ನಮ್ಮಿಬ್ಬರ ಕಾರ್ಯಬಾಹುಲ್ಯದಿಂದಾಗಿ ಆ ದಿನಗಳು ಕಡಿಮೆಯಾಗಿವೆ. ಭೆಟ್ಟಿಯೂ ಅಪರೂಪವಾಗಿದೆ. ಪತ್ರವ್ಯವಹಾರ ವಿರಳವಾಗಿದೆ. ಆದರೂ ನಮ್ಮ ಮೊದಲಿನ ಆತ್ಮೀಯತೆಗೆ ಎಳ್ಳಷ್ಟೂ ಚ್ಯುತಿ ಬಂದಿಲ್ಲ.

ಹದಿನೈದು ವರ್ಷದ ಹಿಂದೆ ನಮ್ಮ ಕಾಲೇಜಿಗೆ ಅತಿಥಿಗಳಾಗಿ ಬಂದು ಉಪನ್ಯಾಸ ನೀಡಿದ್ದರು. ಅವರ ಭಾಷಣ ಕೇಳಿ ಹೊಟ್ಟೆ ಹುಣ್ಣಾಗುವಂತೆ ನಮ್ಮ ಮಿತ್ರರು ನಕ್ಕಿದ್ದರು. "ಇನ್ನೊಮ್ಮೆ ಜತ್ತಿ ಅವರನ್ನು ಕರಸ್ರೀ..." ಎಂದು ಅವರೆಲ್ಲರೂ ಆಗಾಗ ಒತ್ತಾಯಿಸುತ್ತಲೇ ಇರುತ್ತಾರೆ. ಆದರೆ "ಈಗ ಜತ್ತಿ ಅವರು ತುಂಬ ಬೀಝಿ. ಮೊದಲಿನ ಹಾಗೆ ಈಗೆಲ್ಲ ನಮ್ಮ ಕೈಗೆ ಸಿಗುವದಿಲ್ಲ" ಎಂಬ ನನ್ನ ಮಾತುಗಳಲ್ಲಿ ಅಭಿಮಾನವಿದೆ. ಜತ್ತಿಯವರು ಯಾವಾಗಲೂ ಖಾಲಿ ಕೂಡ್ರುವವರಲ್ಲ. ಸದಾಕಾಲ ಏನಾದರೂ ಮಾಡುತ್ತಿರುವವರು. ಅವರ ಈ ಕ್ರಿಯಾತ್ಮಕ ಗುಣವೇ ಅವರನ್ನು ಇಂಥ ಉನ್ನತ ಸ್ಥಿತಿಗೆ ತಂದಿದೆ. ಇದು ನಿಜಕ್ಕೂ ಹೆಮ್ಮೆಯ ಸಂಗತಿ. ಹೀಗೆಯೇ ಅವರ ಕೀರ್ತಿ ಅಸದಳವಾಗಿ ಬೆಳೆಯಲಿ. ದೇಶದ ಉದ್ದಕ್ಕೂ ಅವರ ಕೀರ್ತನಗಳು ನಡೆಯುವಂತಾಗಲಿ ಎಂದು ಈ ಸಂದರ್ಭದಲ್ಲಿ ಅವರ 'ಆತ್ಮೀಯ'ನಾಗಿ ಹಾರೈಸುವೆ.

# ದೂರದ ಸಾರಸ್ವತ ಬಂಧು

## ಡಾ. ಸಿ.ಪಿ.ಕೆ.

ಎಲ್ಲಿಯ ವಿಜಾಪೂರ ? ಎಲ್ಲಿಯ ಮೈಸೂರು ? ತುಂಬ ದೂರ – ವಿಜಾಪೂರಕ್ಕೆ ನಾನು ಒಮ್ಮೆಯೂ ಹೋಗಿಲ್ಲ; ಅದನ್ನು ಕಂಡಿಲ್ಲ, ಆದರೂ ಅದು ನನಗೆ ಪರಕೀಯ ಎನ್ನಲಾರೆ. ಏಕೆಂದರೆ ಅಲ್ಲಿ – ತಿಕೋಟದಲ್ಲಿ ನನ್ನ ಸಾರಸ್ವತ ಬಂಧುವೊಬ್ಬರಿದ್ದಾರೆ. ಅವರನ್ನು ಕೂಡ ನಾನು ಒಮ್ಮೆಯೂ ಸಂಧಿಸಿಲ್ಲ. ಆದರೇನು ? "ಕಣ್ಣರಿಯ ದೊಡಂ ಮನಮರಿಯದೆ ?"

ಶ್ರೀ ದಾನಪ್ಪ ಜತ್ತಿ ಶಾಸ್ತ್ರಿ ಅವರು ನನ್ನ ಅಭಿಮಾನಿಗಳಲ್ಲಿ, ಆತ್ಮೀಯರಲ್ಲಿ ಒಬ್ಬರು. ನಾನು ಕತೆ, ಕಾದಂಬರಿಗಳನ್ನು ಬರೆದಿಲ್ಲ; ನನ್ನ ಬರಹದ ಸ್ವರೂಪ ಬೇರ. ಆದರೂ ನನ್ನ ಪಾಲಿಗಿರಬಹುದಾದ ಕಿಂಚಿತ್ ಜನಪ್ರಿಯತೆಯನ್ನು ಜತ್ತಿ ಯವರು ಸಂಕೇತಿಸುತ್ತಾರೆನ್ನಬಹುದು. ಅಷ್ಟು ದೂರದಲ್ಲಿ ನನ್ನ ಪುಸ್ತಕಗಳನ್ನು ಓದುವವರಿದ್ದಾರೆ ಎನ್ನುವುದು ನನಗೆ ಹೆಮ್ಮೆಯ, ಹರ್ಷದ ಸಂಗತಿ; ಬರೆದದ್ದು ವ್ಯರ್ಥವಾಗಲಿಲ್ಲ ಎಂಬ ಸಮಾಧಾನ.

ಸಾಮಾನ್ಯರಲ್ಲ ಈ ಜತ್ತಿ; ಉತ್ತರ ಕರ್ನಾಟಕದಲ್ಲಿ ಮನೆ ಮಾತಾದವರು; ಬಹುಮುಖ ಸಾಮರ್ಥ್ಯದ ಗಟ್ಟಿಕುಳ. ಅಭಿನಯವೆ, ಸಾಹಿತ್ಯ ನಿರ್ಮಿತಿಯೆ, ಪುರಾಣ ಪ್ರವಚನವೆ, ಕೀರ್ತನೆಯೆ, ಸಮಾಜ ಸೇವೆಯೆ – ಯಾವುದು ತಾನೆ ಹೊರತು ಜತ್ತಿಯವರಿಗೆ ? ಸುಮಾರು ಮೂರು ದಶಕಗಳ ಅವ್ಯಾಹತ ದುಡಿಮೆ, ಸಾಧನೆ; ಕಲಾರಾಧನೆ.

ವಿದ್ವಾಂಸರು ವಿರಳ, ವಿನಯಶಾಲಿಗಳು ವಿರಳತರ; ದೊಡ್ಡ ವಿದ್ವಾಂಸರಾಗಿ ವ್ಯಕ್ತಿತ್ವದಲ್ಲಿ ನಮ್ರತೆಯನ್ನು ತಳೆದವರು ಅತ್ಯಂತ ವಿರಳ. ಅಂಥವರಲ್ಲಿ ಜತ್ತಿ ಒಬ್ಬರು. ಅನೇಕ ಪ್ರತಿಭಾನ್ವಿತರಲ್ಲಿ, ಮೇಧಾವಿಗಳಲ್ಲಿ ಮಾನವೀಯ ಗುಣಗಳಿರು ವುದಿಲ್ಲ ಎನ್ನುವದು ದುರ್ದೈವಿಗಳ ಮಾತು. ಆದರೆ ಜತ್ತಿಯವರು ಅಪವಾದ; ಅವರು ಸಹೃದಯರು, ಸುಹೃದಯರು.

ಜತ್ತಿಯವರು ಸಧ್ಯಕ್ಕೆ ತಮ್ಮನ್ನು ಪುರಾಣ, ಪ್ರವಚನ, ಕೀರ್ತನಗಳಿಗೆ ಮೀಸಲು ಮಾಡಿಕೊಂಡಿದ್ದಾರೆ. ಕೀರ್ತನಕಲೆ ಸಂಕೀರ್ಣವಾದುದು; ಆಬಾಲವೃದ್ಧ ಮನೋಹರ ವಾದುದು, ಸಾಕ್ಷರತೆಯ ಪ್ರಮಾಣ ಅಲ್ಪವಾಗಿರುವ ನಮ್ಮ ನಾಡಿನಲ್ಲಿ ಕೀರ್ತನ ಕಲೆಯ ಮೂಲಕ ಸಾಧಿಸಬಹುದಾದದ್ದು ಬಹಳ ಉಂಟು. ಅದನ್ನು "ಕಾಂತಾ ಸಂಮಿತತಯಾ ಉಪದೇಶಯುಜೇ" ಚೆನ್ನಾಗಿ ಬಳಸಿಕೊಳ್ಳಬಹುದು. ಈ ಕಾಲದ

ಅಗತ್ಯಕ್ಕೆ ತಕ್ಕಂತೆ ಅದನ್ನು ತಿರುಗಿಸಿದರೂ ಮುಖ್ಯ ಜತ್ತಿಯವರು ಮಾಡುತ್ತಿರುವುದು ಸ್ತುತ್ಯವಾದ ಇದೇ ಕೆಲಸವನ್ನು.

ಒಂಬತ್ತು ವರ್ಷಗಳ ಹಿಂದೆ ೩೦-೩-೮೩ ರಂದು ಅವರು ನನಗೆ ಬರೆದ ಪ್ರಥಮ ಪತ್ರದಲ್ಲಿ ತಮ್ಮನ್ನು ಹೀಗೆ ಪರಿಚಯಿಸಿಕೊಂಡಿದ್ದಾರೆ :

"ನಾನೊಬ್ಬ ಸಾಹಿತ್ಯಾಭ್ಯಾಸಿ. ವೃತ್ತಿಯಿಂದ ಪ್ರವಚನಕಾರ. ಧಾರ್ಮಿಕ ಪ್ರವಚನ. ಕೀರ್ತನದಲ್ಲಿ ವೈಜ್ಞಾನಿಕ ದೃಷ್ಟಿಕೋನವನ್ನಳವಡಿಸಿಕೊಂಡು. ವೈಚಾರಿಕವಾಗಿ ವಿಷಯ ಪ್ರತಿಪಾದಿಸುವ ಗುರಿಯನ್ನು ಹೊಂದಿರುವ ನಾನು ಆ ದಿಸೆಯಲ್ಲಿ ಸಾಧನೆ ಮುಂದುವರಿಸಿರುವೆ. ಇದಕ್ಕೆ ತಮ್ಮ ಮಾರ್ಗದರ್ಶನ ದೊರೆಯಲೆಂದು ಬಯಸುವೆ".

ವೈಜ್ಞಾನಿಕ. ವೈಚಾರಿಕ ದೃಷ್ಟಿಯಿಂದ 'ಪುರಾಣ'ವನ್ನು ಪರಿಷ್ಕರಿಸಿ. ವರ್ತಮಾನಕ್ಕೆ ಪ್ರಸ್ತುತಗೊಳಿಸಬೇಕು. "ಪುರಾಣ ಮಿತ್ಯೇವ ನ ಸಾಧು ಸರ್ವಂ" ಸರ್ವೋದಯ ಇಂದಿನ ಯುಗಧರ್ಮ. ಅದಕ್ಕೆ ಸ್ಪಂದಿಸುತ್ತಿದ್ದಾರೆ ಜತ್ತಿಯವರು. ರಾಷ್ಟ್ರಕವಿ ಕುವೆಂಪು ಬಗೆಗೆ ಅವರಲ್ಲಿ ಬಹಳ ಭಕ್ತಿ, ಗೌರವಗಳಿವೆ. ಇದು ಮಹತ್ವದ ಅಂಶ.

ಇನ್ನು ಜತ್ತಿಯವರ ಸಾಹಿತ್ಯ ಪ್ರೀತಿ ಇಷ್ಟು ಗಾಢವಾದುದು, ಅವರ ವಾಚನ ಎಷ್ಟು ವಿಸ್ತಾರವಾದುದು ಎಂಬುದನ್ನು ಅದೇ ಪತ್ರದ ಮುಂದಿನ ಭಾಗ ವ್ಯಕ್ತಪಡಿಸುತ್ತದೆ :

"ಇತ್ತೀಚಿಗೆ ತಮ್ಮ ಒಂದು ಕೃತಿ ಕೈಗೆತ್ತಿಕೊಂಡೆ. ಬಹಳ ಹಿಡಿಸಿತು. ಇಷ್ಟು ಮೆಚ್ಚಿಕೊಂಡೆನೆಂದರೆ ತಮ್ಮ ಸಮಗ್ರ ಕೃತಿಗಳನ್ನೆಲ್ಲ ಅಭ್ಯಸಿಸುವದೆಂದು ತೀರ್ಮಾನಿಸಿರುವೆ. ತಮ್ಮ ಎಲ್ಲ ಹೊತ್ತಿಗೆಗಳನ್ನು ತರಿಸಿಕೊಂಡಿರುವೆ."

ಮತ್ತೊಂದು ಪತ್ರದಲ್ಲಿ ಜತ್ತಿಯವರು ಬರೆಯುತ್ತಾರೆ :

"ನಿಮ್ಮ ಭಾವಚಿತ್ರವನ್ನು ದೊರಕಿಸಿಕೊಳ್ಳಬೇಕು ಎಂಬ ಬಯಕೆ ಮೂಡಿತ್ತು. ಅನಿತರಲ್ಲಿ ನಿಮ್ಮ "ಸಿ.ಪಿ.ಕೆ. ನೂರು" ಎಂಬ ಹೊತ್ತಿಗೆ ಕೈಗೆತ್ತಿಕೊಂಡಾಗ ಅದರ ಮೇಲಿರುವ ನಿಮ್ಮ ಆಕರ್ಷಕವಾದ ಭಾವಚಿತ್ರವನ್ನು ಕಂಡು ಆನಂದಿತನಾದೆ. ನಿಮ್ಮನ್ನೇ ಕಂಡಷ್ಟು ಸಮಾಧಾನವಾಯಿತು. ಅದನ್ನು ಸೊಗಸಾಗಿ ಹರಳು ಹಾಕಿಸಿ ನನ್ನ ಕೋಣೆಯಲ್ಲಿರುವ ರಾಷ್ಟ್ರಕವಿ ಕುವೆಂಪು ಅವರ ಭಾವ ಚಿತ್ರದ ಸಮೀಪವೇ ಅಲಂಕರಿಸಿರುವೆ, ಹೃದಯದಲ್ಲಿಯೂ ಅಷ್ಟೆ".

ಇದು ನನ್ನ ಯೋಗ್ಯತೆಗಿಂತ ಮಿಗಿಲಾಗಿ ಜತ್ತಿಯವರ ಔದಾರ್ಯ. ದಾಕ್ಷಿಣ್ಯ. ನಿರಸೂಯತೆ ಮುಂತಾದ ಗುಣಗಳನ್ನು ತೋರಿಸುತ್ತದೆ ಎನ್ನಬೇಕು.

ಜತ್ತಿಯವರ ಪ್ರವಚನ, ಕೀರ್ತನ ಪ್ರತಿಭೆಯ ಮೋಡಿಯನ್ನು ಅನೇಕರು ಮೆಚ್ಚಿ ಕೊಂಡಾಡಿದ್ದಾರೆ; ಅದು ಹೇಗೆ ಸಾಹಿತ್ಯ ರಂಜಿತವಾಗಿ "ಬಹುಧಾನ್ಯೇಕಂ ಸಮಾರಾಧನಂ" ಆಗಿರುತ್ತದೆಂಬುದನ್ನು ತುಂಬುಮನದಿಂದ ಬಣ್ಣಿಸಿದ್ದಾರೆ.

ದಾನಪ್ಪ ಜತ್ತಿಯವರು ಪ್ರಾಜ್ಞರು; ನಮ್ಮ ಪರಂಪರೆಯ ಸತ್ಪಾತ್ರರು. ಸಾಮ್ಯ ಸಂಸ್ಕೃತಿಗಳ ಪ್ರತಿನಿಧಿಗಳು; ಜನತೆಗೆ ಸಂತೋಷವುಂಟುಮಾಡುವುದು ಮಾತ್ರವಲ್ಲ, ಸಂಸ್ಕರಿಸುವುದು ತಮ್ಮ ಕರ್ತವ್ಯ, ಅದೇ ಈಶ್ವರ ಪೂಜನ ಎಂಬ ನಿಲುವಿಗೆ ಬದ್ಧರಾದವರು. ಜನೋಪಕಾರಕ್ಕೆ ಸೋಂತ ಅವರ ಇದುವರೆಗಿನ ಬದುಕು ಸಾರ್ಥಕ; ಮುಂದಿನ ಬದುಕು ಇನ್ನಷ್ಟು ಧನ್ಯವಾಗಲಿ ಎಂದು ಅಭಿನಂದನ ಪೂರ್ವಕವಾಗಿ ಹಾರೈಸೋಣ.

# ಜತ್ತಿಯವರು ಮತ್ತು ಬಸವಪುರಾಣ

## ರಮೇಶ ಬಿ. ಕುಲಕರ್ಣಿ

ತಿಕೋಟಾದ ಶ್ರೀ ದಾನಪ್ಪ ಜತ್ತಿ ಹಲವಾರು ರಂಗಗಳಲ್ಲಿ ಹೆಸರುವಾಸಿ ಆಗಿದ್ದರೂ ಕೀರ್ತನೆ, ಪುರಾಣ, ಪ್ರವಚನಗಳಲ್ಲಿ ಅವರದು ವಿಶಿಷ್ಟ ಪ್ರತಿಭೆ. ಡಾ. ಸಿದ್ಧಯ್ಯ ಪುರಾಣಿಕರ 'ಶರಣ ಚರಿತಾಮೃತ'ವನ್ನು ಜನಪ್ರಿಯಗೊಳಿಸಿದಂತೆ ಜತ್ತಿಯವರು 'ಬಸವಪುರಾಣ'ವನ್ನು ತಮ್ಮ ಅಮೋಘವಾದ, ಶ್ರದ್ಧಾಪೂರ್ಣವಾದ ವಾಕ್ಚಾತುರ್ಯದಿಂದ ಪ್ರಸಿದ್ಧಿಗೊಳಿಸಿದ್ದಾರೆ. ಬಸವಣ್ಣನವರು ದಾನಪ್ಪನವರ ರಕ್ತದ ಕಣಕಣದಲ್ಲೂ ಬೆರೆತು ನಿಂತಿದ್ದಾರೆ. ನವರಸಗಳಲ್ಲಿ ಅದ್ವಿತೀಯರಾದ ದಾನಪ್ಪನವರು ಭಕ್ತಿರಸದ ಹೊನಲಿನಲ್ಲಿ ಬಸವ ಭಕ್ತರನ್ನು ಮೀಯಿಸುತ್ತಾರೆ.

"ನಂಬಲು ನೆಚ್ಚಲು ಎಂದೇ ಕರೆವರು
ನಂಬಿ ಕರೆದರೆ ಓ ಎನ್ನನೇ ಶಿವನು"

ಎಂದು ಲಯ, ತಾಳಬದ್ಧವಾಗಿ ಹಾಡಿದಾಗ ಸಾಕ್ಷಾತ್ ಬಸವೇಶ್ವರರೇ ಅವತಾರ ಹೊಂದಿದಂತೆ ಶ್ರೀ ದಾನಪ್ಪ ಜತ್ತಿಯವರು ಕಾಣಿಸುವುದನ್ನು ಅನುಭವಿಸುವುದೇ ಸುಖ. "ನಿಲ್ಲು ನಿಲ್ಲಲೆ ನವಿಲೆ ನಿನ್ನ ಬಣ್ಣಗಳೆಷ್ಟು ನಿನ್ನ ರೆಕ್ಕೆಗಳೆಷ್ಟು ? ನಿನ್ನ ರೂಪಿಸಿದವನು ತಾನೆಲ್ಲಿ ಅಡಗಿದನು" ಎಂದು ಭಾವತುಂಬಿ ಭಕ್ತಿ ಹಾಡು ಹಾಡುತ್ತಿದ್ದರೆ ಅವರ ಆಧ್ಯಾತ್ಮ ಆತ್ಮೀಯವಾಗಿ ಭಕ್ತರೆಲ್ಲ ಅವರೊಂದಿಗೆ ತಾದಾತ್ಮ್ಯ ಹೊಂದುವ ರೀತಿಯನ್ನು ಬಣ್ಣಿಸಲಾಗದು.

ಬಸವ ಚಿಂತೆಯನ್ನು ಅಚ್ಚುಕಟ್ಟಾಗಿ, ರುಚಿಯಾಗಿ, ಶುಚಿಯಾಗಿ ಜನರ ಮನಸ್ಸೆಳೆಯುವಂತೆ ಆರೋಗ್ಯಪೂರ್ಣವಾದ ದೃಷ್ಟಾಂತಗಳ ಮೂಲಕ ಬಿಂಬಿಸುತ್ತ ಧಾರ್ಮಿಕ ಬದುಕಿಗೆ ಬೆಳಕು ನೀಡುತ್ತಾರೆ. ನಡೆ-ನುಡಿಯಲ್ಲೂ ಅದೇ ಪದ್ಧತಿಯನ್ನು ರೂಢಿಸಿಕೊಂಡಿರುವ ಅವರು ಜನತೆಯನ್ನು ಆ ದಿಸೆಯಲ್ಲಿ ಕರೆದೊಯ್ಯುವಲ್ಲಿ ಯಶಸ್ಸು ಸಂಪಾದಿಸುತ್ತಿದ್ದಾರೆ.

ಕೇವಲ ಪ್ರಾಥಮಿಕ ಶಿಕ್ಷಣ ಗಳಿಸಿದ ಜತ್ತಿಯವರು ಹದಿನೆಂಟು ಪುರಾಣಗಳನ್ನು, ಆರು ಶಾಸ್ತ್ರಗಳನ್ನು, ನಾಲ್ಕು ವೇದಗಳನ್ನು ಓದಿಕೊಂಡವರು. ಪುರಾಣದ ಸಮಯದಲ್ಲಿ ಅತ್ಯಂತ ಸ್ವಚ್ಛಂದವಾಗಿ ಉದಾಹರಣೆಗಳನ್ನು ಹರಡುತ್ತ, ಸಾಕ್ಷಿ ಆಧಾರಗಳನ್ನು ಒದಗಿಸುತ್ತ ಭಕ್ತರನ್ನು ಬೆರಗುಗೊಳಿಸುವುದನ್ನು ನೋಡುವುದೇ ಒಂದು ದಿವ್ಯಾನಂದ.

ಪುರಾಣದುದ್ದಕ್ಕೂ ಮಾನವನ ಸನ್ನಡತೆಯ ಬಗ್ಗೆ ಅತ್ಯಂತ ಕಾಳಜಿಪೂರ್ವಕ ಎಚ್ಚರಿಕೆಯನ್ನು ನೀಡುವ ಜತ್ತಿಯವರು ಹೇಳುತ್ತಾರೆ "೮೪ ಕೋಟಿ ಜೀವರಾಶಿಗಳಲ್ಲಿ ಮಾನವ ಜನ್ಮ ದೊಡ್ಡದು ಮತ್ತು ಶ್ರೇಷ್ಠವಾದುದು. ಮಾನವ ಪರೋಪಕಾರ ಮಾಡುವ ಮೂಲಕ ಮಹಾನ್ ಆಗುವನು. ಯಾವನು ಪರೋಪಕಾರ ಮಾಡುವುದಿಲ್ಲವೋ ಅವನು ಪಶುವಿಗಿಂತಲೂ ಕಡೆಯೆನಿಸುವನು."

ಅವರ ಮಾತು ಸತ್ಯಪೂರ್ಣ. ಹೀಗೆ ಪುರಾಣ, ಪ್ರವಚನ, ಕೀರ್ತನೆಗಳ ಮೂಲಕ ಬದುಕಿನ ಬಗ್ಗೆ, ಮನುಷ್ಯನ ಬಗ್ಗೆ, ನಿಜವಾದ ಧರ್ಮದ ನೆಲೆಗಟ್ಟಿನ ಬಗ್ಗೆ ತೀವ್ರ ಕಾಳಜಿಯನ್ನು ಹೊರಸೂಸುತ್ತ ಸ್ವಾರ್ಥದ ಬೇಗುದಿಯಲ್ಲಿ ಬೆಂದು ಬೂದಿಯಾಗುತ್ತಿರುವ ಜನತೆಗೆ ತಂಪು ನೀಡುವಲ್ಲಿ ದಾನಪ್ಪ ಜತ್ತಿಯವರು ಶ್ರಮಿಸುತ್ತಲೇ ೮೪ ವರ್ಷಗಳನ್ನು ಪೂರೈಸಿದ್ದಾರೆ. ಹೀಗೆ ಅವರು ನೂರಾರು ವರ್ಷಗಳನ್ನು ಕಳೆಯಲು ಆ ಬಸವೇಶ್ವರ ಅನುಗ್ರಹಿಸಲಿ ಎಂದು ಇಚ್ಛಿಸುವೆ.

# ಸರಳತೆಯ ಸಾಕಾರ

## ಬಸವರಾಜ ಹೂಗಾರ

ಪಂಚನದಿಗಳ ಬೀಡಾದ ವಿಜಾಪೂರ ಜಿಲ್ಲೆಯ ಇತಿಹಾಸದಲ್ಲಿ 'ಜತ್ತಿ' ಎಂಬ ಎರಡಕ್ಷರಗಳ ಇಬ್ಬರು ವ್ಯಕ್ತಿಗಳು ಪ್ರಸಿದ್ಧರಾಗಿದ್ದಾರೆ. ಒಬ್ಬರು ರಾಜಕೀಯದಲ್ಲಿ ಸೇರಿ, ಉತ್ತಮ ನಡವಳಿಕೆಯಿಂದ ಜನಸೇವೆ ಮಾಡಿ, ಭಾರತದ ಉಪರಾಷ್ಟ್ರಪತಿಯಾಗಿ ಮೆರೆದ ಶ್ರೀ ಬಿ. ಡಿ. ಜತ್ತಿಯವರು. ಇನ್ನೊಬ್ಬರು ನಾಡಿನ ಮೂಲೆ ಮೂಲೆಗೆ ಹೋಗಿ ತಮ್ಮ ಪ್ರವಚನದಿಂದ ಧರ್ಮ ಸಂಸ್ಕೃತಿಯ ಸೌರಭ ಸೂಸುತ್ತ ಜನಪ್ರಿಯರಾದ ಶ್ರೀ ದಾನಪ್ಪ ಜತ್ತಿಯವರು.

ಪ್ರತಿಭಾನ್ವಿತ ಪ್ರವಚನಕಾರರಾದ ಶ್ರೀ ದಾನಪ್ಪ ಜತ್ತಿಯವರನ್ನು ನಾನು ಮೊದಲು ಕಂಡದ್ದು ಇಲಕಲ್ಲಿನ ಶ್ರೀ ವಿಜಯ ಮಹಾಂತೇಶ ಮಠದಲ್ಲಿ. ಎಂಟ್ಹತ್ತು ವರ್ಷಗಳ ಹಿಂದೆ ನಡೆದ ಆ ಶಿವಾನುಭವದ ಕಾರ್ಯಕ್ರಮದ ಶುಭ ಸಮಾರಂಭದಲ್ಲಿನ ಅವರ 'ಶರಣರು ನಕ್ಕಾಗ' ಎಂಬ ವಿಷಯದ ಬಗೆಗಿನ ಭಾಷಣ ತುಂಬ ರೋಚಕ ವಾಗಿತ್ತು. ಅದು ಭಕ್ತಿ, ಜ್ಞಾನ, ಹಾಸ್ಯದ ತ್ರಿವೇಣಿ ಸಂಗಮವೆನಿಸಿತ್ತು. ಆ ಹೃದಯಂಗಮವಾದ ಭಾಷಣವನ್ನು ಕೇಳಿ ನಾನು ಅವರ ಹಾಸ್ಯ ಪ್ರಜ್ಞೆಗೆ, ಶರಣರ ಅನುಭಾವದ ನಿರೂಪಣಾ ಕೌಶಲ್ಯಕ್ಕೆ ಬೆರಗಾಗಿ ಹೋದೆ. ಆದರೆ ಅವರನ್ನು ಭೇಟಿಯಾಗುವ ಆಸೆಯನ್ನು ಈಡೇರಿಸಿಕೊಳ್ಳಲಿಲ್ಲ. ಶ್ರೀ ದಾನಪ್ಪನವರ ಕೀರ್ತನೆಗಳು ಆಕಾಶವಾಣಿಯ ಮೂಲಕ ಆಗಾಗ ಪ್ರಸಾರವಾಗುತ್ತಿದ್ದವು. ನಾನು ಅವುಗಳನ್ನು ಆಸ್ಥೆಯಿಂದ ಕೇಳಿ ಆ ಕಾರ್ಯಕ್ರಮದ ಬಗ್ಗೆ ಅಭಿಪ್ರಾಯ ಬರೆದು ಬಾನುಲಿಗೆ ಕಳಿಸುತ್ತಿದ್ದೆ.

ನಾಲ್ಕೈದು ವರ್ಷಗಳ ಹಿಂದೆ ಹಾಲಕೆರೆ ಅನ್ನದಾನ ಮಹಾಸ್ವಾಮಿಗಳವರ ಶತಮಾನೋತ್ಸವದ ಅಂಗವಾಗಿ ಸಂಚಾರಿ "ಬಸವಪುರಾಣ"ದ ಪ್ರವಚನಕಾರರಾಗಿ ಶ್ರೀ ದಾನಪ್ಪ ಜತ್ತಿಯವರು ನಮ್ಮ ಊರಿಗೆ ಬಂದಿದ್ದರು. ಅವರು ನಿರೂಪಿಸಿದ 'ಬಸವಪುರಾಣ'ದಲ್ಲಿ ಶರಣ ತತ್ತ್ವದ ಪ್ರಭೆ, ಜೀವನಾನುಭವದ ರಸಾನುಭೂತಿ ಎದ್ದುಕಾಣುತ್ತಿದ್ದವು. ಅವರನ್ನು ನಾನು ಭೇಟಿಯಾಗಿ ನನ್ನ ಸುಖ–ದುಃಖಗಳನ್ನು ಹಾಗೂ ಸಾಹಿತ್ಯದ ಸಾಧನೆಯನ್ನು ವಿವರಿಸಿದೆ. ಅವರು ನಮ್ಮ ಮನೆಗೆ ಬಂದು ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು. ಅವರ ಸರಳತೆಯ, ಸೌಜನ್ಯತೆಯ ಸವಿಮಾತುಗಳನ್ನು ಕೇಳಿ ನಾನು ಸಂತೋಷಗೊಂಡೆ.

ಹೋದ ವರುಷ (೧೯೯೧ ಡಿಸೆಂಬರ)ದಲ್ಲಿ ಗುಡೂರಿನ ಮಹಾಂತೇಶ ಮಠದಲ್ಲಿ "ಬಸವಪುರಾಣ"ದ ಪ್ರವಚನ ಮಾಡುತ್ತಿದ್ದರು. ನಾನವರನ್ನು ಅಲ್ಲಿ ಕಂಡಾಗ ಅವರ ಆತ್ಮೀಯ ಒಡನಾಟ ನನ್ನಲ್ಲಿ ಹೊಸತನವನ್ನು ತಂದಿತು. ಒಮ್ಮೆ ಭೇಟಿಯಾದವರು ದಾನಪ್ಪ ಜತ್ತಿಯವರನ್ನು ಹೃದಯತುಂಬಿಟ್ಟುಕೊಳ್ಳುತ್ತಾರೆ. ಅವರದು ಹಾಲುಸಕ್ಕರೆಯಂತಹ ಮನಸ್ಸು. ಅದು ಎಲ್ಲರಿಗೂ ಸಿಹಿ ನೀಡುವುದು.

ಶರಣ ಸಾಹಿತ್ಯವನ್ನು ಅಭ್ಯಸಿಸಿ. ಅದನ್ನು ಕರಗತ ಮಾಡಿಕೊಂಡು ಬಾಳಿನಲ್ಲಿ ಕ್ರಿಯಾತ್ಮಕವಾಗಿ ಮುನ್ನಡೆಯಿಸಿಕೊಂಡು ಬರುತ್ತಿರುವ ದಾನಪ್ಪ ಜತ್ತಿಯವರ ಬದುಕು, ಮಾತು, ಇನ್ನೊಬ್ಬರಿಗೆ ಆದರ್ಶನೀಯ. ಅನುಕರಣೀಯ. ಅವರು ಪ್ರವಚನದ ನಡುವೆ ಬರುವ 'ತಿರುಮ್ಮ' ಸ್ವಾರಸ್ಯಪೂರ್ಣವಾಗಿ ಹೃದಯದ ಎಲ್ಲ ನೋವುಗಳನ್ನು ಕರಗಿಸಿ ಬದುಕಿನ ಭರವಸೆ ನೀಡಬಲ್ಲ ಸೊಗಸುಗಾರ.

ದಾನಪ್ಪ ಜತ್ತಿಯವರದು ಬಹುಮುಖಿ ಪ್ರತಿಭೆ. ಅವರು ನಟರಾಗಿ. ಊರಿನಲ್ಲಿ ಸಹಕಾರಿ ಸಂಘದ ಅಧ್ಯಕ್ಷರಾಗಿ. ಚಲನಚಿತ್ರ ನಟರಾಗಿ. ಕೀರ್ತನಕಾರರಾಗಿ. ಸಾಹಿತಿಗಳಾಗಿ. ಧರ್ಮಪ್ರಚಾರಕರಾಗಿ ಹೀಗೆ ಹಲವು ಹತ್ತು ರೀತಿಯಿಂದ ತಮ್ಮ ಪ್ರತಿಭೆಯನ್ನು ಮೆರೆದಿದ್ದಾರೆ. ಅವರು ಪ್ರವಚನಕ್ಕಾಗಿಯೇ ಜನ್ಮ ತಾಳಿದ್ದಾರೆ ಎನ್ನುವಷ್ಟರ ಮಟ್ಟಿಗೆ ಆ ಕಲೆಯಲ್ಲಿ ಅವರು ಜೀವಂತಿಕೆ ತುಂಬಿದ್ದಾರೆ. ಕೇಳುಗರ ಮನೋಗತವೆಲ್ಲ ಅವರ ಪುರಾಣ. ಪ್ರವಚನ. ಕೀರ್ತನೆಯಲ್ಲಿ ಬಿಂಬಿತವಾಗುತ್ತದೆ. ಅವರಿಂದ ಪ್ರವಚನಕ್ಕೆ, ಪ್ರವಚನದಿಂದ ಧರ್ಮಕ್ಕೆ, ಧರ್ಮದಿಂದ ಜನಕ್ಕೆ. ಜನರಿಂದ ಸಮಾಜಕ್ಕೆ ಅಮೂಲ್ಯ ಸೇವೆ ಸಲ್ಲುತ್ತಿದೆ. ಇದು ಸೂರ್ಕಾಲ ಹಸಿರಾಗಿರಲಿ ಎಂದು ಹಾರೈಸುವೆ.

# ಜತ್ತಿಯವರ ಪ್ರವಚನ ಶೈಲಿ

## ಮಹಾಲಿಂಗ ಮಂಗಿ

ಅರಭಾವಿ ಪುಣ್ಯಾರಣ್ಯದ ಶ್ರೀಮಠದ ಆವರಣ. ಅಲ್ಲಿ ಶ್ರೀ ಬಸವ ಪುರಾಣ. ಹತ್ತಾರು ಸಾವಿರ ಶ್ರೋತೃಗಣ. ಮಂತ್ರಮುಗ್ಧರಾಗಿ, ಮೈಯೆಲ್ಲ ಕಿವಿಯಾಗಿ ಕೂತಿದ್ದಾರೆ. ಶಬ್ದಕ್ಕೆ ಜೀವರಸ ತುಂಬಬಲ್ಲ ನಿಪುಣ ಪುರಾಣಿಕನ ಮಾತಿನಲ್ಲಿ ಮಂತ್ರದ ಚೈತನ್ಯ ಶಕ್ತಿ ! ಆ ಮಾತುಗಳ ಶಬ್ದಜಾಲದಲ್ಲಿ ಸಿಲುಕಿ ಮೋಡಿಗೊಳಗಾದ ಜನ ಸಮೂಹ ಬರೆದ ಚಿತ್ರದಂತೆ. ಭಾವ ತನ್ಮಯತೆಯಲ್ಲಿ ಮೈಮರೆತು ಕೂತು ತಲೆದೂಗುತ್ತಿದ್ದಾರೆ. ಅನುದಿನವೂ ಅಖಂಡ ಮೂರು ತಾಸುಗಳು ಸತತ ಮೂರುತಿಂಗಳು ಏಕಪ್ರಕಾರವಾಗಿ ಸೂಜಿಗಲ್ಲಿನಂತೆ ಸಮುದಾಯವನ್ನು ಸೆಳೆದು. ಕಟ್ಟಿಹಾಕಬಲ್ಲ ಆ ಪವಾಡ ಸದೃಶ್ಯ ಶಕ್ತಿ – ವ್ಯಕ್ತಿ ಯಾವುದು...!

ಅವರೇ ಸಂಸ್ಕೃತಿಯ ಹರಿಕಾರ, ಪ್ರಖ್ಯಾತ ಕೀರ್ತನಕಾರ ತಿಕೋಟಾದ ಶ್ರೀ ದಾನಪ್ಪ ಜತ್ತಿ !

ಈ ಸಿದ್ಧ ಪ್ರಸಿದ್ಧ ವಾಗ್ಮಿ ಪ್ರವಚನಕಾರ. ಕೀರ್ತನ ಕೇಸರಿಯ ಕುರಿತು ಬಹಳ ಸಲ ಕೇಳಿದ್ದೆ. ಮುಖತಃ ಅವರನ್ನು ನೋಡಿರದಿದ್ದರೂ ಕೇಳಿ ಬಲ್ಲೆ. ಅವರ ಕೀರ್ತನ ಕ್ಯಾಸೆಟ್ 'ಕೋಳೂರ ಕೊಡಗೂಸು' ತುಂಬ ವರ್ಷಗಳಿಂದ ಮನೆಯಲ್ಲಿತ್ತು. ಬಾನುಲಿ ಮೂಲಕವೂ ಅವರ ಸಣ್ಣ ಕೀರ್ತನ ಕೇಳಿದ್ದೆ. ಆಗಾಗ ಅವರು ಈ ಜಿಲ್ಲಾ ಭಾಗದಲ್ಲಿ ಕೀರ್ತನ – ಪ್ರವಚನಕ್ಕಾಗಿ ಬಂದಿದ್ದರೂ ಅವರ ಕೀರ್ತನ, ಮಾತು ಕೇಳುವ. ಪರಿಚಯ ಮಾಡಿಕೊಳ್ಳುವ ಭಾಗ್ಯ ಬಂದಿರಲಿಲ್ಲ. ಮುಂದೊಮ್ಮೆ ಆಕಸ್ಮಿಕವಾಗಿ ಅವರೇ ಪತ್ರ ಬರೆದು ಪರಿಚಯಿಸಿಕೊಂಡರು. ಪತ್ರ ಮೂಲಕ 'ಶ್ರೀ ಮಹಾದೇವರು ಮುರುಗೋಡ' ಕುರಿತು ಕೀರ್ತನ ರೆಕಾರ್ಡಿಂಗಗಾಗಿ ಅಭ್ಯಾಸಕ್ಕೆ ಸಾಹಿತ್ಯ ಕೇಳಿದರು. ಕೆಲವು ಪತ್ರ. ಪುಸ್ತಕ ಒದಗಿಸಿದೆ. ಅನಂತರ ಪತ್ರ ಮೂಲಕವೇ ಅವರು ನನ್ನ ಪರಿಚಯ ಸ್ನೇಹವನ್ನು ಗಟ್ಟಿಗೊಳಿಸಿದರು. ಇತ್ತ ಕೊಣ್ಣೂರಿಗೆ ಬಂದಾಗ ಮನೆಗೂ ಬಂದು ಭೆಟ್ಟಿಯಾದರು. ಅವರನ್ನು ಪ್ರತ್ಯಕ್ಷ ಕಂಡು ತುಂಬ ಹರ್ಷವಾಯಿತು. ಅವರ ಸರಳ. ನೇರ ನುಡಿ. ಹಿತ ಮಿತ ಮೃದು ಮಾತು. ಸ್ವಭಾವ ಬಹಳ ಹಿಡಿಸಿದವು. ಕಾರಣಾಂತರಗಳಿಂದ ಆಗಲೂ ಪ್ರವಚನ ಕೇಳಲಾಗಿರಲಿಲ್ಲ. ಕೊನೆಗೆ ಅವರು ಅರಭಾವಿಗೆ ಬಂದಾಗ ಪುನಃ ಪ್ರವಚನಕ್ಕೆ ಆಹ್ವಾನಿಸಿ ಜ್ಞಾಪಕ ಕೊಟ್ಟರು. ತತ್‌ಕ್ಷಣ ಅರಭಾವಿಗೆ ಮಿತ್ರರೊಡಗೂಡಿ ಹೋಗಿ ಅವರ ಪ್ರವಚನ. ಪುರಾಣ ಕೇಳಿದೆ. ಅವರ ಪುರಾಣ ಅವರ ಆಕರ್ಷಣೆಯಿಂದ

ಮುಂದೆ ಶ್ರೀ ಜತ್ತಿಯವರು ಕರೆಯದಿದ್ದರೂ, ಸಮಯವಿದ್ದಾಗ್ಯೂ ಮತ್ತೆ ಮತ್ತೆ ನಾಲ್ಕಾರು ಸಾರೆ ಅರಭಾವಿಗೆ ಶ್ರೀ ಪುರಾಣ ಕೇಳಲು ನಾನಾಗಿಯೇ ಹೋದೆ.

ಅವರ ಕೀರ್ತನ ಕಲೆಗೆ, ಮಾತಿನ ಮೋಡಿಗೆ ಮನಸೋತುಹೋದೆ. ವಿಶೇಷತಃ ಬಂಡಾಯ ಮನೋಧರ್ಮದ, ಪ್ರಗತಿಶೀಲ ಲೇಖಕನಾದ ನನಗೆ ಸಾಧಾರಣವಾಗಿ ಕೀರ್ತನ, ಪುರಾಣವೆಂದರೆ ಒಂದು ಬಗೆಯ ಅಲರ್ಜಿ. ಆದರೂ ಅಲ್ಲಿಯ ಕಲಾತ್ಮಕ ಅಂಶ, ನಿರೂಪಣೆ, ಭಾವಾನಂದ, ಸೊಗಸು, ಸಂತೋಷ ಅದ್ಭುತವಾದುದು.

ಅನಂತರ ನಾನಾಗಿಯೇ ಶ್ರೀ ಜತ್ತಿಯವರನ್ನು ಕುರಿತು ಪತ್ರಿಕೆಗೆ ಸಂದರ್ಶನ ಮಾಡಿದೆ. ಅವರ ಕಿರು ಪರಿಚಯವನ್ನು 'ನನ್ನ ನೆಲದ ನಕ್ಷತ್ರಗಳು' ನನ್ನ ಕೃತಿ ಯಲ್ಲಿ ಬರೆದು ಸೇರಿಸಿದೆ. ಅಂಥ ಸಂದರ್ಭದಲ್ಲಿ ಶ್ರೀ ದಾನಪ್ಪ ಜತ್ತಿ ಕುರಿತು, ಶ್ರೀ ಅಶೋಕ ಸಮಗಂಡಿಯವರು, ಅಬ್ಬಾಸ್ ಮೂಲಿಮನಿಯವರೊಂದಿಗೆ ಸೇರಿ ಅಭಿನಂದನ ಗ್ರಂಥ ಸಂಪಾದಿಸುತ್ತಿರುವುದಾಗಿ ತಿಳಿಸಿ "ಶ್ರೀ ದಾನಪ್ಪ ಜತ್ತಿ ಅವರ ಕೀರ್ತನ ಶೈಲಿ" ಕುರಿತು ನನಗೊಂದು ಲೇಖನ ಬರೆಯಲು ಆದೇಶ ನೀಡಿದರು. ಅವರ ಪ್ರೀತಿಗೆ, ಅಭಿಮಾನಕ್ಕೆ ಸಮ್ಮತಿಸಿದೆ. ಆದರೆ ಕಾರಣಾಂತರಗಳಿಂದ ತುಂಬ ಸಮಯವಾಯಿತು.

ಶ್ರೀ ಜತ್ತಿ ಅವರ ಕೀರ್ತನ ಶೈಲಿ : ಕೀರ್ತನ ಶೈಲಿಯ ಕುರಿತು ವಿಮರ್ಶಾ ತ್ಮಕವಾದ ಅಭಿಪ್ರಾಯ ನೀಡುವುದು ಕ್ಲಿಷ್ಟಕಾರ್ಯ ! ಶ್ರೀ ಜತ್ತಿ ಹಾಗೂ ಅವರ ಸಮಕಾಲೀನ ಇತರ ಕೀರ್ತನಕಾರರನ್ನು ಈ ಸಂಬಂಧವಾಗಿ, ಈ ಸಂದರ್ಭವಲ್ಲಿ ತೌಲನಿಕವಾಗಿ ಅಭ್ಯಸಿಸಬೇಕಾಗುತ್ತದೆ. ಹಾಗೆ ಒಬ್ಬರಿಂದಿನ್ನೊಬ್ಬರನ್ನು ಹೋಲಿಸಿ ಅವರ ಕೀರ್ತನ ಶೈಲಿಯ ಕುರಿತು ಅಭಿಪ್ರಾಯ ನೀಡುವ ತೊಂದರೆ ತೆಗೆದು ಕೊಳ್ಳದೇ ಒಟ್ಟಾರೆ ಶ್ರೀ ಜತ್ತಿಯವರ ಕೀರ್ತನ, ವೈಶಿಷ್ಟ್ಯ – ಆಕರ್ಷಣೆಗಳಲ್ಲಿ ಜನಮನ ಗೆಲ್ಲಬಲ್ಲ ಗಮನಾರ್ಹ ಅಂಶಗಳೇನು ? ಎಂಬುದನ್ನು ದಾಖಲಿಸುವುದೇ ಸೂಕ್ತ, ಸಮರ್ಪಕವೆನಿಸಿ ಶ್ರೀ ಜತ್ತಿಯವರ ಕೀರ್ತನ ವಿಚಾರವಾಗಿ ನನ್ನ ಅನುಭವ, ಅನಿಸಿಕೆಗಳನ್ನು ಪ್ರಾಮಾಣಿಕವಾಗಿ ದಾಖಲಿಸಲು ನಾನಿಲ್ಲಿ ಪ್ರಯತ್ನಿಸುತ್ತೇನೆ.

'ಶೈಲಿ' ಅಂದರೆ ಸ್ಟೈಲು (style) ಪ್ರತಿಯೊಬ್ಬ ವ್ಯಕ್ತಿಗೂ ಕಲಾವಿದನಿಗೂ ಅವನ ಅಭಿವ್ಯಕ್ತಿಯಲ್ಲಿ ಪರಂಪರೆಯ ಪ್ರಭಾವ – ಪ್ರೇರಣೆಗಳು ಇರುವಂತೆಯೇ, ಪ್ರತಿಭಾವಂತ ಪ್ರತಿ ಕಲಾಕಾರನೂ ತನ್ನದೇ ಆದ ಒಂದು ಸ್ವೋಪಜ್ಞತೆ – ಸ್ವಂತಿಕೆ ಯನ್ನು, ಅಭಿವ್ಯಕ್ತಿಯಲ್ಲಿ ತನ್ನದೇ ಆದ ವಿಭಿನ್ನ ಶೈಲಿ – ಮಾರ್ಗವನ್ನು ಕಂಡು ಕೊಳ್ಳುತ್ತಾನೆ; ಅಳವಡಿಸಿಕೊಳ್ಳುತ್ತಾನೆ. ಅದರಂತೆ ಶ್ರೀ ದಾನಪ್ಪ ಜತ್ತಿಯವರು ತಮ್ಮ ಪೂರ್ವ ಪರಂಪರೆಯ ಹಿಂದಿನ ಮತ್ತು ಸಮಕಾಲೀನ ಕೀರ್ತನಕಾರರನ್ನು

ಕಂಡು ಕೇಳಿದ್ದೂ ಸಹ ತಾವು ಸ್ವಯಂ ಸಿದ್ಧ ಕೀರ್ತನಕಾರರಾಗಿ ತಮ್ಮದೇ ಆದ ಶೈಲಿ, ಛಾಪನ್ನು ಕೀರ್ತನ ಪ್ರಪಂಚದಲ್ಲಿ ಮೂಡಿಸಿದರು.

ಹರಿ ಕೀರ್ತನಕಾರರಲ್ಲಿ ಸಾಕಷ್ಟು ಪ್ರಖ್ಯಾತರು, ಹೆಸರಾಂತರು ಸಿಗಬಹುದು. ಆದರೆ ಶಿವಕೀರ್ತನ ಶರಣ ಪರಂಪರೆಯಲ್ಲಿ, ವೃತ್ತಿಪರ ಕೀರ್ತನಕಾರರಲ್ಲಿ ಶ್ರೀ ದಾನಪ್ಪ ಜತ್ತಿ ಅವರೇ ಇಂದು ಹೆಚ್ಚು ಯಶಸ್ವಿ ಕೀರ್ತನಕಾರರೆಂದು ಖಚಿತವಾಗಿ ಹೇಳಬಹುದು.

ವೀರಶೈವ ಸಿದ್ಧಾಂತದ ಮೇಲೆ ಅಪೂರ್ವ ಪ್ರಭುತ್ವ ಮಾತ್ರವಲ್ಲ, ಭಾರತದ ವಿಭಿನ್ನ ಧರ್ಮಶಾಸ್ತ್ರ, ವೇದಾಂತದವರೆಗೆ ದೇಶಿ ತತ್ತ್ವಜ್ಞಾನಿಗಳನ್ನಷ್ಟೇ ಅಲ್ಲ ಪ್ಲೇಟೋ, ಅರಿಸ್ಟಾಟಲ್, ಸಾಕ್ರೆಟಿಸ್ ಮೊದಲಾದ ವಿದೇಶಿ ಪಾಶ್ಚಾತ್ಯ ಮೀಮಾಂಸಕರನ್ನೂ ಅಧ್ಯಯನ ಮಾಡಿದ್ದಾರೆ. ಕುಮಾರವ್ಯಾಸ, ಲಕ್ಷ್ಮೀಶ, ರಾಘವಾಂಕ, ಹರಿಹರಾದಿಯಾಗಿ, ಬಸವಾದಿ ಪ್ರಮಥರು, ಹರಿದಾಸರನ್ನು ಮೊದಲು ಗೊಂಡು ನವೋದಯ ಕವಿಗಳಾದ ಶ್ರೀ ಕುವೆಂಪು, ಬೇಂದ್ರೆ, ಡಿ.ವಿ.ಜಿ, ಕಣವಿ, ಶಿವರುದ್ರಪ್ಪ, ಜೀಶಿ... ಇವರವರೆಗಿನ ಸಾಹಿತ್ಯವನ್ನೆಲ್ಲ ಓದಿ ತಿಳಿದು ಅರಗಿಸಿ ಕೊಂಡಿದ್ದಾರೆ.

ಈ ವಿಶಾಲ ವ್ಯಾಪ್ತಿಯ ಜತ್ತಿ ಅವರ ವ್ಯಾಸಂಗ ಅವರ ಕೀರ್ತನಕ್ಕೆ ವ್ಯಾಪಕ ವಾದ, ವಿಸ್ತಾರವಾದ ಅನುಭವದ ಹರವು ಒದಗಿಸಿದೆ. ಅಂತೆಯೇ ಜತ್ತಿಯವರ ಕೀರ್ತನ ಪ್ರವಚನಗಳು ಜನಸಾಮಾನ್ಯರಿಗೆ ರಂಜಿಸುವಂತೆ, ಸುಶಿಕ್ಷಿತ ಪ್ರೌಢ ಸಮಾಜಕ್ಕೂ ರುಚಿಸಬಲ್ಲವು. ಪಾಮರರಿಂದ ಪಂಡಿತರವರೆಗೆ ಎಲ್ಲರನ್ನೂ ಆಕರ್ಷಿ ಸುವ ಸಾಮರ್ಥ್ಯ ಅವರ ಶ್ರೀವಾಣಿಗೆ ಪ್ರಾಪ್ತವಾಗಿದೆ.

ಅಪ್ರತಿಮ ಪ್ರತಿಭೆ : ಕೀರ್ತನ ಶ್ರೀ ಜತ್ತಿಯವರ ಅಧ್ಯಯನದಂತೆಯೇ ಅವರ ಜನಜೀವನ ದರ್ಶನ, ಜೀವನಾನುಭವ ವಿಸ್ತಾರ! ಅದೇ ಅವರ ಕೀರ್ತನ ಕಲೆಯ ಮೂಲ ದ್ರವ್ಯ! ಆದರೆ ಅಭ್ಯಾಸ ಅನುಭವದಿಂದೆಲ್ಲರೂ ಶ್ರೇಷ್ಠ ವಾಗ್ಮಿ ಆಗಲಾರರು. ಅವರದು ಜನ್ಮದತ್ತ ಪ್ರತಿಭೆ! ಹಳ-ನಡುಗನ್ನಡ ಮಹಾಕಾವ್ಯ ಗಳನ್ನು ಅರ್ಥೈಸಿಕೊಂಡು ಜನಸಾಮಾನ್ಯರಿಗೆ ಹಿಡಿಸುವಂತೆ, ಅರ್ಥವತ್ತಾಗಿ ನಿರೂಪಿಸುವದು ಸುಲಭದ ಸಂಗತಿಯಲ್ಲ. ಹಳೆಯ ಕಾಲದ ಪವಾಡಗಳು, ದೇವರು ಧರ್ಮ ನಂಬಿಕೆಗಳಿಂದೊಡಗೂಡಿದ ಪರಂಪರಾಗತ ಪುರಾತನ ಪರಂಪರೆಯ ಪಾತ್ರ- ಕತೆಗಳನ್ನು, ಇಂದಿನ ಪ್ರಜ್ಞಾವಂತ ವೈಜ್ಞಾನಿಕ ನಿಲುವಿನ ಆಧುನಿಕ ಪ್ರೇಕ್ಷಕರೆದುರು ಪಠಣಮಾಡುವದು ಸಾದರಪಡಿಸುವದು ಕ್ಲಿಷ್ಟಕರ. ಆದರೆ ದಾನಪ್ಪ ಜತ್ತಿ ಅನು ಭಾವಿ ಶರಣ, ಸಂಭಾಷಣಾ ಚತುರ, ಸೂಕ್ಷ್ಮ ಪ್ರಸಂಗಗಳನ್ನು ವೈಜ್ಞಾನಿಕ ದೃಷ್ಟಿ ಕೋನದಿಂದ ವಿಶ್ಲೇಷಿಸುವ ಅವರ ಜಾಣ್ಮೆ ಶ್ಲಾಘನೀಯ.

ಇನ್ನೊಂದು ಮಾತು. ಶ್ರೀ ದಾಸಪ್ಪ ಜತ್ತಿ ಓರ್ವ ಉತ್ತಮ ಅಭಿನಯ ಪಟು, ರಂಗಕಲಾವಿದ. ದೊಡ್ಡಾಟದಿಂದ ಸಾಮಾಜಿಕ, ಪೈಲಾಟ, ಸಿನೇಮಾ ಅಭಿನಯದವರೆಗೂ ಅಭಿನಯದಲ್ಲಿ ಅನುಭವವಿರುವ ಪರಿಣಿತ.

ಹಾಗೆಯೇ ಜತ್ತಿ ಉನ್ನತಮಟ್ಟದ ಗಾಯಕ. ಸಂಗೀತ ಶಾರದೆ ಅವರಿಗೆ ಸಹಜವಾಗಿ ಒಲಿದಿದ್ದಾಳೆ. ಸಾವಿರಾರು ಹರಿಕೀರ್ತನಗಳು, ಶರಣರ ತತ್ತ್ವಪದಗಳು, ಅನುಭಾವ ವಚನಗಳು, ನವ್ಯದ ಭಾವಗೀತೆಗಳು ಅವರಿಗೆ ಕಂಠಪಾಠ. ಆ ವಾಣಿಯಿಂದ ಕೇಳುವುದೇ ರಸಾನುಭವ. ಸರಳ–ಸುಲಭದ ಧಾಟಿಮಟ್ಟುಗಳು ಸುಸ್ಪಷ್ಟವಾಗಿ ಕೇಳುಗರನ್ನು ತಟ್ಟುತ್ತವೆ. ಈ ಸಂಗೀತ ಅಭಿನಯಗಳ ಹಿನ್ನೆಲೆ, ಆ ವಿದ್ವತ್, ಪ್ರತಿಭೆಯೇ ಅವರ ಕೀರ್ತನದ ಸಾಮರ್ಥ್ಯಶಕ್ತಿ. ಹೀಗಾಗಿ ಶ್ರೀ ದಾಸಪ್ಪ ಜತ್ತಿ ಅವರ ಕೀರ್ತನ ಪ್ರವಚನಗಳು ಲೋಕಪ್ರಿಯ. ಗಾಯಕ, ನಟನಾದಂತೆ ಶ್ರೀ ಜತ್ತಿ ಕವಿ ಸಾಹಿತಿಯೂ ಹೌದು.

ಅವರ ಗದ್ಯ-ಪದ್ಯಗಳು ರಮ್ಯ ಮನೋಹರ, ರಸವತ್ತಾಗಿರುವವು. ಅವರ ವೈಯಕ್ತಿಕತೆ ಸ್ವಂತಿಕೆ ವ್ಯಕ್ತಿಗೋಚರವಾಗುವದೇ ಇಲ್ಲಿ! ಜತ್ತಿ ಅವರ ಗದ್ಯಕ್ಕೂ ಒಂದು ಬಗೆಯ ಲಯ, ಛಂದಸ್ಸು, ಧಾಟಿಯಿದೆ ಎಂಬುದನ್ನು ಅವರ ಕೀರ್ತನದ ರಸಾನುಭವಿಗಳೇ ಬಲ್ಲರು. ಹಾಗೆಯೇ ಅವರ ಪದಗಳು ಗದ್ಯದಂತೆ ಸರಳ, ಸುಲಭ, ಸುಭಗ, ಗಂಭೀರ. ಆ ಗದ್ಯವೂ ಪದ್ಯದಂತೆ ಸೊಗಸು; ಸುಂದರ, ಆಹ್ಲಾದಕರ ಮೋದವೀಯುವುದು. ಆ ಬಗೆಯ ಗದ್ಯದ ಶೈಲಿಗೆ, ಸೊಬಗಿಗೆ, ಮೋಡಿಗೆ ಮರುಳಾಗದವರೇ ವಿರಳ. ಅದೇ ಕೀರ್ತನ ಶ್ರೀ ಜತ್ತಿಯವರ ವಿಶಿಷ್ಟತೆ!

ತತ್ತ್ವಮೀಮಾಂಸೆ, ಅಭಿನಯ ಪ್ರಾವೀಣ್ಯ, ಗಾನ ನೈಪುಣ್ಯ, ಹಾಸ್ಯದ ವ್ಯಂಗ್ಯದ ಮೊನಚು, ನವರಸ ಕಲೆಯಲ್ಲಿ ಹದವರಿತು ಪಕ್ವಗೊಂಡ ಆ ಮಾತಿನ ಶೈಲಿಗೆ ಅಪಾರ ಜನಪ್ರಿಯತೆ, ಯಶಸ್ಸು, ಬೆಲೆ, ಬೇಡಿಕೆ, ಪ್ರಸಿದ್ಧಿ ಬಂದಿವೆ. ಮನಮುಟ್ಟಿ, ಅಂತಃಕರಣ ತಟ್ಟಿ, ಭಾವ–ಅನುಭಾವದಲ್ಲಿ ಸಮ್ಮಿಳನವಾಗುವ ಅಪರೂಪದ ಶೈಲಿ ಎನ್ನಬಹುದು.

ಅವರ ಕೀರ್ತನ ಪ್ರವಚನ ಇಂದು ಜತ್ತಿಯವರಿಗೆ ಪ್ರವೃತ್ತಿ ಮಾತ್ರವಲ್ಲ, ವೃತ್ತಿಯೂ ಆಗಿದೆ. ಆದರೂ ಆ ಪ್ರವಚನ–ಕೀರ್ತನಗಳು ಕೇವಲ ಹಣ ಅಥವಾ ಕಲೆಗಾಗಿ ಮಾತ್ರವಲ್ಲ, ನವಸಮಾಜ ನಿರ್ಮಾಣದ, ಶರಣರ ಸಾಮ್ರಾಜ್ಯವನ್ನು ಸಾಕಾರಗೊಳಿಸುವ ನೈತಿಕ ಹೊಣೆ ಜವಾಬ್ದಾರಿಯನ್ನೂ ಅವರು ಹೊತ್ತಿದ್ದಾರೆ. ಹಿಂದಿನ ಪುರಾಣ ವ್ಯಕ್ತಿಗಳ, ಶರಣ ಜೀವನ ನಿರೂಪಣೆ ಕೂಡಾ ಒಂದು ಶಿಷ್ಟ, ಸಮನ್ವಯ, ಸುಖಿ, ಸಂತೃಪ್ತ ಸಮಾಜ ಜೀವನ ನಿರ್ಮಿಸುವ ಹಂಬಲ ಅವರ

ಮಾತು, ವಚನಗಳಲ್ಲಿ. ಜನಮನವನ್ನು ತಿದ್ದಿ–ತೀಡಿ, ಆಧ್ಯಾತ್ಮಿಕ ಸಂಸ್ಕಾರವಿತ್ತು ಉತ್ತಮ ನಾಗರಿಕ ಮನುಷ್ಯನನ್ನಾಗಿ ಮಾಡುವದೇ ಈ ಕೀರ್ತನ ಕಲೆಯ ಮುಖ್ಯ ಉದ್ದೇಶವೆಂಬುದನ್ನು ಮನಗಂಡವರು – ಶ್ರೀ ದಾನಪ್ಪನವರು.

ವೈಜ್ಞಾನಿಕ ನಿಲುವಿನ ಮೇಲೆ, ಆಧ್ಯಾತ್ಮಿಕ ತಳಹದಿಯ ಮೇಲೆ ಸಮಾಜ, ರಾಜಕೀಯ ನಿರ್ಮಾಣವಾಗಬೇಕು. ಕಂದಾಚಾರ, ಅಂಧ–ಶ್ರದ್ಧೆಗಳಿಗೆ ಧರ್ಮದಲ್ಲಿ ಸ್ಥಾನವಿಲ್ಲ. ಧರ್ಮ ಬದುಕಲಿಕ್ಕೇ ಹೊರತು ಬಡಿದಾಟಕ್ಕಲ್ಲ. ಸರ್ವಧರ್ಮಗಳನ್ನು ಗೌರವಿಸುವದು, ಸಮನ್ವಯ ದೃಷ್ಟಿ, ಸಕಲರಿಗೂ ಕಲ್ಯಾಣವಾಗುವ ನುಡಿಯನ್ನೇ ನುಡಿಯುವದು. ರಾಷ್ಟ್ರೀಯತೆ, ಭಾವೈಕ್ಯತೆ, ಏಕತೆಯನ್ನು ತಿಳಿಸುವುದೇ ತನ್ನ ಕೀರ್ತನದ ವೈಶಿಷ್ಟ್ಯವೆಂದು ಜತ್ತಿ ಅವರ ಹೇಳಿಕೆ.

ಇಂದಿನ ಸಮಾಜ ದುಶ್ಚಟ, ದುರಾಚಾರ, ಭ್ರಷ್ಟಾಚಾರಗಳಿಂದ ವಿಮುಕ್ತವಾಗಿ ಶೀಲ, ಚಾರಿತ್ರ್ಯ ರೂಢಿಸಿಕೊಳ್ಳಬೇಕಾಗಿದೆ ಎಂಬ ಮೂಲಭೂತ ತಿಳುವಳಿಕೆ, ಕಲ್ಪನೆ ಎದುರಿಟ್ಟುಕೊಂಡವರು – ಶ್ರೀ ಜತ್ತಿ.

ಅವರ ಉಪದೇಶ, ಸಂದೇಶಗಳ ಬಗ್ಗೆ ಒಂದು ಪೂರ್ವ ಪ್ರಸಿದ್ಧ ಮಾತು ನೆನಪಾಗುತ್ತದೆ. ಒಂದು – ರಾಜನ ಆಜ್ಞೆಯಂತೆ, ಇನ್ನೊಂದು – ಮಿತ್ರನ ಸಲಹೆ ಯಂತೆ, ಮತ್ತೊಂದು – ಪ್ರಿಯ ಕಾಂತೆಯ ಹಿತವಚನದಂತೆ ಎಂದು ಮೂರು ಉಪದೇಶದ ಬಗೆಯನ್ನು ಹಿರಿಯ ಕವಿಗಳು ವ್ಯಾಖ್ಯಾನಿಸಿದ್ದಾರೆ. ಎಲ್ಲಕ್ಕಿಂತ ಪ್ರಿಯವಾದದ್ದು – ಕಾಂತಾ ಸಮ್ಮಿತ. ಪ್ರೇಯಸಿಯ ಒಲವಿನ ಒಳ್ನುಡಿಯಂತೆ ಇರುವದು ಯಶಸ್ವಿ ಬಗೆ – ಶೈಲಿ !

ಹಾಗೆಯೇ ಶ್ರೀ ಜತ್ತಿಯವರ ಉಪದೇಶ–ಸಂದೇಶಗಳು, ಹಿತವಚನಗಳು, ಮೃದು ಮಾತುಗಳು, ನಗೆಹನಿ, ಜೋಕು, ವ್ಯಂಗ್ಯ, ಅಡ್ಡ ಕಥೆ, ಉಪಕಥೆಗಳನ್ನು ಮನೋಜ್ಞವಾಗಿ, ಆಪ್ಯಾಯವಾಗಿ ಹೇಳುತ್ತ ಪ್ರಧಾನ ಕಥೆಗೆ ಪೋಷಕವಾಗಿ ಮೂಲ ಕಥಾ ನಿರೂಪಣೆ ಕೂಡ ಜನಮನಕ್ಕೆ ತನ್ನ ಅಂತಃಸತ್ವದ ಆತ್ಮಶಕ್ತಿಯಲ್ಲಿ ಹುದುಗಿದ ಒಳ್ಳೇತನ, ತ್ಯಾಗ, ಧರ್ಮಭಾವನೆಗಳನ್ನು ಜಾಗೃತಗೊಳಿಸಬಲ್ಲ ಧೀಶಕ್ತಿ ಸರ್ವಮಾನ್ಯ. ಅದಕ್ಕೇ ಅವರ ಮಾತು–ವಾಣಿ ಜನಾದರಕ್ಕೆ ಪಾತ್ರವಾಗಿವೆ. ನಿಜ ಹೇಳಬೇಕೆಂದರೆ, ಆ ಕೀರ್ತನ ಶ್ರವಣದ ಅನುಭವವನ್ನು "ಅನುಭಾವ ದರ್ಶನ" ಎನ್ನ ಬಹುದು. ಸಂಸ್ಕೃತಿಯ ರಾಯಭಾರಿ ಶ್ರೀ ದಾನಪ್ಪ ಜತ್ತಿ ವೃತ್ತಿಪರ, ಸಿದ್ಧ, ಪ್ರಸಿದ್ಧ, ಯಶಸ್ವಿ ಕೀರ್ತನಕಾರ. ನಮ್ಮ ಸಮಕಾಲೀನ ಶೈವ ಪರಂಪರೆಯ ಕೀರ್ತನಕಾರರಲ್ಲಿ ಅಗ್ರಶ್ರೇಣಿಯಲ್ಲಿ ನಿಲ್ಲತಕ್ಕ ಅರ್ಹತೆಹೊಂದಿದವರು.

ಒಂದು ಬಿಳೇ ಜುಬ್ಬ, ಲುಂಗಿ ಅಥವಾ ಧೋತರ, ಪ್ರವಚನ ಕಾಲಕ್ಕೆ ಮಾತ್ರ ಹೆಗಲ ಮೇಲೊಂದು ಶಾಲು. ಪ್ರವಚನಕ್ಕೆ ಕುಳಿತಾಗ ಅವರು ಶ್ರುತಿ ಗೊಳಿಸಿದ

ಮೀಸೆ. ಹೊರಗೆ ವೇದಿಕೆಯ ಕೆಳಗೆ ತನಗಿಂತ ಕಿರಿಯರಿಲ್ಲ. ವಿಶ್ವದ ಶರಣ ವಾಣಿಯಂತೆ ಅಪರಿಚಿತರಾದರೂ ಸರಿ. ತುಂಬ ವಿನಯ–ಸೌಜನ್ಯ. ನಗುಮುಖದ ಮೃದು ಮಾತುಗಳು. ಅವರು ತೋರುವ ಅನಾಸಾದೃಶ್ಯ ಪ್ರೀತಿ–ವಿಶ್ವಾಸ. ಅಭಿಮಾನ. ಆತ್ಮೀಯತೆ. ಗೌರವ–ಆದರಯುಕ್ತ ಗುಣ ಸ್ವಭಾವಗಳು ಅವಿಸ್ಮರಣೀಯ ನೆನಪುಗಳು; ಅನುಭವಗಳು.

ನುಡಿಸೇವೆಯಲ್ಲಿ ಸಂಸ್ಕೃತಿಯ ಪ್ರತಿಷ್ಠಾನದಲ್ಲಿ ತನ್ನನ್ನು ಸಮರ್ಪಿಸಿಕೊಂಡ ಶ್ರೀ ದಾನಪ್ಪ ಜತ್ತಿ ಅಂತಹ ಮಹನೀಯರನ್ನು ಸಂಸ್ಮರಿಸುವ ಅವರ ಕಲೆಗೆ. ವಿದ್ವತ್ತಿಗೆ. ಸ್ನೇಹಕ್ಕೆ. ಆತ್ಮೀಯತೆಗೆ ಪ್ರತಿಯಾಗಿ 'ಶಬ್ದಗಳ' ಮೂಲಕ ಗೌರವಿಸುವ ಸದಾವಕಾಶ ಒದಗಿಸಿಕೊಟ್ಟ ಸರ್ವಶ್ರೀ ಅಶೋಕ ಸಮಗಂಡಿ ಹಾಗೂ ಯಾವತ್ತೂ ಅಭಿನಂದನ ಸಮಿತಿಗೆ ಕೃತಜ್ಞತೆಯ ವಂದನೆಗಳು.

ಅವರಿಗೆ ೫೪ ತುಂಬುತ್ತಿರುವ ಈ ಸಮಯದಲ್ಲಿ ಅವರ ಅಭಿಮಾನಿಯಾಗಿ, ಹಿತೈಷಿಯಾಗಿ ನನ್ನ ಅಂತಃಕರಣದ ಒಲವಿನ ಸಹಸ್ರ ನಮನಗಳು – ಆ ದಿವ್ಯ ಚೇತನಕ್ಕೆ ! ನಮ್ಮ ಮಧ್ಯದ ಈ ವಾಣಿಯ ಚಿತ್ಪ್ರಭೆ ನೂರ್ಕಾಲ ಬಾಳಲಿ. ಸಮಾಜವನ್ನು ಬೆಳಗಲಿ ಎಂದು ಮನದುಂಬಿ ಹೃದಯತುಂಬಿ ಹಾರೈಸುತ್ತೇನೆ.

# ಅಪೂರ್ವ ಮಣಿಹಕಾರ

## ಡಾ. ಎಚ್. ತಿಪ್ಪೇರುದ್ರಸ್ವಾಮಿ

ಪುರಾಣ ಮತ್ತು ಕೀರ್ತನೆಗಳ ಮೂಲಕ ಗ್ರಾಮಾಂತರ ಜನತೆಯಲ್ಲಿ ಆಧ್ಯಾತ್ಮಿಕ ಜಾಗ್ರತೆಯನ್ನುಂಟುಮಾಡುತ್ತಿರುವ ಜತ್ತಿ ದಾನಪ್ಪನವರ ಮಣಿಹ ಅಪೂರ್ವವಾದುದು. ಜನರಲ್ಲಿ ಮೂಢ ನಂಬಿಕೆಗಳನ್ನು ಬಿತ್ತದೆ ಶರಣ ತತ್ತ್ವದ ಕ್ರಾಂತಿಕಾರಕ ಅಂಶಗಳನ್ನು ಆಧುನಿಕ ಯುಗಕ್ಕನುಗುಣವಾದ ರೀತಿಯಲ್ಲಿ ಪ್ರತಿಪಾದಿಸುತ್ತ ಜನಮನವನ್ನು ಜತ್ತಿಯವರು ಗೆದ್ದಿದ್ದಾರೆ. ಮುರಗೋಡದಲ್ಲಿ ಅವರ ಕಾರ್ಯಕ್ರಮವನ್ನು ಕಂಡು ನಾನು ಮಾರುಹೋಗಿದ್ದೇನೆ. ಈಗಲೂ ಆ ನೆನಪು ಹಚ್ಚ ಹಸುರಾಗಿದೆ. ದಾನಪ್ಪನವರಿಂದ ಈ ಮಂಗಳಕಾರ್ಯ ನಿರಂತರವಾಗಿ ಮುಂದುವರೆಯುತ್ತಿರುವುದು ಸಂತೋಷಕರ ವಿಷಯ. ನಿಮ್ಮ ಸಾಧನೆಯ ದ್ಯೋತಕವಾಗಿ ಅಭಿಮಾನಿಗಳು ತಮ್ಮನ್ನು ಅಭಿನಂದನ ಗ್ರಂಥದ ಮೂಲಕ ಅಭಿನಂದಿಸುತ್ತಿರುವುದು ಔಚಿತ್ಯಪೂರ್ಣವಾಗಿದೆ. ತಮಗೆ ತುಂಬು ಹೃದಯದ ಹಾರೈಕೆಗಳು.

# ಕೀರ್ತನ ಲೋಕದ ಕಣ್ಣು

## ಬ. ಗಿ. ಯಲ್ಲಟ್ಟಿ

ಜನ ಕಿಕ್ಕಿರಿದು ತುಂಬಿತ್ತು. ಆಗಲೇ ಪ್ರವಚನದ ಪ್ರಾರ್ಥನಾ ಪದ್ಯ ಪ್ರಾರಂಭವಾಗಿತ್ತು. ಹೆಜ್ಜೆಯಿಡಲು ಸಹ ಸ್ಥಳವಿರಲಿಲ್ಲ. ನಿಂತಲ್ಲಿಯೇ ನಿಂತೆ. ನನ್ನತ್ತ ಗಮನ ಹರಿಸಿದ ಕೆಲವರು ನನಗೆ ದಾರಿಮಾಡಿಕೊಟ್ಟರು. ಪ್ರವಚನಕ್ಕೆ ರಸಭಂಗವಾಗಬಾರದೆಂದು ಒಂದೆಡೆಗೆ ಸ್ಥಳಮಾಡಿ ಕುಳಿತುಕೊಂಡೆ. ದಾನಪ್ಪನವರು ದೃಷ್ಟಿಯ ಮೂಲಕ ಆದೇಶ ಕೊಟ್ಟ ಮೇರೆಗೆ. ಕೆಲಜನ (ನಾನು ಬೇಡವೆಂದರೂ) ನನ್ನನ್ನು ಕರೆದೊಯ್ದು ವೇದಿಕೆಯ ಮೇಲೆ ಕುಳ್ಳಿರಿಸಿದರು. ನನ್ನಿಂದಾದ ತೊಂದರೆಗಾಗಿ ಕ್ಷಮೆ ಕೇಳಿಕೊಂಡೆ. ಮೇಲೆ ಬರಮಾಡಿಕೊಂಡ ಬಗ್ಗೆ ಕೃತಜ್ಞತೆಯನ್ನು ಸಲ್ಲಿಸಿದೆ. ಅಂತೂ ಪ್ರವಚನ ಪ್ರಾರಂಭವಾಯಿತು. ವೇಳೆ ಸರಿದುದೇ ಗೊತ್ತಾಗಲಿಲ್ಲ. ಆಗಾಗ ಪುಟ ನೆಗೆವ ನಗೆ, ಚಪ್ಪಾಳೆಯ ಉದ್ಗಾರ. ಪ್ರವಚನದ ಪರಿಣಾಮಕ್ಕೆ ಶ್ರೀಕಾರ ಬರೆದಂತಿತ್ತು.

ಅಂದಿನ ದಾನಪ್ಪನಲ್ಲಿ ಇಂದಿನ ದಾನಪ್ಪನವರಲ್ಲಿ ನೆಲ ಮುಗಿಲಿನಂತರ. ದುಡಿಯುವುದಿಲ್ಲ, ದುಃಖಪಡುವುದಿಲ್ಲ. ದುಡ್ಡಿನ ಗಳಿಕೆಯಿಲ್ಲ. ಮನೆಯೆನ್ನುವುದಿಲ್ಲ. ಮಾರು ಎನ್ನುವುದಿಲ್ಲ ಹೀಗೆ ಗೊಣಗಾಟ ಮನೆಯವರಿಂದ. ಭಾರ ಹೊರುವ ಮಗನೇ ಮನೆಗೆ ಭಾರವಾದರೆ ಹೇಗೆ? ಬನಹಟ್ಟಿಯ ಬಂದಿ ಮುರಿಗೆಪ್ಪನವರು ಇವರ ಸೋದರಮಾವನಾಗಬೇಕು. ಸೋದರಳಿಯನಿಗೆ ಬುದ್ಧಿವಾದ ಹೇಳಿದರು ಮುರಿಗೆಪ್ಪನವರು. ಮಾವನವರ ಮಾತಿಗೆ ಪ್ರತಿಯಾಡಲಿಲ್ಲ. ಮೇಲಿನ ದಾನಪ್ಪ ಕೇಳಬಹುದು; ಒಳಗಿನ ದಾನಪ್ಪ ಕೇಳಬೇಕಲ್ಲ!

ಒಳಗೊಳಗೇ ಅಭಿನಯ ನಡೆಸುತ್ತಲಿದ್ದ ನಟ ಹೊರಗೆ ಅಭಿನಯವನ್ನೂ ಪ್ರಕಟಗೊಳಿಸಲು ಮುಂದಾದನು. ಹದಿವರೆಯದಲ್ಲಿಯೇ 'ಅರುಣೋದಯ ನಾಟ್ಯ ಸಂಘ'ವನ್ನು ಕಟ್ಟಿದರು. ದಾನಪ್ಪ ಅದೆಷ್ಟೋ ನಾಟಕಗಳನ್ನು ರಂಗ ಭೂಮಿಯ ಮೇಲೆ ತಂದರು. ನೊಂದರು. ಆ ನೋವಿನ ಗರ್ಭದಿಂದಲೇ ಒಬ್ಬ ಉತ್ತಮ ಕಲಾವಿದ ಉದಯವಾದರು. ಶ್ರೇಷ್ಠ ಕೀರ್ತನಕಾರರಾಗಿ ಮೂರ್ತಿಮಂತಾದರು.

ಮದುವೆಯೂ ಆಯಿತು. ಸಂಸಾರ ಕಟ್ಟಿಕೊಂಡದ್ದೂ ಆಯಿತು. ಒಂದಲ್ಲ. ಎರಡು ಸಂಸಾರಗಳ ಹೊರೆ ದಾನಪ್ಪನವರ ಹೆಗಲ ಮೇಲೆ. ಒಂದು ಮನೆಯ ಸಂಸಾರ. ಇನ್ನೊಂದು ಮನೆಯ ಹೊರಗಿನ ಸಂಸಾರ – ಕಲಾ ಪ್ರಪಂಚದ

ಸಂಸಾರ! ಈಗಲೂ ತಮ್ಮ ಮನೆಯಲ್ಲಿ ಇರುವುದೇ ಅಪರೂಪ. ಜಗತ್ತನ್ನೇ ಸಂಸಾರವನ್ನಾಗಿ ಕಟ್ಟಿಕೊಂಡವರಿಗೆ ಆ ಮನೆಯೇನು? ಈ ಮನೆಯೇನು? ಅದನ್ನು ಗಳಿಸಿದರೆ ಇದನ್ನು ಕಳೆದುಕೊಳ್ಳಬೇಕಾಗುತ್ತದೆ. ಇದನ್ನು ಗಳಿಸಿದರೆ ಅದನ್ನು ಕಳೆದುಕೊಳ್ಳಬೇಕಾಗುತ್ತದೆ. ಕಳಕೊಂಡದ್ದು, ಗಳಿಸಿದ್ದು – ಯಾವುದರ ಲೆಕ್ಕವಿಡದ ಕಲಾವಿದರು – ದಾನಪ್ಪನವರು. ಲೆಕ್ಕವಿಟ್ಟವರು ಲೆಕ್ಕಕ್ಕೆ ಬರುವುದೇ ಇಲ್ಲ!

ಈಗ ದಾನಪ್ಪ ಬೆಳೆದು ದೊಡ್ಡವರಾಗಿದ್ದಾರೆ. ವಯಸ್ಸಿನಿಂದ, ಮನದಿಂದ, ಪ್ರತಿಭೆಯಿಂದ, ಕಲಾವಂತಿಕೆಯಿಂದ, ಲೋಕಾನುಭವದಿಂದ, ಆತ್ಮಾನುಭವದಿಂದ ಪುರಾಣವೆಂದರೆ ಪುರಾಣ. ಪ್ರವಚನವೆಂದರೆ ಪ್ರವಚನ. ಕೀರ್ತನವೆಂದರೆ ಕೀರ್ತನ. ಎಲ್ಲದರಲ್ಲಿಯೂ ಪ್ರಾವೀಣ್ಯ. ಎಲ್ಲದರಲ್ಲಿಯೂ ನಾವೀನ್ಯ. ಇವರ ಬಾಯಿಂದ 'ಬಸವಪುರಾಣ' ಕೇಳಬೇಕು. ಒಮ್ಮೆ ಕೇಳಿದವರು ಧನ್ಯರಾಗುತ್ತಾರೆ. ಹನ್ನೆರಡನೆಯ ಶತಮಾನದ ಬಸವಕ್ರಾಂತಿ ಮತ್ತೇ ಮೈದೆರೆದುಕೊಳ್ಳುತ್ತದೆ. ಅಸಮಾನತೆಗೆ ಮನಸ್ಸು ರೋಸಿಹೋಗುತ್ತದೆ. ಸಮಾನತೆಗೆ ಮನಸ್ಸು ವಾಲುತ್ತದೆ. ಶರಣರ ಸಾಧನೆ–ಸಿದ್ಧಿಗೆ ಮನ ಬೆರಗಾಗುತ್ತದೆ.

ಪುರಾಣ, ಪ್ರವಚನಗಳಲ್ಲಿ ಜತ್ತಿ ದಾನಪ್ಪನವರು ಬಳಸುವ ದೃಷ್ಟಾಂತಗಳನ್ನು, ಹಳಗನ್ನಡ ಕಾವ್ಯದ ಪದ್ಯಗಳನ್ನು ನೋಡಿದರೆ ಇವರೊಬ್ಬ ಪಂಡಿತರಿರಬೇಕು ಎನಿಸುತ್ತದೆ. ಅಹುದು ಇವರು ಪಂಡಿತರೆ! ಶಾಲೆ–ಕಾಲೇಜಿನಲ್ಲಿ ಕಲಿತ ಪದವೀಧರ ಪಂಡಿತರಲ್ಲ ಇವರು. ವಿಶ್ವವೇ ಇವರಿಗೆ ವಿಶ್ವವಿದ್ಯಾಲಯ. ಜನತೆಯೇ (ಜೀವಕುಲ ಜಂಗಮವೇ) ಗುರು. ಆ ಜನತೆಗೇ ಕಲಿಸುವ ಗುರುವಾಗಿದ್ದಾರೆ ಇಂದು. ಇದಕ್ಕಿಂತ ಮಿಗಿಲಾದ ಧನ್ಯತೆ ಇನ್ನಾವುದಿದೆ? ಸೀಮಿತ ಕ್ಷೇತ್ರದಲ್ಲಿ, ಸೀಮಿತ ವಿಷಯದಲ್ಲಿ ಕಲಿತು ಪಡೆದುಕೊಂಡ ಪದವಿ ಪ್ರಶಸ್ತಿಗಳಿಂದ ಒಬ್ಬ ಮನುಷ್ಯನ ಮಟ್ಟವನ್ನು ಅಳೆಯಲಾಗುತ್ತದೆ. ಹೊರಗೆ ಅಳೆಯುವ ಮಾನದಂಡವಿದು. ಒಳಗಿನ ಮನುಷ್ಯನನ್ನು ಯಾರು ಅಳೆದಿದ್ದಾರೆ? ಯಾವ ಮಾನದಂಡದಿಂದ? ಒಳಗೊಬ್ಬ ಮನುಷ್ಯನಿದ್ದಾನೆ ಎಂಬುದು. ಅವನೇ ಮುಖ್ಯ ಎಂಬುದು. ಆ ಮುಖ್ಯ ಮನುಷ್ಯನನ್ನು ಗುರುತಿಸುವುದೇ ಜೀವನದ ಮುಖ್ಯ ಗುರಿಯೆಂಬುದು ಎಷ್ಟು ಜನರಿಗೆ ಗೊತ್ತುಂಟು ಇಲ್ಲಿ? ಕೆಲವರಿಗಾದರೂ ಗೊತ್ತುಂಟು. ಆದರೆ ಆ ಮುಖ್ಯ ಮನುಷ್ಯನನ್ನು ಗುರುತಿಸುವಲ್ಲಿ ಸೋಲುತ್ತಾರೆ. ಗುರುತಿಸಿಯೂ ಅವನಂತೆ ಗುರುವಾಗಿ ಬೆಳೆಯುವಲ್ಲಿ ವಿಫಲರಾಗುತ್ತಾರೆ.

ಅಗ್ರಹಾರದವರ ಸಂಬಂಧ ಕಡಿದುಕೊಂಡು ಅಗ್ರಹಾರದಿಂದ ಸಿಡಿದು ಬಂದ ಬಸವಣ್ಣ – ಸಮಾಜದ ಕಣ್ಣಲ್ಲಿ ಅಂದು ಸಮಾಜ ವಿರೋಧಿಯಾಗಿ ಕಂಡಿರಬೇಕು.

ಆದರೆ ಆ ಸಮಾಜಕ್ಕೆ ಶರಣತ್ವದ ಕಾಯಕಲ್ಪಕೊಟ್ಟು ಆ ಸಮಾಜವನ್ನೇ ಜಂಗಮ ವನ್ನಾಗಿ ಪ್ರಸಾದೀಕರಿಸಿದ ಮಹಾಮಾನವ ಬಸವಣ್ಣನನ್ನು ಅಂದು ಅದಾರು ಗುರುತಿಸಿದ್ದರು ? ಮೇಲೆ ನೋಡುವುದಕ್ಕೆ ಹುಚ್ಚರಂತೆ ಕಾಣುತ್ತಿದ್ದ ಪರಮಹಂಸರು ಜಗತ್ತಿನ ಹುಚ್ಚನ್ನೇ ಬಿಡಿಸಬಲ್ಲ ಒಬ್ಬ ಮಹಾ ತತ್ತ್ವಜ್ಞಾನಿ ಎಂಬುದನ್ನು ಗುರುತಿಸಲು ಕಾಲಾವಕಾಶವೇ ಬೇಕಾಯಿತು. ಪರಮಹಂಸರ ವಿವೇಕವನ್ನು ಬಿತ್ತರಿಸಲು ಒಬ್ಬ ವಿವೇಕಾನಂದರೇ (ಜಗತ್ತಿನ ವೇದಿಕೆಯ ಮೇಲೆ) ಬರ ಬೇಕಾಯಿತು. ಆದ್ದರಿಂದ ಮೇಲಿನಿಂದ ನೋಡುವ ಕಣ್ಣಿಗೆ ಒಳಗಿನ ಒಳ ನಿಧಾನ ಕಾಣುವುದು ಹೇಗೆ ?

ಈ ಮಾತನ್ನು ಹೇಳುವ ಕಾರಣವೇನೆಂದರೆ ಲೋಕದ ಕಣ್ಣಿಗೆ ಅಂದು ಕಂಡ ದಾನಪ್ಪನೇ ಬೇರೆ. ಇಂದು ಕೀರ್ತನಕೇಸರಿಯಾಗಿ ಲೋಕದ ಕಣ್ಣನ್ನು ತೆರೆಯಿಸುತ್ತಿರುವ ದಾನಪ್ಪನವರೇ ಬೇರೆ. ಜತ್ತಿಯವರಿಗಿಂತ ದಾನಪ್ಪನವರೆ ಹೆಚ್ಚು ಖ್ಯಾತನಾಮರು. ಅವರು ಪುರಾಣವನ್ನೇ ಹೇಳಲಿ, ಕೀರ್ತನ ಪ್ರವಚನವನ್ನೇ ಹೇಳಲಿ – ಎಲ್ಲವೂ ಲೀಲಾಜಾಲವಾಗಿ ಪ್ರವಹಿಸುತ್ತದೆ. ವ್ಯಾಖ್ಯಾನಕಾರ ತನ್ಮಯ ವಾಗಿ ಹೇಳಿದರೆ ಕೇಳುಗರು ತನ್ಮಯವಾಗಿ ಕೇಳುತ್ತಾರೆ. ಹೇಳುತ್ತೇನೆ ಎನ್ನುವ ಭಾವ ಅವರಿಗಿರಬಾರದು. ಕೇಳುತ್ತೇನೆ ಎನ್ನುವ ಭಾವ ಇವರಿಗಿರಬಾರದು. ಅದು ನಿಜವಾದ ಕೀರ್ತನ. ಅದು ನಿಜವಾದ ಪುರಾಣ – ಪ್ರವಚನ. ಹೃದಯ ತುಂಬಿ ಬಂದದ್ದು ಜನರ ಹೃದಯದಲ್ಲಿ ಸೇರುತ್ತದೆ.

ಆರಿಸಿಕೊಂಡ ವಸ್ತು ಹಿಂದೆ ಉಳಿಯುತ್ತದೆ. ಅದಕ್ಕೆ ಪೋಷಕವಾಗ ಬಹುದಾದ ದೃಷ್ಟಾಂತ ಉದಾಹರಣೆಗಳು ಮುಂದುವರಿಯುತ್ತವೆ. ದೃಷ್ಟಾಂತಕ್ಕೆ ಒಂದು ಅಡ್ಡಗತೆ, ಆ ಕತೆಗೆ ಇನ್ನೊಂದು ಕತೆ. ಸಾಲಂಕೃತವಾಗಿ ವಿಜೃಂಭಿಸುತ್ತವೆ, ಶ್ರೀಮಂತ ಕನ್ಯೆಯ ಮೈಮೇಲಿನ ವಸ್ತ್ರ ಒಡವೆಗಳಂತೆ ! ಮೂಲಮೂರ್ತಿ ಅಡಗಿ ಒಮ್ಮೊಮ್ಮೆ ವಸ್ತ್ರ ಒಡವೆಗಳೇ ಎದ್ದು ಕಾಣಬಹುದು. ಹುಟ್ಟುವಾಗಲೇ ಮಾತು ಕಲಿತು, ಮಾತನಾಡುತ್ತಲೇ ಮೂಡಿಬರುತ್ತದೆ ಇಂಥ ಕೀರ್ತನ ಪ್ರವಚನ ಕಲೆಯೆಂಬುದು. ಅದಿಲ್ಲದಿದ್ದರೆ ಜನ ಮೈಮರೆತು ಗಂಟೆಗಟ್ಟಲೆ ಕುಳಿತಾರು ಹೇಗೆ ? ಮನದ ಕಿರಿ ಕಿರಿಯನ್ನು ಮರೆತಾರು ಹೇಗೆ ? ಗಾಳಿಪಟ ಎಷ್ಟುದೂರ. ಎಲ್ಲಿಯೇ ಹಾರಿದರೇನು ? ಸೂತ್ರವಿರಲೇಬೇಕಲ್ಲ ಪಟ ಹಾರಿಸುವವನ ಕೈಯಲ್ಲಿ ! ಹಾಗೆಯೇ ದಾನಪ್ಪನವರು ಮೂಲ ವಸ್ತುವಿಗೆ ಮತ್ತೆ ಬಂದು ನಿಲ್ಲುತ್ತಾರೆ. ಕಥಾ ವಸ್ತುವಿನ ದರ್ಶನ ಮಾಡಿಸುತ್ತಾರೆ. ಅದರ ಮಹಿಮೆ. ಮಹತ್ವ ಕೇಳುಗರಲ್ಲಿ ಅಚ್ಚೊತ್ತಿ ನಿಲ್ಲುವಂತೆ ಮಾಡುತ್ತಾರೆ. ಇಂಥ ಸಹಜ ಕಲಾತ್ಮಕತೆಯಲ್ಲಿಯೇ ಕೃತಾರ್ಥ ರಾಗುತ್ತಾರೆ – ಕಲಾವಿದರು. ಧನ್ಯರಾಗುತ್ತಾರೆ – ಶ್ರೋತೃಗಳು.

ವೇದಿಕೆಯ ಮೇಲಿನ ಕೀರ್ತನಕಾರ ದಾನಪ್ಪನವರೇ ಬೇರೆ. ವೇದಿಕೆಯು ಯಿಂದೀಚೆ ಬಂದ ದಾನಪ್ಪನವರೇ ಬೇರೆ. ಪ್ರಸಿದ್ಧ ಪ್ರವಚನಕಾರರೆಂಬ ಹಮ್ಮು ಬಿಮ್ಮು ಇಲ್ಲ. ಸರಳ ಹೃದಯಿ, ಸದುವಿನಯಿ, ಸ್ನೇಹಜೀವಿ. ದಾನಪ್ಪನವರಲ್ಲೊಬ್ಬ ಮೋಡಿಕಾರ, ಹಾಸ್ಯಗಾರ ಇರುವನೆಂಬ ಸುಳುಹು (ಅವರನ್ನು ನೋಡಿದಾಗ) ಸಿಗುವುದೇ ಇಲ್ಲ. ಒಳಗಂಟು ಹೊರಗೆ ತೋರಬಾರದು. ಆದರೆ ಬರಹ ಹೇಗೋ ಹಾಗೆಯೇ ಬದುಕು ಇರಬೇಕು. ಕೀರ್ತನಕಾರನ ಹೇಳಿಕೆಯು ಹರಹು ಹೇಗೋ ಹಾಗೆಯೇ ಹೇಳುವ ಕಲಾವಿದ ಇರಬೇಕು. ಈ ಮಾತಿಗೆ ಶ್ರುತಿ ಹಿಡಿದು ನಡೆಯು ವಂಥವರು – ದಾನಪ್ಪನವರು.

ದಾನಪ್ಪ ಜತ್ತಿಯವರ ಕೀರ್ತನ. ಪುರಾಣ. ಪ್ರವಚನ ಎಲ್ಲವೂ ಎಲ್ಲರಿಗೂ ಅಪ್ಯಾಯಮಾನ ! ಅನ್ನದಾಸೋಹದಿಂದ ಹೊಟ್ಟೆತುಂಬಿ ತೃಪ್ತಿಯಾಗುತ್ತದೆ. ಜ್ಞಾನದಾಸೋಹದಿಂದ ತನು–ಮನ–ಭಾವ ತುಂಬಿ ಹೊಸ ಮನುಷ್ಯನಾಗುತ್ತಾನೆ ಕೇಳುಗ. ಹೀಗೆ ಮನುಷ್ಯನೊಳಗಣ ವಿಶೇಷ ಮಾನವನನ್ನು ಗುರ್ತಿಸಿಕೊಳ್ಳುವಲ್ಲಿ, ತನ್ನನ್ನು ತಾನು ಎಚ್ಚರಿಸಿಕೊಳ್ಳುವಲ್ಲಿ ದಾನಪ್ಪನವರ ಪುರಾಣ–ಪ್ರವಚನ–ಕೀರ್ತನ ಬಹಳಷ್ಟು ಕೆಲಸಮಾಡಿದೆ ಎಂದು ಹೇಳಿದರೆ ಉತ್ಪ್ರೇಕ್ಷೆಯಲ್ಲ.

## ಸುಭಾಸ ಯಾದವಾಡ

ಪ್ರತಿಭಾವಾನರು ವಿರಳ. ಬಹುಮುಖ ಪ್ರತಿಭೆಯುಳ್ಳವರು ಇನ್ನೂ ವಿರಳ. ತಮ್ಮ ಪ್ರತಿಭೆಯನ್ನು ಮತ್ತೊಬ್ಬರಿಗಾಗಿ ಹೃತ್ಪೂರ್ವಕವಾಗಿ ಧಾರೆ ಎರೆದು ಸಂತೋಷಪಡುವವರು ಅತಿ ವಿರಳ. ಅಂಥ ವಿರಳರಲ್ಲಿ ಶ್ರೀ ದಾನಪ್ಪ ಜತ್ತಿ ಅವರೂ ಒಬ್ಬರು.

ಜತ್ತಿ ಎಂದೊಡನೆ ಮಾಜಿ ಉಪರಾಷ್ಟ್ರಪತಿ ಶ್ರೀ ಬಿ. ಡಿ. ಜತ್ತಿ ಅವರ ನೆನಪು ಬರುವದು ಸ್ವಾಭಾವಿಕ. ಅವರು ರಾಜಕಾರಣಿಗಳು; ಇವರು ಪ್ರವಚನಕಾರರು, ಸಂಗೀತಗಾರರು, ನಾಟಕಕಾರರು, ಸಿನೇಮಾ ನಟರು. ಕೀರ್ತನಕಾರರು. ಸಾಹಿತಿಗಳು...... ಹೀಗೇ ಪಟ್ಟಿ ಬೆಳೆಯುತ್ತ ಹೋಗುವದು. ಅವರು ಜಮಖಂಡಿ ತಾಲೂಕ ಸಾವಳಗಿಯವರು; ಇವರು ವಿಜಾಪೂರ ತಾಲೂಕ ತಿಕೋಟಾದವರು. ಅವರು ರಾಷ್ಟ್ರಮಟ್ಟದಲ್ಲಿ ಬೆಳೆದು ಉಪರಾಷ್ಟ್ರಪತಿ ಹಾಗೂ ಕೆಲವು ಸಮಯ ರಾಷ್ಟ್ರಪತಿ ಕಾರ್ಯವನ್ನು ನಿರ್ವಹಿಸಿದವರು; ಇವರೂ ರಾಜಕಾರಣದಲ್ಲಿ ಕೆಲ ಸಮಯ ಇದ್ದು, ನಂತರ ಕಲೆಗಾಗಿ ತಮ್ಮನ್ನು ಅರ್ಪಿಸಿಕೊಂಡವರು. ವಿವಿಧ ಕಲೆಗಳನ್ನು ತಮ್ಮವನ್ನಾಗಿಸಿಕೊಂಡವರು. ಇವರ ಸಂಗೀತ ಕೀರ್ತನೆಗಳನ್ನು ಕೇಳಿಯೇ ಅವು ಹೇಗಿರುತ್ತವೆ ಎಂಬುದನ್ನು ಅರಿಯಬೇಕು. ರೇಡಿಯೋ – ಟೇಪ ಮೂಲಕ ಅವರ ಸಂಗೀತ–ಕೀರ್ತನ ಕೇಳಿ ತೃಪ್ತಿಪಟ್ಟುಕೊಂಡವರು; ಅವರ ಹಾವಭಾವ–ಅಭಿನಯ ದಿಂದ ವಂಚಿತರಾಗಿರುತ್ತಾರೆ.

ಶರಣರ ವಚನಗಳನ್ನು ಹಾಡುವಾಗ ಭಕ್ತಿರಸವನ್ನು ತುಂಬುವ ದಾನಪ್ಪ ನವರು, ಕೆಲವು ಜಾನಪದ ಗೀತೆಗಳನ್ನು ಹಾಡುವಾಗ ಹೆಣ್ಣಾಗಿಬಿಡುತ್ತಾರೆ. ಹೆಣ್ಣುಮಕ್ಕಳೂ ಅವರ ನಟನೆ–ನಾಚುವಿಕೆಗಳನ್ನು ಕಲಿತುಕೊಳ್ಳಬೇಕು ! ಹಾಗಿರುತ್ತದೆ ಪ್ರಸಂಗ. ಅವರು ಹಾಸ್ಯರಸ ಹರಿಸತೊಡಗಿದರೆ ನಕ್ಕು ನಕ್ಕು ಹೊಟ್ಟೆ ಹುಣ್ಣಾಗುತ್ತದೆ. ಬೀಚಿಯವರ ಮಾನಸ ಪುತ್ರ 'ತಿಮ್ಮ' ಕೇಳುಗರ ಕಂಕುಳಲ್ಲಿ ಕಚಗುಳಿ ಇಡುತ್ತಾನೆ. 'ತಿಮ್ಮ' ಖ್ಯಾತ ಸಾಹಿತಿ ಬೀಚಿಯವರು ಸೃಜಿಸಿದ ವ್ಯಕ್ತಿ. ದಾನಪ್ಪನವರು 'ತಿಮ್ಮ' ತಮ್ಮ ಮಗನೇ ಎಂಬಂತೆ ಅವನೊಂದಿಗೆ ಒಡನಾಡುತ್ತಾರೆ. ತಿಮ್ಮ ಬೀಚಿಯವರ ನಿಧನದಿಂದ ಅನಾಥನಾಗಿ ದಿಕ್ಕುಗಾಣದೇ ಹೊರಟಿರಬಹುದು. ತಿಕೋಟಾದ ಕಡೆಗೆ ಅವನ ಮುಖ ಹೊರಳಿತೋ ? ಅಥವಾ ದಾನಪ್ಪನವರ ಮುಖ ಬಳ್ಳಾರಿ ಕಡೆಗೆ ಹೊರಳಿತೋ ? ಅಂತೂ ಇಬ್ಬರ ಭೇಟಿ

ಯಾಯಿತು. ತಿಮ್ಮ ತಂದೆಯನ್ನು ಮರಳಿ ಪಡೆದಂತೆ – ದಾನಪ್ಪನವರು ಹುಡುಕು ತ್ತಿರುವ, ಕಳೆದುಹೋದ ಮಗ ಮತ್ತೆ ಸಿಕ್ಕಂತೆ ಸಂತೋಷಪಟ್ಟಿರಬಹುದು. ಕಳೆದುಹೋದುದು ಸಿಕ್ಕಾಗ ಸಂತೋಷವಾಗುವದು ಸ್ವಾಭಾವಿಕ. ಇದರಲ್ಲಿ ವಿಶೇಷ ವೇನಿರುವದಿಲ್ಲ. ಆದರೆ ದಾನಪ್ಪ–ತಿಮ್ಮರ ಮಿಲನ ಅವರಿಬ್ಬರಿಗೇ ಸಂತೋಷ ನೀಡದೇ ಸಹಸ್ರ ಸಹಸ್ರ ಜನ ಶ್ರೋತೃಗಳಿಗೆ ಸಂತೋಷ ನೀಡುತ್ತಿರುವದು ಒಂದು ವಿಶೇಷ.

ತಿಮ್ಮ ದಾನಪ್ಪನವರ ಪ್ರವಚನ ಕೀರ್ತನಗಳಲ್ಲಿ ಮಾತ್ರ ಪ್ರಕಟವಾಗುತ್ತಾ ನೆಂದೇನಲ್ಲ. ಊಟ–ಉಪಹಾರದ ಸಮಯವಿರಬಹುದು. ಹರಟೆ ಇರಬಹುದು; ಎಲ್ಲೆಂದರಲ್ಲಿ ತಿಮ್ಮ ಪ್ರಕಟವಾಗುತ್ತಾನೆ. ಹಾಸ್ಯದ ಹೊನಲು ಹರಿಸುತ್ತಾನೆ, ವಿಡಂಬಿಸುತ್ತಾನೆ, ಟೀಕಿಸುತ್ತಾನೆ. ಚುಚ್ಚುತ್ತಾನೆ: ಏನೆಲ್ಲ ಮಾಡುತ್ತಾನೆ. ಆದರ ತನ್ನ ತಂದೆ–ದಾನಪ್ಪ ಮಾತ್ರ ಇರಬೇಕು. ಬೀಚಿ ಮೂಲಕ ಪುಸ್ತಕ–ಲೇಖನಗಳಲ್ಲಿ ಓಡಾಡಿದ ತಿಮ್ಮ ಈಗ ಪುರಾಣ, ಕೀರ್ತನ, ಪ್ರವಚನಗಳಲ್ಲಿ ಲವಲವಿಕೆಯಿಂದ ಸುಳಿದಾಡುತ್ತಿದ್ದಾನೆ.

ಅನೇಕ ಶರಣ–ಶರಣೆಯರ ಕೀರ್ತನಗಳನ್ನು ಮಾಡುವ ಶ್ರೀ ದಾನಪ್ಪನವರು ಅಭಿನಯ ಕಲೆಯಲ್ಲಿಯೂ ಸಿದ್ಧಹಸ್ತರು. ನಾಟಕ ಸಿನೇಮಾಗಳಲ್ಲಿಯೂ ಪಾತ್ರ ಧಾರಿಗಳಾಗಿ ನಟಿಸಿದ್ದಾರೆ.

ಕೆ. ಎನ್. ಸಾಳುಂಕೆಯವರ "ದೇವರಿಗೆ ನೆನಪಿಲ್ಲ" ನಾಟಕದಲ್ಲಿ ದಾನಪ್ಪನವರು ಹಾಸ್ಯ ಪಾತ್ರದಲ್ಲಿ ಕಂಡ ನೆನಪು ಇನ್ನೂ ಮಾಸಿಲ್ಲ. ಕೋಳಿ ಹಿಡಿದುಕೊಂಡು ಕುಂಟುತ್ತ ಬರುವ ಬಟಾಟೆ ಪಾತ್ರದ ದಾನಪ್ಪನವರು ೧೫–೨೦ ವರ್ಷ ಕಳೆದರೂ ನೆನಪಿನಲ್ಲಿ ಸ್ಥಿರವಾಗಿ ಉಳಿದಿದ್ದಾರೆ.

ಸಾಹಿತ್ಯ ಕ್ಷೇತ್ರದಲ್ಲಿಯೂ ಕೃಷಿ ಮಾಡಿದ ದಾನಪ್ಪನವರು ಕೆಲವು ಪುಸ್ತಕ ಗಳನ್ನು ಪ್ರಕಟಿಸಿದ್ದಾರೆ. ಯುವ ಸಾಹಿತಿಗಳನ್ನು ಪ್ರೋತ್ಸಾಹಿಸುತ್ತಾರೆ. ಪ್ರೀತಿ ಸ್ನೇಹಗಳಿಂದ ಎಳೆಯರನ್ನು ಮಾತನಾಡಿಸುತ್ತಾರೆ. ಪೂಜ್ಯರಲ್ಲಿ ಹಿರಿಯರಲ್ಲಿ ಭಯ ಭಕ್ತಿಯನ್ನಿಟ್ಟುಕೊಂಡು ವಿನಯಶೀಲರಾಗಿ ವರ್ತಿಸುತ್ತಾರೆ. ಪ್ರತಿ ವರ್ಷ ತಮ್ಮ ತಾಯಿಯವರ ಪುಣ್ಯತಿಥಿಯನ್ನು ಜ್ಞಾನ ಸತ್ರದ ರೂಪದಲ್ಲಿ ಆಚರಿಸುತ್ತಾರೆ.

ದಾನಪ್ಪನವರ ಜೀವನವೇ ಜ್ಞಾನಮಯ. ವಿವಿಧ ಮಾಧ್ಯಮಗಳ ಮೂಲಕ ಜ್ಞಾನ ದಾನ ಮಾಡುವ ಕಲೆ ಇವರಿಗೆ ಕರಗತವಾಗಿದೆ. ಐವತ್ನಾಲ್ಕು ವರುಷಗಳ ಹಿಂದೆ ಇವರ ಪೂಜ್ಯ ಮಾತೋಶ್ರೀ – ನನ್ನ ಮಗ ದಾನಿಯಾಗಲಿ, ಹೆಸರುವಾಸಿ

ಯಾಗಲಿ ಎಂದು ಹರಿಸಿ 'ದಾನಪ್ಪ' ಎಂದು ಹೆಸರಿಟ್ಟಿದ್ದರೋ ಏನೋ! ಮಗ ಹೆಸರಿಗೆ ತಕ್ಕಂತೆ ದಾನಿಯಾಗಿದ್ದಾನೆ. ಮಾತ್ರ ಹರಿಕೆ ಫಲಿಸಿದೆ. ಕಲೆ ಕುಸುರೊಡೆದು ಪಲ್ಲವಿಸಿದೆ. ಅದು ಇನ್ನೂ ಹರಿತವಾಗಿ, ಹಾರ್ದಿಕವಾಗಿ, ನಿರಂತರವಾಗಿ ಹರಿವಂತಾಗಬೇಕು. ದಯಾಘನ ಅಂಥ ಶಕ್ತಿಯನ್ನು ಅವರಿಗೆ ಕರುಣಿಸುವಂತಾಗಲಿ.

# ಬಿಜಾಪೂರದ ಬೀಚಿ

## ಡಾ. ಕೆ. ಮುದ್ದಣ್ಣ (ಸತ್ಯಾನಂದ)

ಮಾನ್ಯರ ಪರಿಚಯವಾದುದು ಬಿಜಾಪೂರದಲ್ಲಿ, ೧೯೬೨ ರಲ್ಲಿ ನಾನು ಅಲ್ಲಿಗೆ ಹೋಗಿ ಜಿಲ್ಲಾ ಸರ್ಜನ್ನನಾಗಿ ೧೯೭೧ರವರೆಗೆ ಕೆಲಸಮಾಡುವ ಸಮಯದಲ್ಲಿ.

ನನ್ನ ಆತ್ಮೀಯ ಬಳಗದಲ್ಲಿ ಶ್ರೀ ಜತ್ತಿಯವರೂ ಒಬ್ಬರು. ನನ್ನ ಸಾಹಿತಿ ಬಳಗ ಅಪಾರವಾದದ್ದು. ಅದರಲ್ಲಿ ಅಪಾರ ಪ್ರೀತಿ. ವಿಶ್ವಾಸಗಳಿಂದ ಬೆರೆತವರು ಶ್ರೀ ಜತ್ತಿಯವರು, ಶ್ರೀ ಶಂ. ಗು. ಬಿರಾದಾರ. ಪ್ರೊ. ಪಿ. ವಿ. ವಜ್ರಮಟ್ಟಿ, ಶ್ರೀ ಸಿಸು ಸಂಗಮೇಶ. ಈಶ್ವರಚಂದ್ರ ಚಿಂತಾಮಣಿ ಮುಂತಾದವರಿದ್ದರು.

ಇವರಲ್ಲಿ ಶ್ರೀ ಜತ್ತಿಯವರು ತುಂಬಾ ಹಾಸ್ಯಪ್ರಿಯರು. ನಕ್ಕು ನಗಿಸುವುದೇ ಅವರ ಧರ್ಮವಾಗಿತ್ತು. ಬಳ್ಳಾರಿ ಬೀಚಿಯವರ ಸಮಗ್ರ ಸಾಹಿತ್ಯದ ಓದಿನಿಂದ, ಬೀಚಿಯವರ ಮನೋಧರ್ಮ ಜತ್ತಿಯವರದಾಗಿದೆ. ಒಂದು ಅರ್ಥದಲ್ಲಿ ಜತ್ತಿಯವರು ಬಿಜಾಪೂರದ ಬೀಚಿಯೇ ಎಂದು ಹೇಳಿದರೆ ಅತಿಶಯೋಕ್ತಿ ಅನಿಸದೇನೋ.

ಕೇವಲ ಹಾಸ್ಯಪ್ರಜ್ಞೆಯೇ ಜತ್ತಿಯವರದಲ್ಲ, ಬರವಣಿಗೆಯಲ್ಲೂ ಅವರ ಪ್ರತಿಭೆ ಹಾಸುಹೊಕ್ಕಾಗಿದೆ. ಅವರು ಅನೇಕ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಕಥಾ ಸಂಕಲನ. ವಚನ ಸಂಕಲನ. ಭಾವಗೀತೆ. ಬಿಡಿ ಲೇಖನಗಳು ಸಾಹಿತ್ಯಾಸಕ್ತರ ಮನಸ್ಸು ಸೆಳೆದಿವೆ. ಜತ್ತಿಯವರನ್ನು ಸಾಹಿತ್ಯ ಲೋಕದಲ್ಲಿ ಪ್ರಖ್ಯಾತಗೊಳಿಸಿವೆ. ಜತ್ತಿಯವರು ಪುಸ್ತಕಗಳನ್ನು ಬರೆದು ಪ್ರಕಟಿಸಿದಂತೆ, ಒಳ್ಳೊಳ್ಳೆ ಗ್ರಂಥಗಳನ್ನು ಕೂಡ ಸಂಗ್ರಹಿಸುವ ಅಭಿರುಚಿಯಲ್ಲಿ ಪ್ರಾಮಾಣಿಕತೆಯನ್ನು ಮೆರೆದವರು. ಇದಕ್ಕೆ ಸಾಕ್ಷಿ ಎನ್ನುವಂತೆ ಅವರು ತಿಕೋಟಾದಲ್ಲಿ ಶಾರದಾಂಬಾ ಗ್ರಂಥಾಲಯವನ್ನು ಸ್ಥಾಪಿಸಿದ್ದು.

ಕವಿ ಸಮ್ಮೇಳನಗಳಲ್ಲಿ ಬಹಳ ಹಸನ್ಮುಖರಾಗಿ ಭಾಗವಹಿಸುತ್ತಿದ್ದ ಜತ್ತಿಯವರು ನನ್ನ ಸಂಗಡ ರಾಯಚೂರ, ಯರನಾಳ, ಬಿಜಾಪೂರ, ಬಂಥನಾಳ ಮುಂತಾದ ಸ್ಥಳಗಳಲ್ಲಿ ತಮ್ಮ ಹಾಸ್ಯ ಚಟಾಕಿಗಳಿಂದ ಎಲ್ಲರ ಮನಸ್ಸು ರಂಜಿಸುತ್ತಿದ್ದರು.

ಅವರು ನಾಟಕಗಳಲ್ಲಿಯೂ ಪಾತ್ರವಹಿಸಿದ್ದು ಕೇಳಿದ್ದೇನೆ. ಆದರೆ ಈಗಿನ ಹೊಸ ಅವತಾರ "ಪ್ರವಚನ ಪ್ರವೀಣ" ಇದು ಎಲ್ಲರಿಗೂ ಆಶ್ಚರ್ಯ ತಂದಿದೆ. ಆಗಲೇ ಅವರ ವಾಕ್ ಚಾತುರ್ಯ, ವಚನಪ್ರಿಯತೆ, ಕಾವ್ಯಪ್ರೇಮ ಹಾಗೂ ಹಾಸ್ಯರಸ ಪ್ರಜ್ಞೆ ಅವರನ್ನು "ಪ್ರವಚನ"ದ ಕಡೆಗೆ ಒಯ್ಯಬಹುದೆಂದು ನಾವೆಲ್ಲರೂ

ಊಹಿಸಿದ್ದೆವು. ಅದರಂತೆಯೇ ಆಯಿತು. ಮಾತೆ ಮಹಾದೇವಿಯಂತೆ ಅವರೂ ಮಾತಿನ ಮಂತ್ರವಾದಿ.

ಜತ್ತಿಯವರು ಮುಂದೆ ಇನ್ನೂ ಅಭಿವೃದ್ಧಿ ಹೊಂದಿ, ದಿ. ಕೀರ್ತನ ಕೇಸರಿ ಶಿವಮೂರ್ತಿಶಾಸ್ತ್ರಿ, ದಿ. ಗಂಗಾಧರಶಾಸ್ತ್ರಿ ಮತ್ತು ದಿ. ಮಹಾಂತೇಶ ಶಾಸ್ತ್ರಿಗಳಂಥ ಪ್ರವಚನ ಪ್ರವೀಣರ ಸಾಲಿನಲ್ಲಿ ಸೇರಲೆಂದು ಹಾರೈಸುವೆ.

# ಮಗು ಸ್ವಭಾವದ ಸಹೃದಯಿ

## ಬಸವರಾಜ ಯಂಕಂಚಿ

೧೯೭೪ರ ಶ್ರಾವಣಮಾಸದಲ್ಲಿ ನಮ್ಮ ಊರ ಶ್ರೀ ಪರಮಾನಂದ ದೇವಸ್ಥಾನ ದಲ್ಲಿ ಶ್ರೀ ಸಿದ್ಧಯ್ಯ ಪುರಾಣಿಕರಿಂದ ರಚಿತವಾದ "ಶರಣ ಚರಿತಾಮೃತ" ಪ್ರವಚನ ನಡೆಯುತ್ತಿತ್ತು. ಪ್ರವಚನಕಾರರ ಶಬ್ದಗಳ ಗುಡುಗಿಗೆ. ಮಾತಿನ ಮಳೆಗೆ. ಹಾಸ್ಯದ ಹೊನಲಿಗೆ, ಸುಶ್ರಾವ್ಯ ಸಂಗೀತಕ್ಕೆ ಮುದ್ದು ಮಕ್ಕಳಿಂದ ಮುದುಕರವರೆಗೂ ಹೆಣ್ಣು–ಗಂಡೆಂಬ ಭೇದವಿಲ್ಲದೆ ಸಂಜೆಯ ೭ ಗಂಟೆಗೆ ದೇವಸ್ಥಾನದ ಆವರಣ ತುಂಬುತ್ತಿತ್ತು. ಪ್ರವಚನಕಾರರು. ನಾಟ್ಯಕಲಾ ಪ್ರವೀಣರು. ನಾಟ್ಯಕಲಾ ಅಭಿರುಚಿಯುಳ್ಳ ನನಗೆ ಅವರ ಪರಿಚಯವಾಯಿತು. ಅವತ್ತೆ ಅವರ ಪ್ರವಚನ ಕೇಳಿದೆ. ಸಂಗೀತದಿಂದ ಪ್ರಾರಂಭವಾದ ಪ್ರವಚನ ಹಲವು ದೃಷ್ಟಾಂತಗಳಿಂದ. ಹಾಸ್ಯದ ಚುಟುಕುಗಳಿಂದ ವಿಷಯಾಂತರವಾಗದೆ ಎರಡು ಗಂಟೆ ನಡೆಯಿತು. ವೇಳೆಯ ಪರಿವೆಯಿಲ್ಲದೆ ಮಂತ್ರಮುಗ್ಧನಾಗಿ ಕೇಳಿದೆ. ಶ್ರೋತೃಗಳ ಮನ ಪ್ರವಚನದಲ್ಲಿಯೇ ತಲ್ಲೀನವಾಗುವಂತೆ ಮೋಡಿ ಮಾಡಿದ ಪ್ರವಚನ ಗಾರುಡಿಗ. ದಿವ್ಯವ್ಯಕ್ತಿತ್ವದ, ಸರಳ ಹೃದಯದ ಪ್ರವಚನ ಕಲಾ ಪ್ರವೀಣ ದಾನಪ್ಪ ಜತ್ತಿ.

ಸೋದರ ದಾನಪ್ಪನವರ ಒಡನಾಟವೆಂದರೆ ಎಲ್ಲವನ್ನು ಮರೆತು ನಗುತ ಲಿರುವದು, ಹವ್ಯಾಸಿ ನಾಟ್ಯ ಕಲಾವಿದರಾದ ಇವರು ನಾಟಕೀಯವಾಗಿ, ಹಾವ–ಭಾವ ಮಾಡುತ್ತ, ಸದಾ ವಿನೋದಿಗಳಾದ ಇವರು ಸ್ನೇಹ ಬಳಗದಲ್ಲಿ ತಾರೆಗಳ ಮಧ್ಯದ ಚಂದ್ರನಂತೆ ಇರುವರು. ಹದಿನೆಂಟು ವರುಷ ಅವರ ಒಡನಾಟದಲ್ಲಿದ್ದ ನಾನು ಅವರ ಕರ್ತವ್ಯ ನಿಷ್ಠೆಗೆ ತುಂಬಾ ಮೆಚ್ಚಿದ್ದೇನೆ. ಬಿಡುವಿಲ್ಲದ ಕಾರ್ಯಕ್ರಮಗಳ ಮಧ್ಯ ದಲ್ಲಿಯೂ ಅವರ ಓದುವ ಹವ್ಯಾಸ ಮಾಸಿಲ್ಲ. ಕಾಯಕನಿಷ್ಠೆ ಅನುಕರಿಸಿದ್ದಾರೆಯೇ ಹೊರತು ಉದಾಸೀನತೆ ತೋರಿಲ್ಲ. ೧೯೭೯ರಲ್ಲಿ ನಮ್ಮ ಸ್ನೇಹ ಬಳಗದಲ್ಲಿ "ಜಗಜ್ಯೋತಿ ಬಸವೇಶ್ವರ" ನಾಟಕ ಅಭಿನಯಿಸಿದೆವು. ಆ ನಾಟಕದಲ್ಲಿ ಜಾತವೇದ ಮುನಿ ಹಾಗೂ ಅಲ್ಲಮಪ್ರಭುವಿನ ಪಾತ್ರದಲ್ಲಿ ಮನೋಜ್ಞವಾಗಿ ಅಭಿನಯಿಸಿದರಲ್ಲದೆ, ನಾಟಕದ ಜೀವಾಳವಾದ "ಅನುಭವ ಮಂಟಪ"ದ ದೃಶ್ಯವನ್ನು ಶರಣ ಸಾಹಿತ್ಯ ವಚನಗಳೊಂದಿಗೆ ರಚಿಸಿ. ನಾಟಕ ನಿರ್ದೇಶಕರಾಗಿ ಸ್ನೇಹ ಬಳಗದಲ್ಲಿ ನಗುನಗುತ ಕಳೆದ ಆ ಸುಂದರ ದಿನಗಳು ಜೀವನದಲ್ಲಿ ಮರೆಯದ ನೆನಪು. ಶರಣ ಸಾಹಿತ್ಯದ ಶ್ರೇಷ್ಠ ಗ್ರಂಥಗಳನ್ನು ನನಗೆ ಕೊಟ್ಟು ಅಧ್ಯಯನ ಮಾಡಲು ಹಚ್ಚಿ ಶರಣ ಸಾಹಿತ್ಯದ ಓದುಗನನ್ನಾಗಿ ಮಾಡಿದರು. ತನ್ನ ಸುತ್ತಲಿನ ಪರಿಸರದ ಯುವ ಸ್ನೇಹಿತರನ್ನು ಪ್ರೀತಿಯಿಂದ ಕಾಣುವುದಲ್ಲದೆ, ಸರ್ವರಲ್ಲಿಯೂ ಧರ್ಮದ ಬಗ್ಗೆ ಚಿಂತನ ಮಾಡಲು

ಹಚ್ಚಿರುವ ಇವರು ಧರ್ಮಾಭಿಮಾನಿಗಳು. ಸಂಗೀತ, ಸಾಹಿತ್ಯ, ನಾಟ್ಯ ಕಲೆಗಳಲ್ಲಿ ಅಪಾರ ಜನ ಸ್ನೇಹಿತರನ್ನು ಪಡೆದ ಸೋದರ ದಾನಪ್ಪನವರು ತಮ್ಮ ೫೫ರ ಗಡಿಯಲ್ಲಿಯೂ ಹೊಸದನ್ನು ಅಧ್ಯಯನ ಮಾಡುವ ಉತ್ಸಾಹ ತುಂಬಿಕೊಂಡಿದ್ದಾರೆ. ಜ್ಞಾನಿ, ಸದಾಚಾರಿ, ಸಹೃದಯಿ ಸೋದರ ದಾನಪ್ಪನವರ ಒಡನಾಟವೆಂದರೆ ಸಜ್ಜನರ ಸ್ನೇಹವದು ಹೆಜ್ಜೇನು ಸವಿದಂತೆ.

ಸೋದರ ದಾನಪ್ಪನವರ ವ್ಯಕ್ತಿತ್ವ ಅವರು ಕಾರ್ಯಕ್ರಮ ನೀಡಿದ ಪ್ರತಿ ಊರಲ್ಲಿಯೂ ಅಲ್ಲಿಯ ಜನರಿಂದಲೇ ತಿಳಿದುಕೊಂಡರೆ ನಿಜವಾಗಿಯೂ ಅವರ ಬಹುಮುಖದ ಸರಳತೆ ನಮಗೆ ತಿಳಿಯುತ್ತದೆ. ತಿಕೋಟಾದ ಶ್ರೀ ಶಾರದಾಂಬಾ ವಾಚನಾಲಯದ ಅಧ್ಯಕ್ಷರಾಗಿ, ಉತ್ತಮ ಗ್ರಂಥಗಳನ್ನು ಸಂಗ್ರಹ ಮಾಡಿ ಓದುಗರಿಗೆ ಅನುಕೂಲ ಮಾಡಿದ್ದು ಇವರ ಸಾಹಿತ್ಯ ಪ್ರೇಮಕ್ಕೆ ಸಾಕ್ಷಿಯಾಗಿ ನಿಲ್ಲುತ್ತದೆ. ದಾನಪ್ಪನವರ ದಿಟ್ಟ ಪ್ರತಿಭೆ ವಚನ, ಕವನ ರಚನೆಯಲ್ಲಿ, ಕಥೆ ಹೆಣೆಯುವುದರಲ್ಲಿ, ಪ್ರವಚನ, ಪುರಾಣ, ಕೀರ್ತನ ಹೇಳುವಲ್ಲಿ, ಬಯಲಾಟ, ನಾಟಕ, ಚಲನಚಿತ್ರಗಳಲ್ಲಿ ಅಭಿನಯಿಸುವಲ್ಲಿ, ಪಂಚಾಯತಿಯ ಚೇರಮನ್ನರಾಗಿ ದಕ್ಷ ಆಡಳಿತ ನಡೆಸುವಲ್ಲಿ ಢಾಳವಾಗಿದೆ. ಜನಮನವನ್ನು ಗೆಲ್ಲುವಲ್ಲಿ ಯಶಸ್ವಿಯಾಗಿದೆ. ಅವರದು ಆದರ್ಶ ಜೀವನ; ಇತರರಿಗೆ ಮಾದರಿಯ ಜೀವನ ಕೂಡ.

ನಡೆ ಚೆನ್ನ, ನುಡಿ ಚೆನ್ನ, ಎತ್ತನೋಡಿದರೂ ಚೆನ್ನ. ಒಳಗೂ ಚೆನ್ನ ಹೊರಗೂ ಚೆನ್ನ, ಸರ್ವರೊಳ್ ಸ್ನೇಹ ಚೆನ್ನ, ಪ್ರೀತಿ ಚೆನ್ನ ದಾನಪ್ಪನವರದು. ಸಹಜ ನುಡಿಯಿಂದ ನಗುತ, ನಗಿಸುತ ನಗುಮೊಗದಿಂದಿರುವ ಇವರನ್ನು ಕಂಡರೆ ೧೨ನೆಯ ಶತಮಾನದ ನಗೆಯ ಮಾರಿ ತಂದೆಯ ನೆನಪು ಬರುತ್ತದೆ. ಸದುವಿನಯದ ನುಡಿಗೆ, ಶರಣ ಚಾರಿತ್ರ್ಯದ ನಡೆ ಕಲಶವಿಟ್ಟಂತೆಯೇ ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಇವರು ನಡೆ-ನುಡಿಯ ಸಿರಿವಂತರು.

ಇವನಾರವ ಇವನಾರವ ಎನಿಸದಿರಯ್ಯ, ಇವ ನಮ್ಮವ, ಇವ ನಮ್ಮವ ಎನಿಸಯ್ಯ ಎನ್ನುವ ಸರಳ ಸ್ವಭಾವದವರು ದಾನಪ್ಪನವರು. ಸರ್ವರನ್ನು ಪ್ರೀತಿ, ಸ್ನೇಹಭಾವದಿಂದ ಕಾಣುವ ಸ್ವಭಾವಿಗಳು, ಬಾಲಲೀಲಾ ಮಹಾಂತ ಶಿವಯೋಗಿಗಳಂತೆ ಮಕ್ಕಳೊಡನೆ ಬೆರೆತು ಅವರನ್ನು ನಗಿಸುತ್ತ ಇರುವ ಇವರು ಮಗುವಿನ ಸ್ವಭಾವದ ಸಹೃದಯಿಗಳು.

## ಈಶ್ವರಚಂದ್ರ ಚಿಂತಾಮಣಿ

ಶ್ರೀ ದಾನಪ್ಪ ಜತ್ತಿ ಗ್ರಾಮೀಣ ಬದುಕಿನಿಂದ ಬೆಳೆದುಬಂದ ಧೀಶಕ್ತಿ. "ಇವ ನಮ್ಮ ಹುಡುಗ. ನಮ್ಮ ನೆಚ್ಚಿನ ಸ್ನೇಹಿತ. ನಮ್ಮ ಅಭಿಮಾನದ ಬಂಧು" ಹೀಗೆಂದು ನಾವು ಹೇಳಿಕೊಂಡು ಸಂತೋಷಪಟ್ಟಿದ್ದೇವೆ. ಈಗಲೂ ಕೂಡ ನಾವು ಎಂದರೆ, ನಾನು ಮತ್ತು ಗೆಳೆಯ ಶಂ. ಗು. ಬಿರಾದಾರ. ದಾನಪ್ಪ ಜತ್ತಿಯವರ ಬಳಗ ಬಲು ವಿಶಾಲ. ಜಿಲ್ಲೆಯಾದ್ಯಂತ ಹಬ್ಬಿಕೊಂಡಿದೆ. 'ನಾವಿಬ್ಬರು' ಅನ್ನುವಲ್ಲಿ ಸ್ವಾರಸ್ಯವಿದೆ, ಸತ್ಯವಿದೆ; ಪೂರ್ವಾಶ್ರಮದ ಸಲುಗೆಯ ಸಲ್ಲಾಪ ತುಂಬಾ ತುಂಬಿಕೊಂಡಿದೆ. ನೆನಪಾದಾಗಲೆಲ್ಲ ರಸನಿಮಿಷಗಳ ರಸಾಸ್ವಾದನೆ ನಮ್ಮ ಮೂವರಿಗೂ ಹೊಟ್ಟೆತುಂಬ.

ವಿಜಾಪೂರ ತಾಲೂಕಿನ ತಿಕೋಟಾ ಮತಕ್ಷೇತ್ರ ರಾಜಕೀಯ ಚುನಾವಣೆ ಕಾಲದಲ್ಲಿ ಹೆಸರಾಗುತ್ತದೆ; ನಂತರ ಮರೆತು ಹೋಗುತ್ತದೆ. ಆದರೆ ಅಲ್ಲಿಯ ಇಬ್ಬರು ಕಲಾವಿದರ ಮೂಲಕ ನಾಡಿನ ಜಾನಪದ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಿಂದಾಗಿ ನಾಡಿನ ತುಂಬ ತಿಕೋಟ ಹೆಸರು ಜನರ ಬಾಯಲ್ಲಿ – ಮನದಲ್ಲಿ ಶಾಶ್ವತವಾಗಿ ಉಳಿಯುವಂತಾಗಿದೆ. ಇದು ಅತಿಶಯೋಕ್ತಿ ಅಲ್ಲ. ಚೌಡಕಿ ಮೇಳದ ಅಭಿನೇತ್ರಿ ಗೌರಮ್ಮ ಮಾದರ ತಿಕೋಟಾದ ಜಾನಪದ ಕಲಾವಿದೆ. ನಂತರ ಪ್ರವಚನ ಪಟು ಜನಾನುರಾಗಿ ದಾನಪ್ಪ ಜತ್ತಿ ತಿಕೋಟಾದ ಸಾಂಸ್ಕೃತಿಕ ರಂಗದಲ್ಲಿ ವಿಜೃಂಭಿಸುವ ಪ್ರತಿಭಾಶಾಲಿ. ತಿಕೋಟಾದ ಸುಪುತ್ರ – ಇವರೀರ್ವರು ಜನ್ಮಭೂಮಿಯ ಖ್ಯಾತಿಯನ್ನು ಬೆಳೆಸಿದ್ದಾರೆ. ಉಳಿಸಿದ್ದಾರೆಂದರೆ ಒಪ್ಪತಕ್ಕ–ಮೆಚ್ಚತಕ್ಕ ಮಾತಾದೀತು.

ಗೆಳೆಯ ಶಂ. ಗು. ಬಿರಾದಾರ ಅವರು ತಿಕೋಟಾ ಶಾಲೆಯಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದ ಕಾಲ. ಸುಮಾರು ೨೫ ವರ್ಷಗಳ ಹಿಂದಿನ ಕತೆ. ಆಗ ದಾನಪ್ಪ ಜತ್ತಿ ಹವ್ಯಾಸಿ ರಂಗಭೂಮಿಯ ಹವ್ಯಾಸಿ ನಟ. ಅಭಿನಯದಲ್ಲಿ ಎತ್ತಿದ ಕೈ. ಹಾಸ್ಯದಲ್ಲಿ ಆಸಕ್ತಿ. ನೋಡಿದ್ದನ್ನೆಲ್ಲ ಮಾಡುವ ತವಕ. ಓದಿದ್ದನ್ನು ಅರಗಿಸಿಕೊಳ್ಳುವ ಛಲ. ನಟನೆಯಲ್ಲಿ ವಿಡಂಬನೆ, ವೈಯಾರ, ಅಣಕು, ಕರುಣೆ, ಕ್ರೋಧ, ಧೈರ್ಯ, ಸ್ಥೈರ್ಯ ಕಂಡಾಗ ಈ ತರುಣ ಭವಿಷ್ಯದಲ್ಲಿ ಅವಕಾಶ ಸಿಕ್ಕರೆ ಶ್ರೇಷ್ಠತೆಯ ಪೀಠ ಏರಬಲ್ಲನೆಂದು ನಾವು ನಿರೀಕ್ಷಿಸಿದ್ದೆವು.

ಕತೆಗಾರ ಶಂ. ಗು. ಅವರ ಸಂಗತಿ – ಸ್ನೇಹದ ಅನುಕರಣೆಯಿಂದ ದಾನಪ್ಪ ಕೆಲವು ಚಿಕ್ಕ ಕತೆಗಳನ್ನು ಬರೆದು ತೋರಿಸಿದ್ದ. ತಾನೇಕೆ ಕವಿಯಾಗಬಾರದೆಂದು

ಕೆಲವು ಕವನಗಳನ್ನು ಬರೆದು ಚಿಕ್ಕ ಕವಿಯಾದ. ಕೆಲವು ಕತೆಗಳನ್ನು ಸಂಗ್ರಹಿಸಿ. ಪ್ರಕಟಿಸಿ ಸಂಪಾದಕನೂ ದಾನಪ್ಪನಲ್ಲಿ ಅವತರಿಸಿದ.

ನಮ್ಮ ದಾನಪ್ಪ ಜತ್ತಿ ಬಹುರೂಪಿ, ಬಹುರಸಿಕ. ಮನೆತನದ ವೃತ್ತಿಯಿಂದ ವ್ಯಾಪಾರಸ್ಥ. ಬಟ್ಟೆಯ ಅಂಗಡಿ ವ್ಯವಹಾರ ಹವ್ಯಾಸಿ ಪ್ರವೃತ್ತಿಯಿಂದಾಗಿ ಕಳೆಗುಂದಿತು. ದಿವಾಳಿ ತೆಗೆಯಲಿಲ್ಲ ಅದೇ ಸಮಾಧಾನ. ಬಟ್ಟೆಬರೆ ತುಂಬಿದ ಅಂಗಡಿಯ ಕಾಜಿನ ಕಪಾಟಿನಲ್ಲಿ ಪುಸ್ತಕ ತುಂಬಿದ್ದನ್ನು ನೋಡಿದಾಗ ನಮಗೆ ಸಂತೋಷವಾಯಿತು. ಸಾಹಿತಿಗಳ ಸಂಗದಿಂದ ವ್ಯಾಪಾರ ಕಳಕೊಂಡ, ನಾಟಕದ ಹುಚ್ಚಿನಿಂದ ಹುಡುಗ ಹೈರಾಣಾದ. ಊರ ಉಸಾಬರಿ ಮಾಡಾಕಂತ ಸರಪಂಚನೂ ಆದ. ಅಂತೂ ನಮ್ಮ ದಾನಪ್ಪ ಶ್ರೀಮಂತಿಕೆ ಕಳಕೊಂಡು ಸುದಾಮನಾದ. ಈ ನುಡಿಮುತ್ತುಗಳನ್ನು ಹೊತ್ತುಗಳೆಯಲು ಕಟ್ಟೆಯ ಚಾವಡಿಯಲ್ಲಿ ಅವರಿವರು ಬಾಯ್ತುಂಬಾ ಮಾತಾಡುವಂತಾದ. ಕಾಲ ಕಳೆದುಹೋಯಿತು. ಅವರ ಮುಂದೆಯೇ ದಾನಪ್ಪ ಶಾಸ್ತ್ರಿಯಾದ. ಸಂಗೀತಗಾರನಾದ. ಸಾಹಿತಿಯಾದ; ಶ್ರೀಮಂತನೂ ಎನಿಸಿದ – ಸಾಕಲ್ಲ.

ಸುಮಾರು ಎರಡೂವರೆ ದಶಕಗಳ ಹಿಂದಿನ ಒಂದು ಸಂದರ್ಭ. ಸುಕ್ಷೇತ್ರ ಬಂಥನಾಳದಲ್ಲಿ ಪೂಜ್ಯ ಸಂಗನಬಸವ ಶಿವಯೋಗಿಗಳವರು ವಚನ ಸಾಹಿತ್ಯ – ವಿಚಾರ ಸಂಕಿರಣ ಮತ್ತು ಕವಿಗೋಷ್ಠಿಯಲ್ಲಿ ಭಾಗವಹಿಸಲು ಜಿಲ್ಲೆಯ ಸಾಹಿತಿಗಳನ್ನು ಆಹ್ವಾನಿಸಿದ್ದರು. ನಮ್ಮೊಂದಿಗೆ ಕವಿಯಾಗಿ ಸ್ನೇಹಿ ದಾನಪ್ಪ ಜತ್ತಿ ಆಹ್ವಾನಿತರಾಗಿದ್ದರು. ಕಾರ್ಯಕ್ರಮದ ನಂತರ ಉತ್ಸಾಹಮೂರ್ತಿ ದಾನಪ್ಪ ಆತುರ ಅಭೀಪ್ಸೆಯಿಂದ ಕೇಳಿದರು,

"ನಾನು ಯಾವ ಯಾವ ಗ್ರಂಥಗಳನ್ನು ಓದಿದರೆ ಶರಣ ಸಾಹಿತ್ಯ ಕರಗತವಾಗುತ್ತದೆ ?" ಎಂದು. ತರುಣ ಸ್ನೇಹಿತನ ಉತ್ಸಾಹ, ಆಸಕ್ತಿ ಕಂಡು ನನಗೂ ಸಂತೋಷ.

"ನೀವು ಸಿದ್ಧಯ್ಯ ಪುರಾಣಿಕರ 'ಶರಣ ಚರಿತಾಮೃತ' ಓದಿರಿ. ಆ ಗ್ರಂಥದ ಅಧ್ಯಯನ ಮಾಡಿದರೆ ನಿಮಗೆ ಶರಣ ಸಾಹಿತ್ಯದ ಮಹಾದ್ವಾರದಲ್ಲಿ ಖಂಡಿತ ಪ್ರವೇಶ ಸಿಗುತ್ತದೆ" ಎಂದೆ.

"ಮತ್ತೇನು ಓದಬೇಕು ?" ಮರು ಪ್ರಶ್ನೆ.

"ಮೊದಲು 'ಶರಣ ಚರಿತಾಮೃತ' ಮಾತ್ರ ಸಾಕು".

"ಒಂದೆರಡು ಹಾಸ್ಯ ಗ್ರಂಥಗಳನ್ನು ಹೇಳಿರಲ್ಲ ?" ಎಂದು ಕೇಳಿದರು.

"ಹಾಗಾದರೆ ಬಳ್ಳಾರಿ ಬೀಚಿಯವರ ಸಮಗ್ರ ಗ್ರಂಥಗಳನ್ನು ತರಿಸಿ ಓದಿರಿ" ಎಂದು ಹೇಳಿ 'ಇಷ್ಟೇ ಸಾಕು' ಎಂದೂ ಎಚ್ಚರಿಸಿದೆ.

ನನ್ನ ಸಲಹೆಯನ್ನು ಸಂಪೂರ್ಣ ಅಂಗೀಕರಿಸಿದ ದಾನಪ್ಪ 'ಶರಣ ಚರಿತಾಮೃತ'ವನ್ನು ಅರೆದು ಕುಡಿದಿರಬಹುದು. ಬೀಚಿಯವರ 'ತಿಮ್ಮ' ಇಂದು ಪುನರ್ಜಾತ ದಾನಪ್ಪ ಶಾಸ್ತ್ರಿ ಆಗಿರಲು ಸಾಕು.

ಸಾಹಿತ್ಯ, ಸಾಂಸ್ಕೃತಿಕ ಚಟುವಟಿಕೆಗಳೊಂದಿಗೆ ಧಾರ್ಮಿಕ ಪ್ರವಚನಗಳಿಂದ ದಾನಪ್ಪ ಜತ್ತಿ ಈ ಕಳೆದ ಒಂದು ದಶಕದಿಂದ ಜಿಲ್ಲೆಯ ತುಂಬ ಸಂಚರಿಸಿ ಪ್ರವಚನಗಳಿಂದ ಖ್ಯಾತನಾಮರಾಗಿರುವರು. ಅವರಾಗಿಯೇ ಸಂಚರಿಸುತ್ತಿಲ್ಲ: ಆಹ್ವಾನಿತರಾಗಿ, ಅವಿಶ್ರಾಂತವಾಗಿ ಸೇವಾನಿರತರಾಗಿರುವರು.

ಜಿಲ್ಲೆಯ ಗಡಿಯನ್ನು ದಾಟಿ ಬೆಳಗಾವಿ ಜಿಲ್ಲೆಯ ಮಠಗಳಲ್ಲಿ ಇವರ ಪ್ರವಚನಗಳಿಗೆ ವಿಜಾಪೂರ ಜಿಲ್ಲೆಯ ಹೆಸರಾಂತ ಮಠಗಳಲ್ಲಿ, ಗ್ರಾಮಗಳಲ್ಲಿ ತಿಂಗಳುಗಟ್ಟಲೆ 'ಶರಣ ಚರಿತಾಮೃತ' ಜಯಭೇರಿ ಬಾರಿಸಿವೆ. ತಿಮ್ಮನ ತಲೆ ಬೀಚಿಯವರ ನಿರ್ಗಮನದ ನಂತರ ಜೀವಂತವಾಗಿ ಜತ್ತಿಯವರ ಮೂಲಕ ಬದುಕಿದೆ: ಬೆಳೆದಿದೆ.

ಸಾಹಿತ್ಯ–ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಸೇವಾನಿರತರು ಹೆಚ್ಚಾಗಿ ಸುದಾಮನಂತಹ ಲಕ್ಷ್ಮೀಕೃಪಾ ಹೀನರೇ. ಆದರೆ ನಮ್ಮ ದಾನಪ್ಪ ಜತ್ತಿ ಶಾಸ್ತ್ರಿಗಳೆನಿಸಿ, ಪ್ರವಚನಕಾರರಾಗಿ, ಲಕ್ಷ್ಮೀಪುತ್ರರಾಗಿ, ಸ್ಥಿತಿವಂತರಾಗಿ, ಆರೋಗ್ಯವಂತರಾಗಿ ನಮಗೆಲ್ಲ ಅಭಿಮಾನವನ್ನು ಹಂಚಿದ್ದಾರೆ, ಸಂತೋಷವನ್ನುಂಟುಮಾಡಿದ್ದಾರೆ.

ವಿಜಾಪೂರ ತಾಲೂಕ ಘಟಕಕ್ಕೆ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೆಂದು ಇವರನ್ನು ನಾನು ನಾಮಕರಣ ಮಾಡಿದ ಪ್ರಸಂಗ, ಸಂತೋಷದಿಂದ ಒಪ್ಪಿಕೊಂಡರು. ಮೂರು ವರ್ಷಗಳ ಅವಧಿಯಲ್ಲಿ ಜಿಲ್ಲೆಯ ವಿವಿಧ ಸ್ಥಳಗಳಲ್ಲಿ ತಮ್ಮ ಪ್ರವಚನದ ಸಂದರ್ಭದಲ್ಲಿ ಸಾಹಿತ್ಯ ವಿಚಾರ ಸಂಕಿರಣಗಳನ್ನು ಏರ್ಪಡಿಸಿ, ಸಾಹಿತ್ಯ ಪರಿಷತ್ತಿನ ಸಂದೇಶವನ್ನು ಊರೂರುಗಳಿಗೆ ತಲುಪಿಸಿದರು. ಧನಬಲಕ್ಕಿಂತ ಜನಬಲ ಶ್ರೇಷ್ಠವಾದದ್ದು. ತಮ್ಮ ಪ್ರವಚನಗಳಿಂದ ಜನಮನವನ್ನು ಸೂರೆಗೊಂಡ ಇವರಿಗೆ ಸಾಹಿತ್ಯ ಪರಿಷತ್ತಿನ ಚಟುವಟಿಕೆಗಳನ್ನು ನೆರವೇರಿಸಲು ಜನಸಮುದಾಯ ಧಾರಾಳವಾಗಿ ಮುಂದೆ ಬರುವಂತಾಯಿತು, ಕೈಕೊಂಡ ಕಾಯಕವನ್ನು ವಿನೀತಭಾವದಿಂದ, ನಿಷ್ಠೆಯಿಂದ, ಉತ್ಸಾಹದಿಂದ ನೆರವೇರಿಸುವ ಜತ್ತಿಯವರನ್ನು ಪರಿಷತ್ತು ತುಂಬಾ ಅಭಿಮಾನದಿಂದ ಅಭಿನಂದಿಸಿದೆ.

ಸುತ್ತಲಿದ್ದವರನ್ನು ಸಮಭಾವದಿಂದ ಕಾಣುವ, ಎತ್ತ ಹೋದರೂ ಪ್ರೀತಿಗಳಿಸುವ, ಶರಣ ಚರಿತೆಯನ್ನು ಜನಮನದಲ್ಲಿ ಬಿತ್ತಿ ಬೆಳೆಯುವ ಕಾಯಕನಿಷ್ಠ ಶ್ರೀ ದಾನಪ್ಪ ಜತ್ತಿಯವರ ಕಾಯಕ ನಿರಾತಂಕವಾಗಿ ಮೇಲೇರಲಿ, ಸುತ್ತಮುತ್ತಲೂ ಬೆಳಕನ್ನು ಬೀರಲೆಂದು ಹಾರೈಸುವಾ.

# ಅಭಿನಂದನೆ

## ಚೆನ್ನವೀರ ಕಣವಿ

ಶ್ರೀ ದಾಸಪ್ಪ ಜತ್ತಿಯವರಿಗೆ ಅಭಿನಂದನ ಗ್ರಂಥ ಒಪ್ಪಿಸುತ್ತಿರುವುದು ಸಂತೋಷದ ಸಂಗತಿ. ತಮ್ಮ ಜೀವನದ ೫೫ ವಸಂತಗಳನ್ನು ಅವರು ಅರ್ಥ ಪೂರ್ಣವಾಗಿ ಸಾರ್ಥಕವಾಗಿಸಿರುವುದಕ್ಕೆ ಜನತೆಯ ಪ್ರೀತಿ ಈ ಮೂಲಕ ವ್ಯಕ್ತ ಗೊಳ್ಳುತ್ತಿರುವುದು ಸಹಜವೇ ಆಗಿದೆ.

ಶ್ರೀ ಜತ್ತಿಯವರ ಪುರಾಣ ಪ್ರವಚನ ಹಾಗೂ ಕೀರ್ತನ ಕಾರ್ಯಕ್ರಮಗಳೆಂದರೆ ಗ್ರಾಮೀಣ ಜನತೆಗೊಂದು ಹಬ್ಬವಿದ್ದಂತೆ. ಕಥೆ, ಉಪಕಥೆ, ಹಾಡು, ಗೀತಗಳಿಂದ ಅವರ ಪ್ರವಚನ ರಸವತ್ತಾಗಿರುವುದನ್ನು ನಾನು ಕಂಡಿದ್ದೇನೆ. ಅವರ ಕಂಠ ಮಾಧುರ್ಯ, ಸಂದರ್ಭೋಚಿತವಾಗಿ ಅವರು ಬಳಸುವ ಶರಣರ ವಚನಗಳು, ಅನುಭವದ ನುಡಿಮುತ್ತುಗಳು ಹಾಗೂ ಅವರ ಹಾಸ್ಯಪ್ರಜ್ಞೆ ಕಲಿತವರನ್ನು, ಕಲಿಯದವರನ್ನು ಕೂಡಿಯೇ ತಲೆದೂಗಿಸುವಂತಿರುತ್ತದೆ.

ಪುರಾಣ ಪ್ರವಚನ ಹಾಗೂ ಕೀರ್ತನಗಳ ಮೂಲಕ ಜನಮನವನ್ನು ಸಂಸ್ಕರಿಸಿ ತಿಳಿವನ್ನು, ನೀತಿಯನ್ನು, ಜೀವನ ಕಲೆಯನ್ನು ಬೋಧಿಸುವ ಕ್ರಮ ನಾಡಿನಲ್ಲಿ ನಡೆದುಕೊಂಡು ಬಂದ ಒಂದು ಒಳ್ಳೆಯ ಪರಂಪರೆ. ಅದನ್ನು ವಿಜಾಪೂರ ಜಿಲ್ಲೆ ಹಾಗೂ ಇತರ ಭಾಗಗಳಲ್ಲಿ ಯಶಸ್ವಿಯಾಗಿ ಮುನ್ನಡೆಸಿಕೊಂಡು ಬಂದಿರುವ ಶ್ರೇಯಸ್ಸು ಶ್ರೀ ದಾನಪ್ಪನವರದು. ತಿಳಿದವರು ಉಳಿದವರಿಗೆ ಸಂತೋಷವನ್ನು ನೀಡುವ ಭಾಗ್ಯ ಎಲ್ಲರಿಗೂ ಲಭಿಸುವದೆಂದು ಹೇಳಲು ಬರುವುದಿಲ್ಲ. ಅದೊಂದು ವ್ಯಕ್ತಿ ನೀಡಬಹುದಾದ ವಿಶಿಷ್ಟ ಕೊಡುಗೆ. ಜತ್ತಿಯವರ ಹೆಸರಿನಲ್ಲಿಯೇ (ದಾಸಪ್ಪ) ಅದು ಹುದುಗಿಕೊಂಡಿದ್ದು ಅವರದನ್ನು ಯಥೇಚ್ಛವಾಗಿ ಜನಕ್ಕೆ ನೀಡಬಲ್ಲವ ರಾಗಿದ್ದಾರೆ.

ಆಯುರಾರೋಗ್ಯ ಭಾಗ್ಯದೊಡನೆ ಅವರ ಈ ಜನಸೇವೆ ನಿರಂತರವಾಗಿ ನಡೆಯುತ್ತಿರಲಿ ಹಾಗೂ ಆರ್ಥಿಕವಾಗಿ ಯಾವ ಕೊರತೆಯೂ ಅವರಿಗೆ ಆಗದಂತೆ ಕನ್ನಡಿಗರು ಹಾಗೂ ಕರ್ನಾಟಕ ಸರಕಾರ ನೋಡಿಕೊಳ್ಳಲೆಂದು ಹಾರೈಸಿ ಅವರಿಗೆ ಶುಭೇಚ್ಛೆಗಳನ್ನು ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತೇನೆ.

# ಪ್ರಾಂಜಲ ಪ್ರವಚನಕಾರ

## ಪ್ರೊ. ಸಿ. ವ್ಹಿ. ವಜ್ರಮಟ್ಟಿ (ಮೋಘಮಿತ್ರ)

ಸುಮಾರು ೨೫ ವರ್ಷಗಳ ಹಿಂದಿನ ಮಾತು. ತಿಕೋಟಾ ಗ್ರಾಮದ ದಾಸಪ್ಪ ಜತ್ತಿ ಅವರು ಬರೆದು ಪ್ರಕಟಿಸಿದ ಒಂದು ಕಥಾ ಸಂಕಲನ (ಅಮೂಲ್ಯ ಕಾಣಿಕೆ) ದ ಬಿಡುಗಡೆಯ ಸಂದರ್ಭ. ತಮ್ಮ ಪ್ರಪ್ರಥಮ ಕೃತಿಯಲ್ಲಿಯೇ ಅಮೂಲ್ಯ ಭರವಸೆಯನ್ನುಂಟುಮಾಡಿದ ದಾಸಪ್ಪ ಅವರು ಖಂಡಿತವಾಗಿ ಓರ್ವ ಗಮನಾರ್ಹ ಲೇಖಕರಾಗಿ ಬೆಳೆದಾರು ಎಂಬ ಭರವಸೆಯುಂಟಾಯಿತು. ಒಂದು ವೇಳೆ ಹಾಗೇ ಮುಂದುವರಿದಿದ್ದರೆ ಇನ್ನೂ ಪ್ರತಿಷ್ಠಿತ ಲೇಖಕರಾಗಿ ಹೊರಹೊಮ್ಮಬೇಕಾಗಿದ್ದ ದಾಸಪ್ಪ ಅವರು ಬಹುತರವಾಗಿ ಕಾರಣಾಂತರಗಳಿಂದ ಸಾಹಿತ್ಯದ ಇನ್ನೊಂದು ಪ್ರಕಾರವಾದ ಪ್ರವಚನಕಾರರಾಗಿ ಪ್ರಸಿದ್ಧರಾದದ್ದು ಒಂದು ಯೋಗಾಯೋಗವೆಂದು ಹೇಳಬಹುದು. ಈವಾಗ ಅವರು ಕರ್ನಾಟಕದ ಕೆಲವೇ ಕೆಲವು ಪ್ರತಿಷ್ಠಿತ ಪ್ರವಚನಕಾರರಲ್ಲಿ ಒಬ್ಬರಾಗಿ ವಿಜೃಂಭಿಸುತ್ತಿರುವುದು ಹೆಮ್ಮೆಯ ಸಂಗತಿಯಾಗಿದೆ.

ದಾಸಪ್ಪ ಹಿರಿತನದಲ್ಲಿ ಕಿರಿಯರಾದರೂ ನಾವೆಲ್ಲರೂ ಅವರನ್ನು ದಾಸಪ್ಪಣ್ಣ ಎಂದು ಕರೆಯುವುದರಲ್ಲಿ ಸಂತೋಷಿಸುತ್ತೇವೆ. ಇಂಥ ನಡೆಯ ಅನಿರ್ವಚನೀಯವಾದ ಆತ್ಮೀಯತೆಯನ್ನು ಅವರು ಬದುಕಿನುದ್ದಕ್ಕೂ ನಿರ್ವಹಿಸಿಕೊಂಡು ಬಂದಿದ್ದಾರೆ. ಬಲು ಅಕ್ಕರತೆಯಿಂದ ಉಳಿಸಿ ಬೆಳೆಸಿಕೊಂಡು ಬಂದವರಾಗಿದ್ದಾರೆ.

ದಾಸಪ್ಪ ಅವರದು ಸಹಜವಾಗಿ, ಸರಳವಾಗಿ ಬೆಳೆಯುವ ವ್ಯಕ್ತಿತ್ವ. ಅವರ ಬರಹ ಕೂಡ ಅಷ್ಟೇ ಸರಳ ಹಾಗೂ ಸಹಜ ಶೈಲಿಯದು. ಬಸವಣ್ಣನವರನ್ನು ಅರಿತು ಬರೆದ ಅವರ ಒಂದು ಕೃತಿ ಅವರ ಸರಳ ಸಜ್ಜನಿಕೆಗೆ ಸಾಕ್ಷಿಯಾಗಿದೆ ಎಂದು ಹೇಳಬಹುದು.

ದಾಸಪ್ಪ ಅವರಂತೆ ಮಾತನಾಡುವ ಕಲೆ ಬಹಳ ಜನರಿಗೆ ಸಾಧಿಸಲಾರದು. ಅವರ ಮಾತುಗಳಲ್ಲಿ ಆಗಾಗ ತೂರಿ ಬರುವ ಜೋಕುಗಳು ಮೈಮರೆಸುವಂಥವು. ತಮ್ಮದಲ್ಲದ ಜೋಕುಗಳನ್ನು ಕೂಡ ತಮ್ಮದೇ ಆದ ರೀತಿಯಲ್ಲಿ ಹೇಳಿದಾಗ ಕೇಳಿದ ಜೋಕೇ ಮತ್ತೆ ಮತ್ತೆ ಕೇಳುವಂತೆ ಮಾಡುವ ರಂಜನೀಯ ಕಲೆ ಅವರಿಗೊಂದು ದೊರೆತ ಕಲೆ ಎಂದು ಹೇಳಬಹುದು. ಕೆಲವು ಸಲ ಪ್ರಾಸಂಗಿಕವಾಗಿ ಹೇಳಿದ ಜೋಕುಗಳು ಕೂಡ ಎಲ್ಲರನ್ನು ಅವ್ಯಾಹತವಾಗಿ ಮೈಮರೆಸುವಂತಹವು. ಬೀಚಿ ಅವರ ಹಾಸ್ಯ ಚಟಾಕಿಗಳೆಂದರೆ ದಾಸಪ್ಪ ಅವರಿಗೆ ಪಂಚಪ್ರಾಣ. ಅವುಗಳನ್ನು ಅವರು ಇನ್ನೊಬ್ಬ ಬೀಚಿಯಾಗಿಯೇ ನಿರೂಪಿಸುವ ಕಲೆ ನಿಜವಾಗಿಯೂ ಅಚ್ಚರಿ

ಗೊಳಿಸುವಂಥದು. ಎಲ್ಲರನ್ನು ನಗೆಯೊಂದಿಗೆ ತೇಲಿಸಿಕೊಂಡು ಹೋಗುವ ಅವರ ಪ್ರವಚನ ವಿಧಾನ ಅಪರೂಪವಾದದ್ದು. ಪ್ರವಚನದಲ್ಲಿ ಬರುವ ಭಕ್ತಿ. ಧರ್ಮ. ರಾಜಕೀಯ, ಅಧ್ಯಾತ್ಮ ಮೊದಲಾದ ವಿಷಯಗಳು ಲೀಲಾಜಾಲವಾಗಿ ಅತಿ ಸಾಮಾನ್ಯ ಕೇಳುಗನನ್ನು ಮೈಮರೆಸುವಂಥವು. ಅಸ್ಖಲಿತವಾಗಿ. ಅಪ್ರತಿಮ ಧ್ವನಿಯಲ್ಲಿ ಮಾತನಾಡುವ ದಾನಪ್ಪ ಅವರು ಈ ದಶಕದ ಓರ್ವ ದಾಖಲಿಸುವ ಪ್ರವಚನಕಾರರಾಗಿ ಬೆಳೆಯದಿರಲಾರರು.

ವೈಚಾರಿಕವಾಗಿ ದಾನಪ್ಪ ಅವರು ಬಸವಮೂರ್ತಿಗಳು. ಚಿಕ್ಕಂದಿನಿಂದಲೂ ಅವರು ಬಸವಣ್ಣನ ಭಕ್ತರೆಂದೇ ಹೇಳಬಹುದು. ಅಂತೆಯೇ ಅವರ ಪ್ರವಚನಗಳಲ್ಲಿ ಯಾವುದೇ ಜಾತಿ. ಧರ್ಮಗಳ ಸಂಕುಚಿತತೆ ಕಾಣದು. ಅವರ ಹಾಸ್ಯದಂತೆ ಅವರ ವಿಚಾರ ಕೂಡ ಮುಕ್ತ ಮನಸ್ಸಿನದು. ಮೇಲುನೋಟಕ್ಕೆ ಲಿಂಗವಂತ ಸ್ವಾಮಿಗಳಂತೆ ಕಾಣುವ ದಾನಪ್ಪ ಅವರು ನಿರಾಡಂಬರ ಜೀವಿಗಳು. ಅವರ ನಡೆನುಡಿಗಳು ಯಾರೊಂದಿಗೂ ಭಿನ್ನವಾಗದಂಥವು. ಹೋದ–ಬಂದಲ್ಲಿ ಎಲ್ಲರೊಂದಿಗೆ ಜಾತಿ. ಕುಲಭೇದಗಳೆನ್ನದೆ ಒಂದಾಗುವ ಪಾದರಸ ಗುಣ ಅವರದು.

ದಾನಪ್ಪ ಜತ್ತಿ ಈಗ ಓರ್ವ ಪ್ರಖ್ಯಾತ ಪ್ರವಚನಕಾರರೆಂದೇ ಸಾಕಷ್ಟು ಹೆಸರು ಗಳಿಸಿದಂಥವರು. ಅಂದಿಗೂ--ಇಂದಿಗೂ ಅವರ ಪ್ರಗತಿಯಲ್ಲಿ ಅಜಗಜಾಂತರ ಕಂಡುಬಂದರೂ ಅವರ ಸರಳ ಸಜ್ಜನಿಕೆ ಮಾತ್ರ ಒಂದೇ ರೀತಿಯಲ್ಲಿ ಹರಿವ ಧಾರೆ ಯಂತೆ. ನೀರಡಿಸಿದವರೆಲ್ಲ ನೀರು ಕುಡಿದು ತಣಿಯಲು ಎಲ್ಲರಿಗೂ ಅವಕಾಶವಿದೆ.

ದಾನಪ್ಪ ಅವರ ವಾಣಿ ಹಾಗೂ ಚಿಂತನೆಗಳು ನಮ್ಮ ನಾಡಿಗೆ. ನುಡಿಗೆ ಚಾರಿತ್ರಿಕ ಮಾರ್ಗದರ್ಶಕವಾಗಿ ಮುಂದುವರೆಯಲೆಂದು ಈ ಸಂದರ್ಭದಲ್ಲಿ ಹಾರ್ದಿಕ ವಾಗಿ ಹಾರೈಸುತ್ತೇನೆ.

# ಸಾರ್ಥಕ ಬದುಕಿನ ಪ್ರತೀಕ

## ಶಿವಶರಣೆ ನೀಲಮ್ಮತಾಯಿ ಅಸುಂಡಿ

ಸದಾ ಹಸನ್ಮುಖಿ. ಶಾಂತ ಸೌಜನ್ಯತೆಯ ಸರಳ ಸ್ವಭಾವ. ಸದ್ಗುಣಗಳ ಆಗರ. ನಡೆ-ನುಡಿಗಳ ಸಾಮರಸ್ಯದ ಕೊಂಡಿ ಬಂಧುರ. ಮುಚ್ಚು ಮರೆ ಇಲ್ಲದ ಬಿಚ್ಚು ಮಾತು. ಎಚ್ಚರದಪ್ಪದ ವಿವೇಕ. ನಿರಹಂಕಾರದ ಪ್ರತೀಕ. ತಿಮ್ಮನ ಕಥೆಯ ನಗೆ ಚಮತ್ಕಾರವಂತೂ ಬಹು ಮನೋಜ್ಞ. ಜನ್ಮಾಂತರಕ್ಕೂ ನೆನೆಸಿಕೊಂಡು ನಗಬೇಕು. ಆದರೆ ಅವು ಗಾಳಿಗೆ ಹಾರಿಹೋಗುವ ಹಾಸ್ಯದ ಚಟಾಕಿಗಳಾಗಿರದೆ ಸತ್ವಪೂರ್ಣ, ಅರ್ಥಪೂರ್ಣ.

ದೈವೀದತ್ತವಾಗಿ ವರದಾನವಾಗಿ ಬಂದ ಪ್ರವಚನ. ಕೀರ್ತನೆ, ಸಾಹಿತ್ಯ, ಸಂಗೀತ, ಕಲೆ ಜನಮನವನ್ನು ಮುಟ್ಟಿ, ತಟ್ಟಿ ಎಚ್ಚರಿಸುತ್ತದೆ. ಕರ್ನಾಟಕದ ಮೂಲೆ ಮೂಲೆಗಳಲ್ಲಿ ಶ್ರೀ ದಾನಪ್ಪ ಜತ್ತಿಯವರ ಕೀರ್ತನೆ, ಪ್ರವಚನ, ಸಂಗೀತ ತ್ರಿವೇಣಿ ಸಂಗಮವಾಗಿ ಹರಿಯುತ್ತಿದೆ. ಭಾಷೆ ಸರಳ, ಭಾವ ಎತ್ತರದ್ದಾಗಿ ಅನುಭವ ಮಕರಂದವನ್ನು. ಹಾಸ್ಯ ಶೈಲಿಯಲ್ಲಿ ಕೇಳುಗರ ಹೃದಯವನ್ನು ಸೆರೆಹಿಡಿದು ಬಿಂಬಿಸುತ್ತಾರೆ.

ಕರ್ನಾಟಕ ಕಲಾಕ್ಷೇತ್ರಕ್ಕೆ ಕನ್ನಡಮ್ಮನ ವಾತ್ಸಲ್ಯದ ಪುತ್ರರಾಗಿ ನಾಡಿನ ಕಲೆ, ಸಂಸ್ಕೃತಿ, ಧರ್ಮರಕ್ಷಣೆಗೆ ಪ್ರವಚನ, ಕೀರ್ತನೆ ರೂಪದಲ್ಲಿ ಅಪೂರ್ವ ಕಾಣಿಕೆಯನ್ನು ನಾಲ್ವತ್ತು ವರ್ಷಗಳಿಂದ ಸಲ್ಲಿಸುತ್ತ ಈದೀಗ ೫೫ನೇ ವರ್ಷಕ್ಕೆ ಕಾಲಿಡುತ್ತಿರುವ ಶ್ರೀ ಶರಣ ಸಾಹಿತಿ ದಾನಪ್ಪ ಜತ್ತಿಯವರ ಬದುಕು ಸಾರ್ಥಕ.

ಕಲೆಯ ಹಲವು ಮುಖಗಳಿಗೆ ತಮ್ಮನ್ನೇ ತಾವು ಅರ್ಪಿಸಿಕೊಂಡು ಸಮಾಜ ಸೇವೆಗೈದ ಶ್ರೀ ದಾನಪ್ಪ ಜತ್ತಿಯವರ ಹೆಸರು ಜನಜನಿತವಾಗಿದೆ. ಇಂತಹ ಪ್ರತಿಭಾವಂತ ಕಲಾಕಾರರನ್ನು ಗುರುತಿಸಿ, ಅಭಿನಂದನ ಗ್ರಂಥವನ್ನು ಹೊರಡಿಸುತ್ತಿರುವದು ಸಂತಸದ ವಿಷಯ.

ಪ್ರವಚನ ಕಲೆಯನ್ನು ಕಲೆಗಾಗಿ ಬಳಸಿಕೊಳ್ಳದೆ, ಕಲೆಯ ಮಧ್ಯದಲ್ಲಿ ಬದುಕಿನ ಬಗೆಯನ್ನು ಅಗೆದು ನೋಡುವ ಹಿರಿದಾದ ಜಾಣ್ಮೆ ಶ್ರೀ ಜತ್ತಿಯವರದು. "ಬಾಗಿದ ತಲೆ ಮುಗಿದ ಕೈ" ಶರಣ ತತ್ತ್ವವನ್ನು ಚೆನ್ನಾಗಿ ಅಳವಡಿಸಿಕೊಂಡಿದ್ದಾರೆ. ತತ್ತ್ವ ತತ್ತ್ವಕ್ಕಾಗಿಯಲ್ಲ; ತತ್ತ್ವ ಬದುಕಿಗಾಗಿ ಬದುಕುವದಕ್ಕಾಗಿ ಎಂಬುದನ್ನರಿತು ಕೃತಿಯಲ್ಲಿ ಜೀವಂತ ಸ್ವರೂಪಕ್ಕಿಳಿಸಿದ ಶ್ರೀ ದಾನಪ್ಪ ಜತ್ತಿಯವರು ಶತಾಯುಷಿಗಳಾಗಿ, ಪ್ರವಚನ, ಕೀರ್ತನೆ, ಸಂಗೀತ, ಸೇವೆಯನ್ನು ಇನ್ನು ಹೆಚ್ಚಿನ ರೂಪದಲ್ಲಿ ಸಲ್ಲಿಸಿ, ನಿರಂತರವೂ ಶರಣ ಸಾಹಿತ್ಯ ಸಂಸ್ಕೃತಿಯ ವಾರಿಧಿಯಲ್ಲಿ ಮುಳುಗಿ ದೇವ ದರ್ಶನ ಪಡೆಯಲೆಂದು ಅಂತಃಕರಣಪೂರ್ವಕ ಗುರು ದೇವರಲ್ಲಿ ಪ್ರಾರ್ಥಿಸುವೆ.

# ಬಹುಮುಖ ಪ್ರತಿಭಾವಂತ

## ಶಂ. ಗು. ಬಿರಾದಾರ

ಋಜುಮಾರ್ಗದಲ್ಲಿ ನಡೆದು ಸತತ ಸಾಧನೆ. ಪರಿಶ್ರಮಗಳಿಂದ ಓರ್ವ ವ್ಯಕ್ತಿ ಹಲವು ಎಡರು-ತೊಡರುಗಳನ್ನೆದುರಿಸಿಯೂ ಗುರಿಯನ್ನು ಹೇಗೆ ಸಾಧಿಸುತ್ತಾನೆ ಎನ್ನುವುದಕ್ಕೆ ದಾನಪ್ಪ ಜತ್ತಿಯವರು ಒಂದು ನಿದರ್ಶನ. ವ್ಯಕ್ತಿಯ ಬದುಕಿನಲ್ಲಿ ತನ್ನತನದ ಅರಿವು ಮುಖ್ಯ. ನನಗಿರುವ ಒಲವು ಯಾವುದು ? ನಾನು ಏನಾಗಬಲ್ಲೆ ? ಎಂಬುದನ್ನು ಸೂಕ್ಷ್ಮವಾಗಿ ಅರಿತುಕೊಂಡರೆ ಆ ಮಾರ್ಗದಲ್ಲಿ ಸಾಧನೆ ಮಾಡಿ ಗುರಿ ತಲುಪಬಹುದು. ಆ ರೀತಿಯ ಛಲಬೇಕು. ಛಲಕ್ಕೆ ತಕ್ಕಂತೆ ಫಲ ಸಿಕ್ಕುವುದು. ತಾಯಿ ವೇದನೆಯಿಲ್ಲದೇ ಮಗುವನ್ನು ಪಡೆಯಲಾರಳು. ಅಂತೆಯೇ ಸಾಧನೆ ಇಲ್ಲದೇ ನಮಗೆ ಸಿದ್ಧಿ ದೊರೆಯದು. ಇಂಥ ಸದ್ಸಾಧನೆಯಿಂದ ತನ್ನ ಬದುಕನ್ನು ಉಜ್ವಲಗೊಳಿಸಿಕೊಂಡು ಸಾಮಾಜಿಕ ಜೀವನದ ಶುದ್ಧೀಕರಣಕ್ಕೆ ಕಂಕಣಬದ್ಧರಾದ ಸ್ನೇಹಿತ ದಾನಪ್ಪ ಜತ್ತಿಯವರಿಗೆ ಅಭಿನಂದನ ಗ್ರಂಥವೊಂದನ್ನು ಅರ್ಪಿಸುವ ಸಂಕಲ್ಪ ಮಾಡಿದ್ದು ಸಂತೋಷದ ವಿಷಯ. ಸಾಮಾಜಿಕ ಜೀವನದ ಒಳಿತಿಗಾಗಿ ಶ್ರಮಿಸಿ ದವರನ್ನು ಸಮಾಜ ಗೌರವಿಸುವುದು ಸತ್ಸಂಪ್ರದಾಯ.

ದಾನಪ್ಪ ಜತ್ತಿಯವರನ್ನು ನಾನು ಬಹಳ ಹತ್ತಿರದಿಂದ ಬಲ್ಲೆ. ನನ್ನ ಅಧ್ಯಾಪಕ ವೃತ್ತಿಯ ಅವಧಿಯಲ್ಲಿ ಪಡೆದ ಹಲವಾರು ಸ್ನೇಹಿತರಲ್ಲಿ ದಾನಪ್ಪನವರು ಪ್ರಮುಖರು. ಸಾರವಾಡ ಶಾಲೆಯಿಂದ ನನಗೆ ತಿಕೋಟಾಕ್ಕೆ ವರ್ಗವಾಗಿತ್ತು. ನಾನು ಅಲ್ಲಿಗೆ ಬರುವುದನ್ನು ತಿಳಿದು ದಾನಪ್ಪನವರು ಆನಂದಭರಿತರಾಗಿದ್ದರು. ನನ್ನ ಸಾಹಿತ್ಯ ಕಾರ್ಯದ ಬಗೆಗೆ ತಿಳಿದಿದ್ದ, ಹಾಗೂ ಆದೇ ಪ್ರಕಟವಾದ ನನ್ನ 'ಬೆಳಕಿನೆಡೆಗೆ' ಕಾದಂಬರಿಯನ್ನು ಓದಿದ್ದ ಅವರು ನನ್ನ ಬಗೆಗೆ ತುಂಬ ಪ್ರೀತಿ, ಅಭಿಮಾನ ತಾಳಿದ್ದರು. ನಾನು ತಿಕೋಟಾಕ್ಕೆ ಹೋದಾಗ ಜತ್ತಿಯವರು ಹಾಗೂ ಬಹುಮುಖ ವ್ಯಕ್ತಿತ್ವವುಳ್ಳ ಶ್ರೀ ವೀರಪ್ಪ ಇಜೇರಿಯವರು ಹಾರ್ದಿಕವಾಗಿ ಬರಮಾಡಿಕೊಂಡರು. ೧೯೬೨ರಲ್ಲಿ ಅಲ್ಲಿಗೆ ಹೋದ ನಾನು ೧೯೭೬ರ ವರೆಗೆ ಹದಿನಾಲ್ಕು ವರ್ಷಗಳ ಕಾಲ ವನವಾಸವನ್ನಲ್ಲ – ಸಂತಸದ ಜನವಾಸವನ್ನನುಭವಿಸಿದೆ.

ದಾನಪ್ಪ ಆಗಿನ್ನೂ ತರುಣ, ಕಸುಗಾಯಿ. ಅದೇ ವರ್ಷ ತಂದೆಯನ್ನು ಕಳೆದುಕೊಂಡು ಸಂಸಾರದ ಭಾರವನ್ನು ಹೆಗಲಿಗೇರಿಸಿಕೊಂಡ ಅವರಿಗೆ ಸಮಸ್ಯೆಗಳು ಹಲವಾರು. ತಂದೆ ಸಿದ್ರಾಮಪ್ಪನವರು ರಾಜಕೀಯ ಹಾಗೂ ಸಾಮಾಜಿಕ ಜೀವನ ದಲ್ಲಿ ಖ್ಯಾತಿ ಪಡೆದವರು. ಗಣ್ಯ ವ್ಯಕ್ತಿಗಳಲ್ಲೊಬ್ಬರಾದ ಅವರು ಆ ಭಾಗದ

ಜನರಿಗೆಲ್ಲ ಬೇಕಾದವರು. ತಂದೆಗೆ ಒಬ್ಬನೇ ಮಗನಾದ ಇವರು ಮನೆತನದ ಪ್ರತಿಷ್ಠೆಯನ್ನುಳಿಸಿ ಬೆಳೆಸಿಕೊಂಡು ಹೋಗಬೇಕಾಗಿತ್ತು. ಬೇಸಾಯಕ್ಕೆ ಅನುಕೂಲ ವಾದ ಭೂಮಿ, ವ್ಯಾಪಾರಕ್ಕೆ ಅನುಕೂಲವಾದ ಬಟ್ಟೆಯಂಗಡಿಗಳಿದ್ದರೂ ಸಾಲದ ಹೊರೆಯೂ ತಲೆಯ ಮೇಲಿತ್ತು. ಆದರೆ ಯಾವುದನ್ನೂ ಅತಿಯಾಗಿ ಹಚ್ಚಿಕೊಂಡವರಲ್ಲ. ಇವರದು ಕಲಾಪ್ರವೃತ್ತಿ. ವ್ಯಾಪಾರಿ ಮನೋವೃತ್ತಿಯಲ್ಲ. ಆಟ, ನಾಟಕ, ಸಂಗೀತಗಳೆಂದರೆ ಪಂಚಪ್ರಾಣ. ಹೆಣ್ಣುಪಾತ್ರ ಇವರಿಗೆ ಅಚ್ಚು ಮೆಚ್ಚು. ಉತ್ತಮ ಅಭಿನಯ, ಸಹಜ ನಟನೆಯಿಂದ ಜನಮನವನ್ನಾಕರ್ಷಿಸುವ ಕಲೆ ಇವರಿಗೆ ಕರಗತವಾಗಿತ್ತು. ಸುತ್ತಲಿನ ಗ್ರಾಮಗಳಲ್ಲಿ ಎಲ್ಲಿಯೇ ನಾಟಕ ನಡೆಯಲಿ ಅಲ್ಲಿ ಇವರ ಪ್ರಮುಖ ಪಾತ್ರವಿದ್ದೇ ಇರುತ್ತಿತ್ತು. ಊರಿಗೆ ಬಂದ ಕಂಪನಿಯ ನಾಟಕಗಳಲ್ಲಿಯೂ ಅಭಿನಯಿಸಿ ಜನರಿಂದ ಭಲೇ ಎನ್ನಿಸಿಕೊಂಡದ್ದುಂಟು.

ನಾನು ಶಾಲೆ ಬಿಟ್ಟಮೇಲೆ ಅವರ ಅಂಗಡಿಗೇ ಹೋಗುತ್ತಿದ್ದೆ. ಕೆಲ ಜನ ಆಸಕ್ತರು ಅಲ್ಲಿ ಸೇರುತ್ತಿದ್ದರು. ಸಾಹಿತ್ಯ, ಕಲೆ, ಧರ್ಮ ಇತ್ಯಾದಿಗಳ ಬಗೆಗೆ ಚರ್ಚೆ, ವಾದ ನಡೆಯುತ್ತಿತ್ತು. ಏನೆಲ್ಲ ಕೇಳಿ ತಿಳಿಯುವ ಕುತೂಹಲ ದಾನಪ್ಪ ನವರದು. ಇದರಿಂದ ಸಾಹಿತ್ಯದ ಬಗೆಗೆ ಅವರಲ್ಲಿ ಆಸಕ್ತಿ ಹೆಚ್ಚಿತು. ಈ ಮೊದಲೇ ಅವರು ಮನೆಯಲ್ಲಿ ಶಾರದಾಂಬಾ ವಾಚನಾಲಯ ಸ್ಥಾಪಿಸಿ ಹಲವಾರು ಪುಸ್ತಕಗಳನ್ನು ಸಂಗ್ರಹಿಸಿದ್ದರು. ಜೊತೆಗೆ ಛತ್ರೆಯವರ ಸಾರ್ವಜನಿಕ ವಾಚನಾ ಲಯದ ಪುಸ್ತಕಗಳನ್ನು ತಿರುವಿಹಾಕಿದರು. ಹೀಗಾಗಿ ಅವರಲ್ಲಿ ಬರೆಯುವ ಹಂಬಲ ಹುಟ್ಟಿತು. ನಾಟಕ ಪ್ರಪಂಚದಿಂದ ಸಾಹಿತ್ಯಲೋಕಕ್ಕೆ ಕಾಲಿರಿಸಿದರು. 'ಅಮೂಲ್ಯ ಕಾಣಿಕೆ' ಕಥಾಸಂಕಲನ, 'ಭಾವಸೌರಭ' ಕವನಸಂಕಲನ ಹಾಗೂ 'ಬಸವಪಥ' ಸಂಪಾದನಾ ಕೃತಿಗಳನ್ನು ಬೆಳಕಿಗೆ ತಂದರು.

ನಟರಾಗಿ, ಸಾಹಿತಿಯಾಗಿ ಕಾರ್ಯ ಮಾಡುತ್ತಿದ್ದರೂ ಅವರಿಗೆ ತೃಪ್ತಿಯಾಗ ಲಿಲ್ಲ. ಒಳ್ಳೆಯ ಭಾಷಣಕಾರನಾಗುವ ಹಂಬಲ. ಪ್ರಾರಂಭದಲ್ಲಿ ಹೆದರಿಕೆ, ನಡುಕ. ನಾನು ಆಗಾಗ ಧೈರ್ಯ ತುಂಬಿ ಮುನ್ನಡೆಯಲು ಪ್ರೇರೇಪಿಸಿದೆ. ಮುಂದೆ ಸರಾಗ ವಾಗಿ ಮಾತನಾಡುವುದನ್ನು ಕಲಿತರು. ಶಾರದಾಂಬಾ ವಾಚನಾಲಯದ ವತಿಯಿಂದ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಾಹಿತ್ಯ ಸ್ಪರ್ಧೆ, ಸಾಹಿತಿಗಳ ಉಪನ್ಯಾಸಗಳಿಂದ ತಮ್ಮ ಜ್ಞಾನವನ್ನು ವಿಸ್ತರಿಸಿಕೊಂಡರು.

ನಡುನಡುವೆ ಇವರಿಗೆ ಸಿನೀಮಾದಲ್ಲಿ ಪಾತ್ರ ಮಾಡುವ ಗೀಳು ಅಂಟಿ ಕೊಂಡಿತು. ಇದು ನನಗೆ ಇಷ್ಟವಿರಲಿಲ್ಲ. ಕಡೆಗೆ ಪ್ರಯತ್ನಪಟ್ಟು 'ಭಾರತರತ್ನ' ದಲ್ಲಿ ಕಾಣಿಸಿಕೊಂಡರು. ಇಷ್ಟಕ್ಕೇ ಇವರಿಗೆ ಆ ಪ್ರಪಂಚದ ಬಗೆಗೆ ಜಿಗುಪ್ಸೆ ಹುಟ್ಟಿತೇನೋ ? ಮುಂದೆ ಅದರ ನೆನಪು ಕೂಡಾ ತೆಗೆಯಲಿಲ್ಲ.

ಪೂಜ್ಯ ಡಾ. ಜ.ಚ.ನಿ.ಯವರು ತಿಕೋಟಾಕ್ಕೆ ಬರಲು ಜತ್ತಿಯವರೇ ಮುಖ್ಯ ಕಾರಣರು. ನಂತರ ಅವರಿಗೆ ಅಲ್ಲಿ ಭಕ್ತರ ಬಳಗ ಹೆಚ್ಚಿತು. ಈ ಸಮಯದಲ್ಲಿ ಪ್ರೊ. ಮಾಳವಾಡ ದಂಪತಿಗಳು. ಪ್ರೊ. ದೇ. ಜವರೇಗೌಡರು, ಶ್ರೀ ಕೊ. ಚನ್ನಬಸಪ್ಪನವರು, ಡಾ. ಕೆ. ಮುದ್ದಣ್ಣ ಅವರು ಮೊದಲಾದ ಗಣ್ಯ ಸಾಹಿತಿಗಳು ತಿಕೋಟಾಕ್ಕೆ ಬಂದುಹೋದರು. ಇಜೇರಿ ಬಂಧುಗಳು, ಪಾಟೀಲ ಬಂಧುಗಳು, ಇಂಜಗೇರಿ ಮುಂತಾದ ಪ್ರಮುಖರು ಧಾರ್ಮಿಕ, ಸಾಮಾಜಿಕ ಹಾಗೂ ಸಾಹಿತ್ಯಿಕ ಕಾರ್ಯಗಳಲ್ಲಿ ಪ್ರಮುಖ ಪಾತ್ರ ವಹಿಸಿದರು. ಆಗ ತಿಕೋಟಾ ಗ್ರಾಮ ಸಾಂಸ್ಕೃತಿಕ ಕೇಂದ್ರವಾಗಿತ್ತು.

ಮುಂದೆ ವೀರಪ್ಪ ಇಜೇರಿಯವರ ಪ್ರಭಾವದಿಂದ ದಾನಪ್ಪನವರಿಗೆ ಪ್ರವಚನ ದಲ್ಲಿ ಆಸಕ್ತಿ ಹುಟ್ಟಿತು. ಊರಿನ ಮಲ್ಲಯ್ಯನ ಗುಡಿಯಲ್ಲಿ ಪ್ರವಚನ ನಡೆದು ಜನರ ಮೆಚ್ಚುಗೆಗೆ ಪಾತ್ರರಾದರು. ನಂತರ ಸುತ್ತಲಿನ ಗ್ರಾಮಗಳಿಂದ ಪ್ರವಚನ ಕ್ಕಾಗಿ ಕರೆ ಬರತೊಡಗಿತು. ಹೋದಲ್ಲೆಲ್ಲ ಮಾತಿನ ಮೋಡಿಯಿಂದ ಜನಮನ ಗೆದ್ದರು. ಗೌರವಾದರಗಳೊಂದಿಗೆ ಹಣವೂ ಕೂಡತೊಡಗಿತು. ಹೀಗಾಗಿ ಈ ವೃತ್ತಿಯ ಕಡೆಗೆ ವಿಶೇಷ ಗಮನಕೊಟ್ಟರು. ಇವರ ಪ್ರವಚನದಲ್ಲಿ ಬೀಜಿಯವರ ಹಾಸ್ಯ ಚಟಾಕಿಗಳು ಹಾರುತ್ತಲೇ ಇರುತ್ತವೆ. ಸಂಗೀತ, ಹಾಸ್ಯ ರಸಭಾವಗಳಿಂದ ಇವರ ಪ್ರವಚನ ಪರಿಣಾಮಕಾರಿಯಾಗುತ್ತದೆ. ಬಹುತರವಾಗಿ ಸಿದ್ಧಯ್ಯ ಪುರಾಣಿಕರ 'ಶರಣ ಚರಿತಾಮೃತ'ದಿಂದಲೇ ಇವರ ಪ್ರವಚನ ಪ್ರಾರಂಭವಾಯಿತು ಎಂದು ಹೇಳಬಹುದಾಗಿದೆ.

ಒಮ್ಮೆ ಡಾ. ಕರ್ಪೂರಮಠರ ಪ್ರೇರಣೆಯ ಮೇರೆಗೆ ನಾಟಕವೊಂದನ್ನು ಆಡಲು ನಿರ್ಧರಿಸಿದೆವು. ಊರ ಪ್ರಮುಖ ವ್ಯಕ್ತಿಗಳಾದ ಡಾಕ್ಟರರು, ಪೋಲೀಸ ಅಧಿಕಾರಿ, ಚೇರಮನ್, ಸೆಕ್ರೆಟರಿ ಹಾಗೂ ಹಾಯಸ್ಕೂಲ ಹೆಡ್‌ಮಾಸ್ತರ ಮುಂತಾ ದವರು ಪಾತ್ರಧಾರಿಗಳೆಂದು ನಿರ್ಧರಿಸಲಾಯಿತು. ಸರಿ, ನನಗೆ ಒಂದೇ ದಿನದಲ್ಲಿ ನಾಟಕ ಬರೆದುಕೊಡಲು ಒತ್ತಾಯ. "ದೇವ ಸಭೆಯಲ್ಲಿ ಬ್ರಹ್ಮ ಬೆರಗಾದ" ನಾಟಕ ಬರೆದೆ. ಮುಂದೆ ಎರಡೇ ದಿನಗಳಲ್ಲಿ ನಾಟಕ ಪ್ರದರ್ಶನ. ಊರಿನ ಪ್ರಮುಖರು ನಾಟಕವಾಡುತ್ತಾರೆಂಬ ಸುದ್ದಿ ತಿಳಿದು ಅಚ್ಚರಿಪಟ್ಟು ಊರಿನ ಜನರೆಲ್ಲ ಚಾವಡಿ ಮುಂದೆ ಸೇರಿದರು. ಆದರೆ ಪ್ರಮುಖರು ಪಾತ್ರ ವಹಿಸದೆ ನುಸುಳಿಕೊಂಡು ಹೋದರು. ಅನಿವಾರ್ಯವಾಗಿ ಇದ್ದವರನ್ನೇ ಸೇರಿಸಿಕೊಂಡು ನಾಟಕ ಪ್ರಾರಂಭಿ ಸಿದೆವು. ಹೆಡ್‌ಮಾಸ್ತರ ಹುಲಕುರ್ಕಿಯವರು ಯಮನ ಪಾತ್ರದಲ್ಲಿ ಕೋಣನ ಮೇಲೆ ಕುಳಿತುಕೊಂಡು ಜನರ ಮಧ್ಯದಲ್ಲಿ ನುಸುಳಿದಾಗ ಜನ ಕಕ್ಕಾವಿಕ್ಕಿಯಾಗಿ ನೋಡತೊಡಗಿತು. ಪ್ರಮುಖ ಪಾತ್ರಧಾರಿಗಳು ಕೈಕೊಟ್ಟಿದ್ದರಿಂದ ನಾಟಕ ಹದ ಗೆಟ್ಟು ಜನ ಛೀ, ಥೂ ಎನ್ನುತ್ತಾರೇನೋ ಎಂಬ ಹೆದರಿಕೆ. ಆದರೆ ದಾನಪ್ಪನವರ

ಅಭಿನಯ. ವೀರಪ್ಪನವರ ಹಾಡುಗಾರಿಕೆ, ನನ್ನ ಮಾತುಗಾರಿಕೆಗಳಿಂದ ನಾಟಕ ಹೇಗೋ ರಸಮಯವಾಗಿ ಸಾಗಿ ಮುಕ್ತಾಯವಾಯಿತು. ಆ ಘಟನೆ ಇಂದಿಗೂ ನನ್ನ ಸ್ಮರಣೆಯಲ್ಲಿದೆ. ಹೀಗೆ ಹಲವಾರು ರಸಮಯ ಪ್ರಸಂಗಗಳು ಕಾಲಕಾಲಕ್ಕೆ ಜರುಗುತ್ತಿದ್ದವು.

ಜತ್ತಿಯವರು ಮೊದಲು ಕಷ್ಟದಲ್ಲಿದ್ದರೂ ಯಾರ ಮುಂದೆಯೂ ತಮ್ಮ ನೋವನ್ನು ಹೇಳಿದವರಲ್ಲ. ನಗುನಗುತ್ತಲೇ ಜೀವನ ಸಾಗಿಸಿದವರು. ಪುರಸಭೆಯ ಚೇರಮನ್ನರಾಗಿ ಕಾರ್ಯ ಮಾಡುವಾಗಲೂ ಕಲೆಯ ಗೀಳು ಕಡಿಮೆಯಾಗಿರಲಿಲ್ಲ. ಇವರ ಈ ಹಲವು ಹವ್ಯಾಸಗಳಿಂದ ಬಟ್ಟೆಯಂಗಡಿಯ ವ್ಯವಹಾರ ಕುಂಠಿತ ವಾಯಿತು. ಬೇಸಾಯವೂ ಲಾಭದಾಯಕವಾಗಲಿಲ್ಲ. "ನಾಟಕ, ಸಾಹಿತ್ಯ ಅಂತ ದಾನಪ್ಪ ಹಾಳಾಗಿ ಹೋಗುತ್ತಾನೆ" ಎಂದು ಕೆಲವರು ಮಾತನಾಡಿದ್ದೂ ಉಂಟು. ಈ ಮಾತಿನ ಬಿಸಿ ನನಗೂ ತಟ್ಟಿತು. ಯಾಕೆಂದರೆ ಅವರ ಈ ಹವ್ಯಾಸಗಳಿಗೆ ನಾನೂ ಕಾರಣನಾಗಿದ್ದೆ. ವ್ಯಕ್ತಿಯ ಹೆಗ್ಗಳಿಕೆಯನ್ನು ಹಣದ ಮೇಲಿಂದಲೇ ನಿರ್ಧರಿಸುವ ಈ ಕಾಲದಲ್ಲಿ ಅವರು ಮಾತನಾಡುವುದರಲ್ಲಿ ಅರ್ಥವಿತ್ತು. ಈಗ ದಾನಪ್ಪನವರು ಓರ್ವ ಗಣ್ಯವ್ಯಕ್ತಿ. ಹಣ–ಗುಣ ಎರಡನ್ನೂ ಸಂಪಾದಿಸಿದ್ದಾರೆ. ಎಲ್ಲೆಡೆಯಲ್ಲಿ ಜನರ ಪ್ರೀತಿ, ವಿಶ್ವಾಸ ಗೌರವಗಳನ್ನೂ ಗಳಿಸಿದ್ದಾರೆ. ಪ್ರವಚನ ಪ್ರವೀಣರಾಗಿ ಆ ಕಲೆಯನ್ನು ಕರಗತಮಾಡಿಕೊಂಡಿದ್ದಾರೆ. ಅವರ ಸಾಹಿತ್ಯ, ಸಂಗೀತ ಹಾಗೂ ಅಭಿನಯ ಕಲೆಗಳು ಪ್ರವಚನಕ್ಕೆ ಪೂರಕವಾಗಿ ಯಶಸ್ಸಿಗೆ ಕಾರಣವಾಗಿವೆ.

ಇವರು ಕುಳಿತಲ್ಲಿ ಸಂತೆ ನೆರೆಯಿಸಬಲ್ಲ ಚತುರರು. ನಾವು ಹಲವಾರು ಊರುಗಳಿಗೆ ಅತಿಥಿಗಳಾಗಿ ಹೋಗುವಾಗ ದಾರಿಯುದ್ದಕ್ಕೂ ಇವರ ಚೀಟಿ ಪ್ರಸನ್ನನಾಗಿ ನಗೆಯ ಅಲೆಗಳನ್ನೆಬ್ಬಿಸಿದ್ದುಂಟು. ಡಾ. ಕೆ. ಮುದ್ದಣ್ಣ, ಪ್ರಾಚಾರ್ಯ ಪಿ. ವ್ಹಿ. ವಜ್ರಮಟ್ಟಿ, ದಾನಪ್ಪ ಜತ್ತಿ ಹಾಗೂ ನಾನು ಎಲ್ಲರೂ ಕೂಡಿಯೇ ಪ್ರತಿ ಯೊಂದು ಕಾರ್ಯಕ್ರಮಕ್ಕೆ ಹೋಗುತ್ತಿದ್ದೆವು. ದಾನಪ್ಪನವರ ಹಾಡುಗಾರಿಕೆ ಹಾಸ್ಯ ಚಟಾಕಿಗಳಿಂದ ದೂರದ ಪ್ರವಾಸ ರಸಮಯವಾಗುತ್ತಿತ್ತು. ವೀರಪ್ಪ ಇಜೇರಿಯವರು ಕೂಡಿದಾಗಂತೂ ಹಾಸ್ಯದ ಹಾಲಿಗೆ ಉಕ್ಕು ಬರುತ್ತಿತ್ತು.

ದಾನಪ್ಪನವರದು ನಿರಾಡಂಬರ ಜೀವನ. ವಿನೀತಭಾವ. ಶರಣವಾಣಿ "ಗಸಿಯು ಕಲಕದೆ ಕೊಳದ ಮೇಲ್ತಿಳಿಯ ಕುಡಿದು ನಡೆ ಹಸನ ಹಗುರದ ಬಾಳು" ಎಂದು ಡಿ.ವಿ.ಜಿ.ಯವರು ಹೇಳಿದಂತೆ ಜೀವನವನ್ನು ಹಗುರಾಗಿ ಕಂಡವರು. ಯಾರನ್ನೂ ಎದುರು ಹಾಕಿಕೊಳ್ಳದೇ ಯಾರ ಬಗೆಗೂ ಎಂದೂ ಬಿರುನುಡಿಯಾಡದೇ ನಗು ನಗುತ್ತಲೇ ಜನಮನ ಗೆದ್ದವರು. ಒಬ್ಬನೇ ಗಂಡುಮಗು. ದಾನಪ್ಪ ಒಬ್ಬನೇ

ಗಂಡು ಮಗುವಿನ ತಂದೆ. ಮಗ ಸೋಮಶೇಖರ ಸುಶೀಲ, ನೌಕರಿಯಲ್ಲಿದ್ದಾನೆ. ಸಾಹಿತ್ಯದಲ್ಲಿ ಕೃಷಿ ಮಾಡುತ್ತಿದ್ದಾನೆ. ತಾಯಿಯ ಜಗೆಗೆ ಇವರಿಗೆ ಅಪಾರ ಪ್ರೀತಿ, ಗೌರವ. ಅಂತೆಯೇ ಅವರ ಪುಣ್ಯಾರಾಧನೆಯ ಸಮಯದಲ್ಲಿ ಸಾಹಿತ್ಯ-ಸಂಗೀತ, ಪ್ರವಚನ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಾರೆ.

ಬಹುಮುಖ ಪ್ರತಿಭೆಯ ದಾನಪ್ಪನವರು ಈಗ ಪ್ರವಚನ ಪ್ರಪಂಚವನ್ನೇ ಮುಖ್ಯ ವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಹೋದಲ್ಲೆಲ್ಲ ಇವರ ಪ್ರವಚನಕ್ಕೆ ವಿಪರೀತ ಜನಸಂದಣಿ. ಪ್ರೀತಿ-ಗೌರವಾದರ. ಜೊತೆಗೆ ಸಾಕಷ್ಟು ಗೌರವಧನ. ಬಿರುದು ಸನ್ಮಾನಗಳು. ಇಂದು ಹಣಬಲ ಜನಬಲಗಳೊಂದಿಗೆ ಗೌರವಾನ್ವಿತ ವ್ಯಕ್ತಿಗಳಾಗಿ ಬಾಳುತ್ತಿದ್ದಾರೆ.

ಕೆಲವರು ಮೇಲೆ ಹೋದಂತೆ ಸಹಾಯಕರನ್ನು, ಜೊತೆಯವರನ್ನು ಮರೆಯುತ್ತಾರೆ. ಆದರೆ ದಾನಪ್ಪನವರು ಹಾಗಲ್ಲ, ತಮ್ಮ ಏಳ್ಗೆಗೆ ಕಾರಣರಾದವರನ್ನು ಸದಾ ಸ್ಮರಿಸುತ್ತಾರೆ. ಬಿಡುವಿಲ್ಲದ ಕಾರ್ಯಕ್ರಮಗಳಲ್ಲಿಯೂ ಆಗಾಗ ಮನೆಗೆ ಬಂದು ನನ್ನ ಹಾಗೂ ನನ್ನ ಮನೆಯವರ ಯೋಗಕ್ಷೇಮ ವಿಚಾರಿಸಿ ಹರಕೆ ಪಡೆದು ಹೋಗುತ್ತಾರೆ. ಜೀವನದಲ್ಲಿ ಇಂಥ ಆತ್ಮೀಯರು ಸಿಕ್ಕುವುದು ವಿರಳ. ಅವರನ್ನು ಅಗಲಿ ಬಂದು ಹದಿನಾರು ವರ್ಷಗಳಾಗಿದ್ದರೂ ಆ ಸಮಯದ ಸ್ಮರಣೆ ಇನ್ನೂ ಹಚ್ಚ ಹಸಿರಾಗಿದೆ. ನಾನು ಒಂದಿಷ್ಟು ಗಂಭೀರ ಸ್ವಭಾವದ ವ್ಯಕ್ತಿಯಾದರೂ ಅವರೊಡನೆ ಕೂಡಿದಾಗ ವಿನೋದ-ವಿಡಂಬನೆಗಳಿಂದ ವಾತಾವರಣ ರಸಮಯ ವಾಗುತ್ತದೆ.

ಈ ಕಿರುಲೇಖನದಲ್ಲಿ ನನ್ನ ಅವರ ಹದಿನಾಲ್ಕು ವರ್ಷಗಳ ಅನುಭವದ ಘಟನೆಗಳನ್ನೆಲ್ಲ ನಿವೇದಿಸಲು ಸಾಧ್ಯವೇ ? ಅವರು ಬೆಳೆದು ಬಂದ ರೀತಿಯ ಬಗೆಗೆ ಮಜ್ಜಿಗೆಯ ರಾಮಾಯಣದ ರೀತಿಯಲ್ಲಿ ಹೇಳಿದ್ದೇನೆ. ದಾನಪ್ಪನವರ ಶ್ರೇಯಸ್ಸು ನನಗೆ ಹೆಮ್ಮೆ. ಅವರ ಕೀರ್ತಿ ಗೌರವಗಳು ಇನ್ನೂ ಹೆಚ್ಚಲಿ. ಜನಸೇವೆ ಮಾಡುತ್ತ ನೂರ್ಕಾಲ ಬಾಳಲಿ ಎಂದು ಹಾರೈಸುವೆ.

# ಇವನಾರವ ?... ಇವ... ನಮ್ಮವ !

## ಯೋಗೀಶ ಯಡ್ರಾವಿ

ಇಂಗ್ಲಂಡದ ಮಹಾಕವಿ ಷೇಕ್ಸಪೀಯರ್ ಇಂಗ್ಲಂಡದ "ಕಾಳಿದಾಸ" ಎಂಬ ಸ್ತುತಿಗೆ ಪಾತ್ರನಾಗಿದ್ದಾನೆ. ಅವನು ಜಗತ್ತಿನಲ್ಲಿ ದೊಡ್ಡವರು ಮೂರು ಬಗೆಯಾಗಿ ಇರುತ್ತಾರೆಂದು ಹೇಳುತ್ತಾನೆ. ಒಂದನೆಯ ಪ್ರಕಾರದವರು ಜನ್ಮತಃ ದೊಡ್ಡವ ರಾಗಿಯೇ ಹುಟ್ಟುತ್ತಾರೆ. ಅಂಕುರಗೊಳ್ಳುತ್ತಿದ್ದಂತೆಯೇ ಸೌಗಂಧಯುಕ್ತ ಪರಿಮಳ ವನ್ನು ಸುತ್ತಲೂ ಪಸರಿಸುವ ಮರಗದ ಗಿಡವಿದ್ದಂತೆ. ಇವರ ಮಹಿಮೆ ಬಾಲ್ಯ ದಲ್ಲಿಯೇ ಪ್ರಕಟವಾಗಲು ಪ್ರಾರಂಭಿಸುತ್ತದೆ. ಈ ಬಾಲಕರನ್ನು ಜನ ತಮಗರಿವಿಲ್ಲ ದಂತೆಯೇ ಗೌರವಿಸತೊಡಗುತ್ತಾರೆ. ಇವರದು ಹಲವು ಜನ್ಮಗಳಲ್ಲಿ ಸಂಸ್ಕಾರ ಗೊಂಡ ಪರಮ ಪವಿತ್ರ ಚೇತನ. ಇಂಥವರನ್ನೇ ಸಮಾಜ 'ಕಾರಣಿಕ ಪುರುಷ' ರೆಂದೋ 'ಅವತಾರಿಕ'ರೆಂದೋ ಗುರುತಿಸಿ, ಅವರ ಮುಂದಾಳುತನವನ್ನು ಮನಃಪೂರ್ವಕವಾಗಿ ಒಪ್ಪಿಕೊಳ್ಳುತ್ತದೆ. ಅವರ ಸಲಹೆ-ಸೂಚನೆ-ಮಾರ್ಗದರ್ಶನ ಗಳನ್ನು ಸಂಪೂರ್ಣವಾಗಿ ಗೌರವಿಸಿ ಕಾರ್ಯರೂಪಕ್ಕೆ ತರುತ್ತದೆ.

ಷೇಕ್ಸಪೀಯರ್ ಹೇಳಿದ ಎರಡನೆಯ ಬಗೆಯ ದೊಡ್ಡವರು ತಮ್ಮ ಬದುಕಿನ ಉದ್ದಕ್ಕೂ ಆದರ್ಶಪೂರ್ಣ ನಡೆ-ನುಡಿಗಳನ್ನು ತಮ್ಮ ವ್ಯಕ್ತಿತ್ವದಲ್ಲಿ ಅಳವಡಿಸಿ ಕೊಳ್ಳಲು ಅಂತಃಕರಣಪೂರ್ವಕ ಹೆಣಗಿದವರು. ಒಳ್ಳೆಯವರಾಗಿ ಬದುಕಿ, ಒಳ್ಳೆಯದನ್ನೇ ಮಾಡುವ ಹಿರಿಯ ಹಂಬಲ ಇವರದು. ಇವರಿಗೆ ನಾಯಿ-ನರಿ ಗಳಂತೆ ತಮಗಾಗಿ ಹಾಗೂ ತಮ್ಮವರಿಗಾಗಿ ಮಾತ್ರ ಬದುಕಿದರೆ ಸಾಲದು. ಇತರರ ಹಿತ ಸಾಧನೆಯೂ ಅಷ್ಟೇ ಮುಖ್ಯ ಎಂಬ ಉದಾತ್ತ ಪ್ರಜ್ಞೆ ಸಹಜವಾಗಿರುತ್ತದೆ. ಇಂತಹ ಉತ್ಕೃಷ್ಟ ಮಿಡಿವಂತರಾದ ಇವರು ಆ ದಿಸೆಯಲ್ಲಿಯೇ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಪ್ರಾಮಾಣಿಕವಾಗಿ ಪ್ರಯತ್ನಿಸುತ್ತಾರೆ. ಈ ಬಗೆಯ ಪ್ರಯತ್ನ ಪರಿಶ್ರಮಗಳ ಪರಮ ಫಲವೇ ಇವರ ಆಕರ್ಷಕ ವ್ಯಕ್ತಿತ್ವ. ಅಸೂಯೆಗಾರರನ್ನು ಬಿಟ್ಟರೆ, ಸರ್ವರೂ ಸಹ ಇವರತ್ತ ಅಪ್ರಯತ್ನವಾಗೇ ಆಕರ್ಷಿತರಾಗುತ್ತಾರೆ. ಇವರ ಉದಾರ ವ್ಯಕ್ತಿತ್ವಕ್ಕೆ, ಉದಾತ್ತ ಜೀವನಕ್ಕೆ ಮಾರುಹೋಗುತ್ತಾರೆ. ಇವರನ್ನು ಸೂಕ್ತವಾಗಿ ಗೌರವಿಸುತ್ತಾರೆ. ಇವರ ನಾಯಕತ್ವದಲ್ಲಿ ವಿಶ್ವಾಸವಿಡುತ್ತಾರೆ.

ಮೂರನೆಯ ಪ್ರಕಾರದ ದೊಡ್ಡವರ ರೀತಿಯೇ ಬೇರೆ. ದೊಡ್ಡತನವನ್ನು ತಂದು ಅವರ ಮೇಲೆ ಹೊರಗಿನಿಂದ ಹೇರಲಾಗುತ್ತದೆ. ಅವರು ಹುಟ್ಟಿನಿಂದಲೇ ಹೇಳಿಕೊಳ್ಳುವಂತಹ ಯಾವುದೇ ವಿಶೇಷತೆಯನ್ನು ಪಡೆದುಕೊಂಡು ಬಂದವರಂತೂ ಅಲ್ಲವೇ ಅಲ್ಲ. ಅತ್ಯಂತ ಸಾಮಾನ್ಯರಾಗಿ ಹುಟ್ಟುತ್ತಾರೆ, ಸಾಮಾನ್ಯರಾಗಿಯೇ

ಬದುಕುತ್ತಾರೆ. ಅಂತೆಯೇ ಅವರು ಮಹಾನ್ ಆದರ್ಶವೊಂದರ ಸಿದ್ಧಿ–ಸಾಧನೆಗಾಗಿ ತಮ್ಮ ಬದುಕಿನಲ್ಲಿ ಮನಃಪೂರ್ವಕ ಪ್ರಯತ್ನ ಮಾಡಿದವರೂ ಅಲ್ಲ. ಆದರೂ ಅವರನ್ನು ಜನ ದೊಡ್ಡವರೆಂದು ಗೌರವಿಸುತ್ತಾರೆ; ಅವರಿಗೇ ಆಶ್ಚರ್ಯವಾಗುವಂತೆ ನಾಯಕನ ಪಟ್ಟಗಟ್ಟುತ್ತಾರೆ.

ಷೇಕ್ಸ್‌ಪಿಯರ್ ಮಹಾಕವಿ ಬಣ್ಣಿಸಿದ ಈ ಮೂರು ಬಗೆಯ ದೊಡ್ಡವರಲ್ಲಿ ಮೊದಲನೆಯ ಪ್ರಕಾರದವರು ಅತ್ಯಂತ ವಿರಳ. "ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ । ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥" ಎಂಬ ಗೀತೋಕ್ತಿಯಂತೆ, "ಮರ್ತ್ಯಲೋಕದ ಮಹಾಮನೆಯು ಹಾಳಾಗಿ ಹೋಗಬಾರದೆಂದು ಕರ್ತನಟ್ಟಿದನು ಒಬ್ಬ ಶಿವಶರಣನ!" ಎಂಬ ಪ್ರಭುವಾಣಿಯಂತೆ. ಹಾಗೆಯೇ "ಜನಮನ ಶಕ್ತಿಮೇಣಪರಭೀಪ್ಸೆಯೆ ಮಹಾತ್ಮರಂ ತಪ್ಪದೆವಿಮ್ಮಳಿಗೆ ಎಳೆತರ್ಪುದು ಕಣಾ!" ಎಂದು ಕುವೆಂಪು ಅವರು ತಮ್ಮ "ಶ್ರೀ ರಾಮಾಯಣ ದರ್ಶನಂ" ದಲ್ಲಿ ಹೇಳುವಂತೆ ಇಂತಹ ಮಹಾತ್ಮರ, ಮಹಾಪುರುಷರ ಜನ್ಮ ಬಹು ಪ್ರಾಸಂಗಿಕ. ಇವರು ಯಾವಾಗ ಬೇಕೆಂದರೆ ಆಗ ಸಿಕ್ಕುವ ಸಾಮಾನಿನಂತಲ್ಲ! ಅಂತೆಯೇ ಮೂರನೆಯವರದೂ ಮೇಲಿಂದ ಮೇಲೆ ದೊರೆಯುವ ಉದಾಹರಣೆಯಲ್ಲ. ಆದರೆ ತಮ್ಮ ಜೀವನದಲ್ಲಿ ಹಿರಿಯ ಗುರಿಯನ್ನಿರಿಸಿಕೊಂಡು, ಅದರ ಸಾಧನೆಗಾಗಿ ತಮ್ಮ ಸರ್ವಸ್ವವನ್ನು ಅರ್ಪಿಸಿಕೊಂಡು, ಅಷ್ಟೇ ಸಾವಧಾನರಾಗಿ ನಿರಂತರ ದುಡಿದು ದೊಡ್ಡವರಾಗಿ ಹೊರಹೊಮ್ಮಿದವರೇ ಹೆಚ್ಚು ಜನ. ಇದಕ್ಕೆ ಸಾಕ್ಷಿಯಾಗಿ ಇತಿಹಾಸದ ಪುಟಗಳಿಂದ ನಾವು ಅನೇಕ ಉದ್ಧಾಹರಣೆಗಳನ್ನು ಎತ್ತಿ ತೋರಿಸಬಹುದು.



ಮಾನ್ಯ ಶ್ರೀ ದಾನಪ್ಪ ಜತ್ತಿಯವರನ್ನು ನಾನು ಮುಖತಃ ಕಂಡದ್ದು ಎರಡು ಮೂರು ಬಾರಿ ಮಾತ್ರ, ಆದರೂ ಆಕಾಶವಾಣಿಯಿಂದ ಬಿತ್ತರಗೊಳ್ಳುವ ಅವರ "ಶಿವಕೀರ್ತನ"ಗಳಿಂದಲೂ, ಅವರು ನಮಗೆ ಆಗಾಗ ಬರೆಯುತ್ತಿರುವ ಪತ್ರಗಳಿಂದಲೂ, ಅವರು ಹಮ್ಮಿಕೊಳ್ಳುತ್ತಿರುವ ಕಾರ್ಯಕ್ರಮಗಳನ್ನು ಕೇಳಿಯೂ ನಾನು ಅವರನ್ನು ಚೆನ್ನಾಗಿ ಬಲ್ಲೆ. ನಾನು "ಸಂಯುಕ್ತ ಕರ್ನಾಟಕ" ದಿನಪತ್ರಿಕೆಯಲ್ಲಿ ಪ್ರಕಟಗೊಂಡ ಅವರ ವ್ಯಕ್ತಿ ಪರಿಚಯದ ಲೇಖನವನ್ನು ಓದಿ ಅವರ ಬಗೆಗೆ ಇನ್ನೂ ಹೆಚ್ಚಿನ ಗೌರವವನ್ನು ಬೆಳೆಸಿಕೊಂಡಿದ್ದೇನೆ. ಸಮಾಜ ಇಂಥವರನ್ನು ಗುರುತಿಸಿ ಗೌರವಿಸುವದು ಸಹಜ ಕ್ರಿಯೆ. ಅತಿಶಯೋಕ್ತಿಯೆಂಬ ಅರಿಷ್ಟವನ್ನು ನನ್ನ ಮಾತಿಗೆ ಅಂಟಿಸದಿದ್ದಲ್ಲಿ, ನಾನು ಅವರನ್ನು ಷೇಕ್ಸ್‌ಪಿಯರ್ ವರ್ಣಿಸಿದ ಎರಡನೆಯ ಪ್ರಕಾರದ ಮಹಾವ್ಯಕ್ತಿಗಳನ್ನಾಗಿ ಗುರುತಿಸುತ್ತೇನೆ.

ಶ್ರೀ ದಾನಪ್ಪನವರು ಇಂದು ಪಡೆಯುತ್ತಿರುವ ಸನ್ಮಾನ ಅವರ ದೊಡ್ಡತನಕ್ಕೆ ಸಲ್ಲುವ ಸೂಕ್ತ ಗೌರವ. ಅವರು ಮುಟ್ಟಿದ ಈ ವ್ಯಕ್ತಿತ್ವದ ಎತ್ತರದ ಹಿಂದೆ

ಅವರ ಬದುಕಿನ ಧ್ಯೇಯಾದರ್ಶಗಳ ಸ್ಪಷ್ಟ ಸಂಕಲ್ಪವಿರುವಂತೆಯೇ ಆ ಸಂಕಲ್ಪದ ಸಿದ್ಧಿಗಾಗಿ ಅವರು ಜೀವನದುದ್ದಕ್ಕೂ ಸದ್ದುಗದ್ದಲವಿಲ್ಲದೆ ಸಾಗಿಸಿಕೊಂಡು ಬಂದಿರುವ ಪ್ರಾಮಾಣಿಕ ಪ್ರಯತ್ನ ಪರಿಶ್ರಮಗಳೆಲ್ಲವೂ ಇವೆ. ಇಂದು ನಮ್ಮ ಮುಂದೆ ಅವರೊಬ್ಬ ನಮ್ಮ ನಾಡಿನ ಶ್ರೇಷ್ಠ ಕೀರ್ತನಕಾರರಾಗಿ ಕಂಗೊಳಿಸುತ್ತಾರೆ. ಇದು ಮನಃಪೂರ್ವಕ ಮತ್ತು ನಿರಂತರ ಮಾಡುವ ಪರಿಶ್ರಮರೂಪ ತಪಸ್ಸಿಲ್ಲದೆ ಸಾಧ್ಯವಾಗುತ್ತದೆಯೆ ? ಆದ್ದರಿಂದ ದಾನಪ್ಪನವರ ದೊಡ್ಡತನದ ಹಿಂದಿರಬಹುದಾದ ಆ ತಪಸ್ಸನ್ನು ಪರಿಭಾವಿಸಿದಾಗ ನನ್ನ ಹೃದಯ ತುಂಬಿಬರುತ್ತದೆ. ಆಗ ಅವರು ಎದುರಿಸಿರಬಹುದಾದ ಸಂಕಷ್ಟಗಳನ್ನು, ಕಠಿಣ ಪ್ರಸಂಗಗಳನ್ನು ನಾನು ಬಹು ಚೆನ್ನಾಗಿ ಕಲ್ಪಿಸಿಕೊಳ್ಳಬಲ್ಲೆ.

ಶ್ರೀ ದಾನಪ್ಪನವರ ಪರಿಚಯ – ಅವರು ನನ್ನ ಶ್ರೀಮತಿಯವರು ಬರೆದ ಶ್ರೀ ನಿಜಗುಣ ಶಿವಯೋಗಿಗಳ ಜೀವನ ಹಾಗೂ ಕೃತಿಗಳನ್ನು ಆಧರಿಸಿದ 'ಜಾಣರ ದೇವ' ಕಾದಂಬರಿಯನ್ನು ಓದಿ ಮೆಚ್ಚಿಕೊಂಡು ಬರೆದ ಪತ್ರ ಮತ್ತು ಆಮೇಲೆ ಬರೆದ ಒಂದೆರಡು ಪತ್ರಗಳಿಂದ ನನಗೆ ಆಗಲೇ ಆಗಿತ್ತು. ಆಗಲೇ ನಾನು ಮನಸ್ಸಿನಲ್ಲಿ ಇಲ್ಲೊಬ್ಬ ಭರವಸೆದಾಯಕ (**Promising**) ವ್ಯಕ್ತಿ ಇದ್ದಾರಲ್ಲ ! ಎಂದು ಅಂದು ಕೊಂಡಿದ್ದೆ. ಮುಂದೆ ನಾನು ಮತ್ತು ನನ್ನ ಶ್ರೀಮತಿಯವರು ಕೂಡಿಕೊಂಡು ಗಡಹಿಂಗ್ಲಜಕ್ಕೆ ಹೋಗುವ ಪ್ರಸಂಗ ಬಂತು. ಪರಮಪೂಜ್ಯ ಶಿವಶರಣೆ ಶ್ರೀ ಚಂದ್ರಮ್ಮನವರ ಶಿವಯೋಗಾಶ್ರಮದಲ್ಲಿ ನಡೆಯುತ್ತಿದ್ದ ಕಾರ್ಯಕ್ರಮಕ್ಕೆ ನಾನು ಮುಖ್ಯ ಅತಿಥಿಯಾಗಿದ್ದೆ. ಅಲ್ಲಿ ಶ್ರೀ ದಾನಪ್ಪ ಜತ್ತಿ ಕೆಲವು ದಿನಗಳಿಂದ ಶಿವಕೀರ್ತನವನ್ನು ನಡೆಸಿಕೊಂಡು ಬಂದಿದ್ದರು. ಹೀಗಾಗಿ ಅವರನ್ನು ಪ್ರಥಮ ಸಲ ಮುಖತಃ ಕಾಣುವ ಸಂದರ್ಭ ನನಗೆ ಅಲ್ಲಿಯೇ ಪ್ರಾಪ್ತವಾದದ್ದು. ಅವರನ್ನು ಕಂಡಕೂಡಲೇ ಅವರ ನಿಜವ್ಯಕ್ತಿತ್ವದ ಎರಡು ಪ್ರಮುಖ ಅಂಶಗಳಾದ ವಿನಯ ಹಾಗೂ ಎಲ್ಲರನ್ನು ಒಮ್ಮೆಲೆ ಒಳ್ಳೇ ಆತ್ಮೀಯತೆಯಿಂದ ಕಾಣುವ ಹೃದಯ – ಇವು ನನ್ನನ್ನು ಬಹುವಾಗಿ ಆಕರ್ಷಿಸಿದವು, ಆನಂದವೂ ಆಯಿತು.

ಮುರುಗೋಡದ ಶ್ರೀ ಮಹಾಂತ ಶಿವಯೋಗಿಗಳವರ ಮಠದಲ್ಲಿ ಸಧ್ಯದ ಶ್ರೀಗಳಾದ ಶ್ರೀ ಮ.ನಿ.ಪ್ರ. ನೀಲಕಂಠ ಮಹಾಸ್ವಾಮಿಗಳು ಭೀಮಕವಿಯ 'ಬಸವ ಪುರಾಣ'ದ ಮೇಲೆ ಪ್ರವಚನ ಏರ್ಪಡಿಸಿದ ಮಹಾಪ್ರಸಂಗ. ಪ್ರತಿ ಸಂಧಿಯ ಮಂಗಲ ಸಮಾಪ್ತಿಗೆ ಹೊರಗಿನ ವಿದ್ವಾಂಸರನ್ನು ಅತಿಥಿಗಳೆಂದು ಕರೆಸಿ, ಅವರಿಂದ ಪ್ರವಚನ ಅಥವಾ ಉಪನ್ಯಾಸ ಮಾಡಿಸುವ ಅಪರೂಪದ ಕ್ರಮ. ಅಲ್ಲಿಗೆ ಒಂದು ಸಲ ಅತಿಥಿಯಾಗಿ ಹೋಗುವ ಭಾಗ್ಯ ನನಗೂ ಲಭಿಸಿತ್ತು. ನಾನೂ ನನ್ನ ಶ್ರೀಮತಿಯವರೂ ಕೂಡಿಕೊಂಡೇ ಹೋದೆವು. ಅಲ್ಲಿ ಪುರಾಣಿಕರು ಶ್ರೀ ಜತ್ತಿ ಯವರೇ ಆಗಿದ್ದರು ! ಪುನಃ ಅವರ ಅದೇ ವಿನಯ, ಆತ್ಮೀಯತೆಗಳು ನಮ್ಮನ್ನು

ಸ್ವಾಗತಿಸಲು ಸಿದ್ಧವಾಗಿಯೇ ಇದ್ದವು. ಮಹಾತ್ಮಾ ಬಸವಣ್ಣನವರ "ಮಾವಿನ ಕಾಯಿಯೊಳಗೊಂದು ಎಕ್ಕಿಯ ಕಾಯಿ ನಾನಯ್ಯ!" "ಎನಗಿಂತ ಕಿರಿಯರಿಲ್ಲ, ಶಿವಭಕ್ತರಿಗಿಂತ ಹಿರಿಯರಿಲ್ಲ!" "ಸತ್ಯ ಶರಣರ ತೊತ್ತುಭೃತ್ಯನಾಗಿ..." ಎಂಬಿವೇ ಮುಂತಾದ ಮಾತುಗಳು ನನ್ನ ಮನದಲ್ಲಿ ಮೂಡಿ ನಿಲ್ಲುವಂತೆ ಮಾಡಿತು ಶ್ರೀ ದಾಸಪ್ಪನವರ ವಿನಯಶೀಲತೆ. ನಿಜಕ್ಕೂ ಅವರದು ಸದಾ "ಬಾಗಿದ ತಲೆ, ಮುಗಿದ ಕೈ!"

ಅಂತೆಯೇ ಶ್ರೀ ಜತ್ತಿಯವರ ಆತ್ಮೀಯತೆಯದೇ ಒಂದು ತೂಕ. ಅದರ ಸೊಗಸು–ಸ್ವಾರಸ್ಯಗಳೇ ಒಂದು ವಿಧ. ಬಹುಶಃ ನಾವೂ ಅವರೂ ಚಿರಪರಿಚಿತ ಬಂಧುಗಳೇನೋ ಎಂಬಂತೆ ಅವರು ನಮ್ಮೊಡನೆ ನಡೆದುಕೊಂಡ ರೀತಿ ಅಪರದೇ. ಯಾರನ್ನಾದರೂ ತಮ್ಮವರನ್ನಾಗಿಸಿಕೊಳ್ಳುವ ಮಹಾಶಕ್ತಿ ಅದರಲ್ಲಿದೆ. ಅಂತಲೇ ಇಂದು ಅವರು ಇಷ್ಟೊಂದು ದೊಡ್ಡ ಸಂಖ್ಯೆಯಲ್ಲಿ ಅಭಿಮಾನಿಗಳನ್ನೂ, ಆತ್ಮೀಯರನ್ನೂ ಪಡೆದವರಾಗಿದ್ದಾರೆ.

"ಇವನಾರವ, ಇವನಾರವ ಎಂದೆನಿಸದಿರಯ್ಯಾ, ಇವ ನಮ್ಮವ, ಇವ ನಮ್ಮವ ಎಂದೆನಿಸಯ್ಯ ......ನಿಮ್ಮ ಮನೆಯ ಮಗನೆಂದೆನಿಸಯ್ಯ" ಎಂಬ ಕಲ್ಯಾಣದಣ್ಣ, ಜಗದಣ್ಣ ಬಸವಣ್ಣನವರ ಈ ನುಡಿವೇದ ಇಡಿಯಾಗಿ ಶ್ರೀ ಜತ್ತಿಯವರ ವ್ಯಕ್ತಿಮತ್ತೆಗೆ ಅನ್ವಯಿಸುತ್ತದೆಂದು ಹೇಳಿದರೆ ಅತಿಶಯೋಕ್ತಿಯೇನೂ ಅಲ್ಲ; ವಾಸ್ತವತೆಯ ಅಭಿವ್ಯಕ್ತಿಯೆಂದೇ ಹೇಳಬೇಕು. ಹೀಗೆ ಅವರಲ್ಲಿ ಪ್ರಮುಖ ಸದ್ಗುಣಗಳಾದ ವಿನಯ ಸಂಪನ್ನತೆ, ಆತ್ಮೀಯತೆಗಳಿರುವುದನ್ನು ಎತ್ತಿ ತೋರಿಸಿದಮೇಲೆ ಬೇರೆ ಸದ್ಗುಣಗಳೂ ಅವರ ಬಾಳಿನಲ್ಲಿ ಬೆಳಕಿನ ಕಿರಣಗಳಂತೆ ಕಂಗೊಳಿಸುತ್ತಿರುತ್ತವೆ ಎಂದು ಬೇರೆ ಹೇಳಬೇಕಾಗಿಲ್ಲ. ಇಂತು ಅವರ ವ್ಯಕ್ತಿತ್ವ ಸಾಣೆ ಹಿಡಿದ ವಜ್ರದಂತೆ ಸುಂದರವಾಗಿದೆ, ಆಕರ್ಷಕವಾಗಿದೆ.

ಶ್ರೀ ಜತ್ತಿಯವರ ಕೀರ್ತನ-ಪ್ರವಚನಗಳು ತಮ್ಮವೇ ಆದ ವೈಶಿಷ್ಟ್ಯಗಳನ್ನು ಹೊಂದಿವೆ. ಕೀರ್ತನಕಾರರಲ್ಲಿರಬೇಕಾದ ಹಾಸ್ಯಮಯ ಶೈಲಿ, ನಿರೂಪಣ ಕಲೆ, ಗೊತ್ತಿದ್ದ ಮಾತುಗಳಿಗೆ ಹೊಸ ತಿರುವು ಕೊಡುವ ರೀತಿ, ಭಾಷಾಪ್ರಭುತ್ವ, ವಿಷಯ ಸಂಗ್ರಹ ಮುಂತಾದವುಗಳ ಜೊತೆಗೆ ಜನಸಾಮಾನ್ಯರನ್ನು, ವಿದ್ವಾಂಸರನ್ನು ಏಕ ಕಾಲಕ್ಕೆ ತೃಪ್ತಿಪಡಿಸುವ ಮಾತಿನ ಮೋಡಿ ಅವರದಾಗಿದೆ. ಭಾಷೆಯನ್ನು ಸಂದರ್ಭಕ್ಕೆ ಅನುಗುಣವಾಗಿ ದುಡಿಸಿಕೊಳ್ಳುವ ಸಾಮರ್ಥ್ಯ ಅವರಲ್ಲಿ ಅದ್ಭುತವಾಗಿದೆ. ವಿಷಯ ವಿವರಣೆಯನ್ನು ಯಾವಾಗ, ಎಲ್ಲಿ, ಎಷ್ಟು ಹೇಳಬೇಕೆಂಬುದರ ಬಗೆಗೆ ಅವರಲ್ಲಿರುವ ಔಚಿತ್ಯಪ್ರಜ್ಞೆ ನಿಜವಾಗಿಯೂ ಮೆಚ್ಚುವಂತಹದು. ಜನಮನದ ಕಾಳಿಕೆಯ ಕಳೆದು, ಅವರ ನಿತ್ಯದ ಬದುಕು ಹಸನಾಗುವಂತೆ ಮಾಡುವ ದಿವ್ಯಶಕ್ತಿ ಕೀರ್ತನದಲ್ಲಿದೆ.

ನಿಜಕ್ಕೂ ಕೀರ್ತನವೊಂದು ಮಹಾನ್ ಕಲೆಯಾಗಿರುವಂತೆಯೇ ಬಹು ಪ್ರಭಾವಶಾಲಿ ಯಾದ ಸಮೂಹ ಮಾಧ್ಯಮವೂ ಆಗಿದೆ. ಇಂತಹ ಕೀರ್ತನವನ್ನೇ ತಮ್ಮ ಬದುಕಿನಲ್ಲಿ ಪವಿತ್ರ ಕಾಯಕವೆಂದು ಆರಿಸಿಕೊಂಡ ಜತ್ತಿಯವರದು ಸರ್ವಾರ್ಥದಲ್ಲೂ ದೊಡ್ಡ ಜೀವನ, ಅವರ ಬಾಳಿನ ಬೆಳಕೂ ಅದೇ. ಅವರ ಬದುಕಿನ ಉಸಿರೂ ಅದೇ. ಅದನ್ನು ಅವರು ಮನಮುಟ್ಟಿ ಮಾಡುತ್ತಾರೆ: ಅದರ ಬಗೆಗೆ ಅಪಾರ ಆದರ ಭಾವವನ್ನು ಹೊಂದಿದ್ದಾರೆ. ಕೀರ್ತನದ ಕಾಯಕವೇ ಅವರಿಗೆ ಕೈಲಾಸ. ಅದೇ ಅವರ ದಿಬ್ಬ.

ಆಧುನಿಕ ಜೀವನದಲ್ಲಿ ನಿಜ ಜೀವನದ ಮಹಾಮೌಲ್ಯಗಳು ಗಾಳಿಗೆ ತೂರಿ ಹೋಗಿವೆ. ಇಂದಿನ ಶಿಕ್ಷಣ ಪದ್ಧತಿ ಅವುಗಳನ್ನು ಜನಾಂಗಣದ ಜೀವನದಲ್ಲಿ ಪುನಃ ಸ್ಥಾಪಿಸಲು ಅಸಮರ್ಥವಾಗಿದೆ. ಡಾ. ಸಿದ್ಧಯ್ಯ ಪುರಾಣಿಕರ ವಚನವೊಂದು ಈ ದುಃಸ್ಥಿತಿಯನ್ನು ಬಹು ಮಾರ್ಮಿಕವಾಗಿ ಚಿತ್ರಿಸುತ್ತದೆ:

"ವಿದ್ಯೆ ಬಂತು, ವಿನಯ ಹೋಯ್ತು;
ಬುದ್ಧಿ ಬಂತು, ಶ್ರದ್ಧೆ ಹೋಯ್ತು;
ಶ್ರದ್ಧೆ ಬಂತು, ವಿವೇಚನೆ ಹೋಯ್ತು!
ಸಮೃದ್ಧಿ ಬಂತು, ಸಂಸ್ಕೃತಿ ಹೋಯ್ತು;
ವಿಜ್ಞಾನ ಬಂತು, ಸಮಾಧಾನ ಹೋಯ್ತು;
ಶರೀರಸ್ವಾಸ್ಥ್ಯ ಬಂತು. ಚಿತ್ತಸ್ವಾಸ್ಥ್ಯ ಹೋಯ್ತು;
ದೀರ್ಘಾಯುಷ್ಯ ಬಂತು, ಜೀವನ ಸ್ವಾರಸ್ಯ ಹೋಯ್ತು!
ಬೋಧನೆ ಬಂತು, ಸಾಧನೆ ಹೋಯ್ತು;
ಮಾತು ಬಂತು, ಕೃತಿಯು ಹೋಯ್ತು;
ಜಾತಿ ಬಂತು, ಪ್ರೀತಿ ಹೋಯ್ತು;
ಸ್ವಾತಂತ್ರ್ಯ ಬಂತು, ಸೌಜನ್ಯ ಹೋಯ್ತು;
ಸಿದ್ಧಯ್ಯ ಪುರಾಣಿಕ (ಅಹಂಕಾರ) ಬಂದ,
ಸ್ವತಂತ್ರ ಧೀರ ಸಿದ್ಧೇಶ್ವರ (ಪರಮಾತ್ಮ) ಹೋದ!"

ಇಂದಿನ ಪರಿಸ್ಥಿತಿಯನ್ನು – ನಾಡಿನಲ್ಲಿ, ರಾಷ್ಟ್ರದಲ್ಲಿ ಅಷ್ಟೇ ಏಕೆ? ಜಗತ್ತಿನ ವಿವಿಧೆಡೆಗಳಲ್ಲಿ ನಡೆದಿರುವ ಪರಿಸ್ಥಿತಿಯನ್ನು ಮನದಲ್ಲಿ ತಂದುಕೊಂಡು ಆಲೋಚನೆ ಮಾಡುವ ಯಾರಿಗಾದರೂ ಡಾ. ಪುರಾಣಿಕರ ವಚನಾಭಿಪ್ರಾಯ ಯಥಾರ್ಥವೆನಿಸದಿರಲಾರದು. ಇಂದಿನ ಶಿಕ್ಷಣ, ಸಾಮಾಜಿಕ ಹಾಗೂ ರಾಜಕೀಯ ಬೆಳವಣಿಗೆಗಳನ್ನು ಮುನ್ನಗಂಡಾಗ ನಮಗೆ ನಿರಾಶೆಯೊಂದೇ ಕೊನೆಯಲ್ಲಿ ಸಿಕ್ಕುವ ಪ್ರತಿಫಲವಾಗಿದೆ. ಶ್ರದ್ಧೆ, ವಿವೇಚನೆ. ಸಂಸ್ಕೃತಿ, ಸಮಾಧಾನ, ಚಿತ್ತಸ್ವಾಸ್ಥ್ಯ, ಜೀವನ ಸ್ವಾರಸ್ಯ,

ಕಾಯಕ ನಿಷ್ಠೆ, ಪ್ರೀತಿ, ವಿಶ್ವಾಸ, ವಿನಯ, ಸೌಜನ್ಯ, ನಿರಹಂಕಾರ, ಅರ್ಪಣ ಮನೋಭಾವ ಮೊದಲಾದ ಬದುಕಿನ ಚಿರಂತನ ಮೌಲ್ಯಗಳು ಇಂದಿನ ಯುವ ಪೀಳಿಗೆ ಯಲ್ಲಿ ಹಗಲು ದೀವಟಿಗೆ ಹಿಡಿದುಕೊಂಡು ಹುಡುಕಿದರೂ ಸಿಕ್ಕುವುದಿಲ್ಲ. ದುರ್ದೈವ ದಿಂದ ಅಪಮೌಲ್ಯಗಳೇ ಮೌಲ್ಯಗಳ ಸ್ಥಾನವನ್ನಾಕ್ರಮಿಸಿವೆ. ಅವುಗಳ ಪಾಲನೆಯಲ್ಲೇ ಇಂದಿನ ಜನತೆ ಹೆಮ್ಮೆಪಟ್ಟುಕೊಳ್ಳುತ್ತಿರುವುದು ಎಂತಹ ವಿಪರ್ಯಾಸ, ವಿರೋಧಾಭಾಸ !

ಇಂತಹ ದುಃಸ್ಥಿತಿ–ದುರವಸ್ಥೆಗಳು ಜನರ ದೈನಂದಿನ ಜೀವನದಿಂದ ದೂರಾಗ ಬೇಕಾದರೆ, ನಾವು ಗ್ರಹಿಸಬಹುದಾದ ಹಲವು ಸೂಕ್ತ ಉಪಾಯಗಳಲ್ಲಿ ಕೀರ್ತನ ಹೆಚ್ಚು ಪ್ರಭಾವಶಾಲಿಯಾಗಿದೆ ಎಂದೇ ಹೇಳಬೇಕು. ಅದು ಜನರ ಮನಸ್ಸಿನ ಮೇಲೆ ಬೀರುವ ಮಹತ್ಪರಿಣಾಮಗಳು ಒಂದು ರೀತಿಯ ಕ್ರಾಂತಿಕಾರಕ ಸಾಮಾಜಿಕ ಬದಲಾವಣೆಯನ್ನು ತರಬಲ್ಲವು ಮತ್ತು ಅಪೇಕ್ಷಿತ ಆಮೂಲಾಗ್ರ ಸಾಮಾಜಿಕ ಪರಿವರ್ತನೆಯೊಂದು ಸಾಧ್ಯವಾಗದೆ, ಕ್ಷೀಣಿಸುತ್ತಿರುವ ಜೀವನದ ಶಾಶ್ವತ ಮೌಲ್ಯ ಗಳ ಜೀರ್ಣೋದ್ಧಾರವು ಎಂದೂ ಸಿದ್ಧಿಸದು. ಅದು ಕನ್ನಡಿಯೊಳಗಿನ ಗಂಟಾಗಿಯೇ ಉಳಿಯುವುದು. ಹೀಗೆ ಜನತಾ ಶಿಕ್ಷಣ ಮಾಧ್ಯಮವಾದ ಆ ಕೀರ್ತನವನ್ನು ತಮ್ಮ ಪ್ರೀತಿಯ ಕಾಯಕವಾಗಿ ಆರಿಸಿಕೊಂಡಿರುವ ಶ್ರೀ ಜತ್ತಿ ದಾನಪ್ಪನವರು ನಿಜ ವಾಗಿಯೂ ಧನ್ಯರು. ಅವರು ಪಂಚಋಣಗಳಲ್ಲಿ ಮುಖ್ಯವಾದ ಋಷಿಋಣ ಹಾಗೂ ಸಮಾಜ (ನೃ)ಋಣಗಳನ್ನು ತಮ್ಮ ಈ ಕಾಯಕದಿಂದ ತೀರಿಸಿ ನಿಜವಾದ ಅರ್ಥದಲ್ಲಿ ಋಣಮುಕ್ತರಾಗುತ್ತಿದ್ದಾರೆ. ಇಂಥ ಭಾಗ್ಯ ಎಲ್ಲರಿಗೂ ಸಿಕ್ಕುವುದೇ ? ಸಾಧ್ಯವಿಲ್ಲ. "ಪಡೆದು ಬಂದಿರಬೇಕೋ ಗುರುದೇವ !" ಎಂಬಂತೆ ಶ್ರೀ ಜತ್ತಿಯವ ರಂತಹ ಪುಣ್ಯಶಾಲಿಗಳಿಗೆ ಮಾತ್ರ ಇದು ಲಭಿಸುವುದು. ಅವರ ಈ ನುಡಿಸೇವೆ, ನಾಡಸೇವೆಗಳು "ಜನಸೇವೆಯೇ ಜನಾರ್ಧನನ ಸೇವೆ"ಯಾಗಿ ಪರಿಣಮಿಸಿವೆ. ಅವರದು ನಿಜಕ್ಕೂ ಬಹು ಸಾರ್ಥಕವಾದ ಬದುಕು; ಜನ್ಮ ಸಾಫಲ್ಯಕ್ಕೆ ಕಾರಣವಾದ ಬದುಕು.

"ಸಂಸ್ಕರಿಸಿದಂತೆ ಬುದ್ಧಿ, ಸಾಧನೆಯಂತೆ ಸಿದ್ಧಿ" ಎಂಬ ನುಡಿಯಲ್ಲಿ ನಿಜ ಜೀವನದ ಅನುಭವ ಸತ್ಯವೇ ಅಡಗಿದೆ. ಜನಜೀವನದಲ್ಲಿ ಮಾನವೀಯ ಮೌಲ್ಯಗಳ ಪುನಃ ಸ್ಥಾಪನೆಯಾಗಬೇಕಾದರೆ, ಜನರು ಸಂಸ್ಕಾರವಂತರಾಗಬೇಕು. ಬಹಿರಂಗ ಜೀವನದಲ್ಲಿ ನಡೆನುಡಿಗಳು ಶುದ್ಧವಾದಾಗ ಅಂತರಂಗಶುದ್ಧಿ ತಾನಾಗಿಯೇ ಕರಗತ ವಾಗುತ್ತದೆ. ಇಂತಹ ಶುದ್ಧಿ ಸಾಧ್ಯವಾಗಬೇಕಾದರೆ, ಸಂಸ್ಕಾರ ಅಗತ್ಯವಾಗಿರ ಬೇಕು. ಇಂತಹ ಒಳ್ಳೆಯ ಸಂಸ್ಕಾರಗಳು ೧) ತಂದೆ-ತಾಯಿಗಳಿಂದ, ೨) ಕಲಿಸಿದ ಗುರುಗಳಿಂದ, ೩) ಧಾರ್ಮಿಕ ಆಚರಣೆಗಳಿಂದ, ೪) ಶಿಕ್ಷಣದಿಂದ, ೫) ಉತ್ತಮ ಗ್ರಂಥಗಳ ವ್ಯಾಸಂಗದಿಂದ, ೬) ಉತ್ತಮರ ಸಂಗದಿಂದ ಬರುತ್ತವೆ. ಇವುಗಳಲ್ಲಿ

ಉತ್ತಮರ ಸಂಗ ಅತ್ಯಂತ ಪರಿಣಾಮಕಾರಿಯಾದುದು. ಅಂತಲೇ ಸರ್ವಜ್ಞ "ಸತ್ಯರಾ ನುಡಿ ತೀರ್ಥ! ನಿತ್ಯರಾ ನಡೆ ತೀರ್ಥ! ಉತ್ತಮರ ಸಂಗವದು ತೀರ್ಥ..." ಎಂದು ಅಪ್ಪಣೆ ಕೊಡಿಸಿದ್ದಾನೆ. "ಮಾತಿಗೆ ಮಂಗಳವೀವುದಾವುದು ? ಉತ್ತಮ ಸಂಗ" ಎಂದು ಶ್ರೀ ನಿಜಗುಣರೂ ನುಡಿದಿದ್ದಾರೆ. ಕೀರ್ತನದಲ್ಲಿ ತಂದೆ ತಾಯಿಗಳಿಂದ ಬರುವ ಸಂಸ್ಕಾರಗಳ ಪ್ರಕಾರವೊಂದನ್ನು ಬಿಟ್ಟು ಉಳಿದೆಲ್ಲಾ ಬಗೆಯ ಸಂಸ್ಕಾರಗಳೂ ಅಡಕವಾಗಿವೆ. ಆದ್ದರಿಂದ ಕೀರ್ತನಕೇಸರಿಗಳಾದ ಶ್ರೀ ಜತ್ತಿಯವರು ಜನಮನದಲ್ಲಿ ಉತ್ತಮ ಸಂಸ್ಕಾರಗಳನ್ನು ನೆಲೆಗೊಳಿಸುವ ಪವಿತ್ರ ಕಾಯಕದಲ್ಲಿ ನಿರತರಾಗಿದ್ದರಿಂದ ನಮ್ಮೆಲ್ಲರ ಅಭಿನಂದನೆಗೆ ಪಾತ್ರರು.

ಶ್ರೀ ದಾನಪ್ಪನವರನ್ನು ಕುರಿತೇ ಬರೆದಂತಿರುವ ಡಾ. ಪುರಾಣಿಕರ ಈ ವಚನ ಬಹು ಮನೋಜ್ಞವಾಗಿದೆ "ಏನು ಪಡೆದೆವೆಂಬುದು ಮುಖ್ಯವಲ್ಲ, ಹೇಗೆ ದುಡಿದೆವೆಂಬುದು ಮುಖ್ಯವಯ್ಯ; ಏನು ನುಡಿದೆವೆಂಬುದು ಮುಖ್ಯವಲ್ಲ, ಹೇಗೆ ನಡೆದೆವೆಂಬುದು ಮುಖ್ಯವಯ್ಯ; ಏನು ಗಳಿಸಿದೆವೆಂಬುದು ಮುಖ್ಯವಲ್ಲ, ಹೇಗೆ ಬಳಸಿದೆವೆಂಬುದು ಮುಖ್ಯವಯ್ಯ; ಏನ ಕೇಳಿದವು, ಹೇಳಿದೆವೆಂಬುದು ಮುಖ್ಯವಲ್ಲ, ಹೇಗೆ ಬಾಳಿದೆವೆಂಬುದು ಮುಖ್ಯವಯ್ಯ; ಸ್ವತಂತ್ರ ಧೀರ ಸಿದ್ಧೇಶ್ವರಾ, ಏನು ಗೆದ್ದೆವೆಂಬುದು ಮುಖ್ಯವಲ್ಲ, ಏನಾಗಿದ್ದೇವೆಂಬುದು ಮುಖ್ಯವಯ್ಯ!" ಸಾಧಕ ಜೀವಿಗಳಾದ ಶ್ರೀ ಜತ್ತಿಯವರು ಪ್ರಾಪ್ತಿಗಿಂತ ದುಡಿಮೆಗೆ, ನುಡಿಗಿಂತ ನಡೆಗೆ, ಗಳಿಕೆಗಿಂತ ಅದರ ಉಚಿತ ಬಳಕೆಗೆ, ಹೇಳು-ಕೇಳುವದಕ್ಕಿಂತ ಬಾಳಿಗೆ ಪ್ರಾಮುಖ್ಯತೆಯನ್ನು ಕೊಟ್ಟವರು. ಅಂತಲೇ ನಾವಿಂದು ಅವರನ್ನು ಸನ್ಮಾನಿಸುತ್ತಿದ್ದೇವೆ. ಎದೆ ತುಂಬಿ ಅಭಿನಂದಿಸುತ್ತಿದ್ದೇವೆ.

ಶ್ರೀ ಜತ್ತಿ ದಾನಪ್ಪನವರ ಕೀರ್ತನಸೇವೆ ನಿರಂತರವಾಗಿ, ನಿರ್ವಿಘ್ನವಾಗಿ ನಡೆಯಲಿ, ಅವರ ಲೇಖನ ಸೇವೆಯೂ ಇತ್ತೋಪ್ಯತಿಶಯವಾಗಿ ಬೆಳೆಯಲಿ. ಇದಕ್ಕೆಲ್ಲಾ ಬೇಕಾಗುವ ಆರೋಗ್ಯ-ಆಯುಷ್ಯ ಅನುಕೂಲತೆಗಳನ್ನು ದೇವರು ಅವರಿಗೆ ಹುಲುಸಾಗಿ ಕರುಣಿಸಲಿ, ಅಂತೆಯೇ ಅವರ ಬಾಳನೌಕೆ ಸರಾಗವಾಗಿ, ಸುಸೂತ್ರವಾಗಿ ಸಾಗಲು ಸಹಕಾರ–ಸಹಾಯ, ಸಲಹೆ ಸೂಚನೆಗಳನ್ನು ನೀಡಿ ಉಪಕರಿಸುತ್ತಿರುವ ಅವರ ಕುಟುಂಬದವರಿಗೂ, ಬಂಧು ಬಳಗದವರಿಗೂ ಮಿತ್ರ ಮಂಡಲಿಗೂ ಪರಮಾತ್ಮ ಸನ್ಮಂಗಳವನ್ನೀಯಲಿ ಎಂದು ಹೃದಯಾರೆ ಹಾರೈಸುವೆ.

## ಆತ್ಮೀಯ ಅಣ್ಣ

### ಶಾಂತಲಾ ಯೋಗೀಶ ಯಡ್ರಾವಿ

ವಿಜಾಪೂರ ಜಿಲ್ಲೆ ಎಂದೊಡನೆ ಸುಡುವ ಬಿಸಿಲು. ಬರಗಾಲದ ಚಿತ್ರವೇ ಕಣ್ಮುಂದೆ ತೇಲಿ ಬರುವದು ಸಾಮಾನ್ಯ. ಆದರೆ ನವಣಿಯ ಬೋನ, ಹದಣಾದ ಬೆಣ್ಣೆ. ತೆಳ್ಳನ್ನ ಬಿಳಿ ಜೋಳದ ರೊಟ್ಟಿ. ಅಗಸೀಚಟ್ನಿ. ಎಣ್ಣೆಬದನೀಕಾಯಿ. ಹದವಾಗಿ ಹೆಪ್ಪಿಟ್ಟ ಕೆನೆಮೊಸರಿನ ಗಡಗಿ. ಅವಲಕ್ಕಿ ಸೂಸಲ...... ಇವೆಲ್ಲ ಅಲ್ಲಿ ಸರ್ವೇಸಾಮಾನ್ಯ. ಉಣಿಸುತಿನಿಸಾದರೂ ಆ ರುಚಿ, ಆ ಸವಿ ಅವುಗಳೊಡನೆ ಬೆರೆತ ಆ ಜನರ ಆತ್ಮೀಯತೆಯ ಆತಿಥ್ಯ ಅಸಾಮಾನ್ಯವೆಂದೇ ಹೇಳಬಹುದು. ಲೀಟರ ನೀರಿಗೆ ಲೋಟಹಾಲು ಬೆರಸಿ ಇಡೀ ದಿನ ಬಾಯಿ ಚಪ್ಪರಿಸುವವರಿಗೆ ಕೆನೆಮೊಸರಿನ ಗಡಗಿಯೇ ಕೈಗೆ ಸಿಕ್ಕರೆ ಅದೆಷ್ಟು ಸಂತೋಷಗೊಂಡಾರು ! ವಿಜಾಪೂರ ಜಿಲ್ಲೆ ಹೊರಗಣ್ಣಿಗೆ ಗಡಸು ಬಿರುಸು. ಆದರೆ ಒಳಗೆ ಸವಿಯಾದ ಕೆನೆಮೊಸರಿನಂತೆ... ಮೃದುವಾದ ಬೆಣ್ಣೆಯಂತೆ, ಅಲ್ಲಿಯ ಜನರೂ ಹಾಗೇ.

ದೂರದ ಆ ಬಯಲು ನಾಡಿನ ಬೆಂಗಾಡಿನೊಡಲಿನಲ್ಲಿ 'ತಂಗೀ' ಎಂಬ ಅಂತಃಕರಣದ ಕರೆ ಈ ತಂಗಿಯ ಕಿವಿ ಸೇರಿ "ಒಡಹುಟ್ಟಿದ ಅಣ್ಣನ" ಅಂತರಂಗದ ಐಸಿರಿ ಕಣ್ಣು ಕೋರೈಸಿ ಬ್ರಹ್ಮಾಂಡದೊಡಲಲ್ಲಿ ಮೂಡಿಬಂದ ಎರಡು ಜೀವಿಗಳ ಪರಮಾರ್ಥದ ಆತ್ಮ ಸಂಬಂಧದ ಬಂಧುರವಾಗಿ ಈ ಲೋಕದಮೋಹ. ಸ್ವಾರ್ಥ, ಸಂಕುಚಿತ ದೃಷ್ಟಿಯ ಪರದೆಯನ್ನು ಕಿತ್ತುಕೊಸರಿ "ಅನತಿ ಕಾಲದ ಪರಿಚಯ ಅನಂತಕಾಲದ ಚಿರಪರಿಚಿತ ಪರಿಸರವನ್ನು ನಿರ್ಮಿಸಿ. ಲೌಕಿಕದ ಯಾವ ಒಣ ಕಟ್ಟಳೆ ಗಳಿಲ್ಲದೆ ಪಾರಲೌಕಿಕ ಪರಿಮಿತಿಯಲ್ಲಿ 'ಈ ಒಡಹುಟ್ಟಿದ' ಸಂಬಂಧ ಸುಭದ್ರ ವಾದದ್ದು, ಅಗೋಚರವಾಗಿ ನಡೆದಿತ್ತು. ಕಣ್ಣು ಕಾಣದಿದ್ದರೂ ಕರುಳು ಕಂಡಿತ್ತು.

ಕಲಾಪ್ರತಿಭೆಯಿಂದ ಕಂಗೊಳಿಸುವ ಅಣ್ಣ ಶ್ರೀ ಜತ್ತಿಯವರು ಶರಣರ ತಾತ್ವಿಕ ಸತ್ಯವನ್ನು ಸ್ವಾನುಭವದ ಶಿವಾಂಶವನ್ನು ಕಂಡುಂಡು ರಸಾನುಭವವಾಗಿ ಪರಿವರ್ತಿಸಿ ಸಾಮಾನ್ಯರಿಗೂ ಆ ಅಸಾಮಾನ್ಯ ರಸರುಚಿಯನ್ನು ದಾನಮಾಡಿದುದ ರಿಂದ ಅವರು ತೊಟ್ಟ ಹೆಸರಿಗೊಂದು ವಿಶೇಷ ಸಾರ್ಥಕತೆ ಬಂದಿದೆ ಎಂದೇ ಹೇಳುಬಹುದು. ಹೆಸರಿಟ್ಟವರೂ, ಜನ್ಮಕೊಟ್ಟವರೂ ಧನ್ಯರೆಂದೇ ಹೇಳಬಹುದು.

ಮತ್ತೆ ಮತ್ತೆ ಕೇಳಬೇಕೆಂಬ ಬಯಕೆ ಮೂಡಿಸುವ ಸಮ್ಮೋಹನ ಕಲೆ ಅವರ ಕಂಠಶ್ರೀಗಿರುವಂತೆ, ಅಪರಿಚಿತರನ್ನು ಆತ್ಮೀಯತೆಯಿಂದ ಕಾಣುವ, ಮಾನವೀಯತೆ ಯಿಂದ ಅಂತಃಕರಣದಿಂದ ಕಾಣುವ ಆತ್ಮಶ್ರೀಯೂ ಅವರಿಗಿದೆ.

ಅವ್ಯಕ್ತವಾಗಿ ಅರ್ಥವಾಗದ ಅದೆಷ್ಟೋ ಬಾಂಧವ್ಯಗಳು, ಸಂಬಂಧಗಳು ಸೃಷ್ಟಿಯಾಗುತ್ತಲೇ ಇರುತ್ತವೆ ಈ ಸೃಷ್ಟಿಯಲ್ಲಿ. ಕೆಲವು ವಿಪರೀತಾರ್ಥಕ್ಕೆಡೆ ಮಾಡುತ್ತವೆ, ಇನ್ನು ಕೆಲವು ದುರಂತದಲ್ಲಿ ಪರ್ಯವಸಾನಹೊಂದುತ್ತವೆ. ಮತ್ತೆ ಕೆಲವು ಸುಖದ ಸುಗ್ಗಿಗೆ ದಾರಿಮಾಡುತ್ತವೆ. ಇನ್ನು ಕೆಲವು ಯಾವುದೋ ಜನ್ಮದ ಋಣಾನುಬಂಧ ಈ ಜನ್ಮದಲ್ಲಿ ತನ್ನ ಲೆಕ್ಕವನ್ನು ಪೂರ್ತಿಗೊಳಿಸಿಕೊಳ್ಳುತ್ತದೆ. ಆದ್ದರಿಂದಲೇ ಅಲ್ಲವೇ ಅಪರಿಚಿತರಿದ್ದರೂ ತೀರ ಪರಿಚಿತರಂತೆ ಸ್ನೇಹ ಪ್ರೀತಿ ಹುಟ್ಟಿಸುತ್ತದೆ. ಮತ್ತೆ ಕೆಲವರನ್ನು ಕಂಡರೆ ವೈರಿಗಳನ್ನು ಕಂಡಂತೆ ಸುಮ್ಮ ಸುಮ್ಮನೇ ಮುಖ ತಿರುಗಿಸುತ್ತೇವೆ.

ಇರಲಿ ಲೌಕಿಕದ ಗೊಡವೆಯನ್ನು ಆಚೆಗೆ ಸರಿಸಿಟ್ಟು ಪಾರಲೌಕಿಕದ ಪವಿತ್ರ ಶ್ರೀರಕ್ಷೆಯ ನಿರಾಳ ನಿಲುವಿನಲ್ಲಿ ನಿಂತು, ಅಂತರಾಳದ ಎರಡು ಮಾತನ್ನು ಎದೆತುಂಬಿ ನನ್ನ ಒಡಹುಟ್ಟಿದ ಅಣ್ಣ ಶ್ರೀ ಜತ್ತಿಯವರ ಬಗೆಗೆ ಹೇಳಬಲ್ಲೆನಾದರೆ !!......

ಚಿತ್ರನಟರಾಗಿ, ನಾಟಕಕಾರರಾಗಿ, ಲೇಖಕರಾಗಿ, ಪ್ರವಚನಕಾರರಾಗಿ, ಕೀರ್ತನಕಾರರಾಗಿ. ಬಹುಮುಖ ಕ್ಷೇತ್ರಗಳಲ್ಲಿ ತಮ್ಮದೇ ಆದ ಪ್ರತಿಭೆ, ಪಾಂಡಿತ್ಯ, ಕಲಾ-ಕೌಶಲ್ಯಗಳಿಂದ ಜನಮನ ಗೆದ್ದು ಅವರಿಗೆಲ್ಲ ಹತ್ತಿರದವರಾಗಿ, ಬೆಲ್ಲದ ಹೇರಾಗಿ ಎಲ್ಲರ ನಾಲಿಗೆಯ ಮೇಲೆ ಉಲಿಯುವ ಹೆಸರೆಂದರೆ ಶ್ರೀ ದಾನಪ್ಪ ಜತ್ತಿಯವರದು.

ಹೊತ್ತಿನ ಪರಿವೆ ಇಲ್ಲದೆ, ಆದರೂ ಹೊತ್ತು ಕೈ ಜಾರದಂತೆ ಹೊತ್ತು ಹೋಗದ ಮುನ್ನ ಹೊತ್ತಿಗೆ ಸರಿಯಾಗಿ ಬಂದು, ಹೊತ್ತಿಗೆಗೇ ಧ್ವನಿ ಬಂದಂತೆ ಪ್ರವಚನ ಮಾಡುವ, ಕೀರ್ತನ ಮಾಡುವ ಉತ್ತಮೋತ್ತಮ ಕಲಾ ಪ್ರೌಢಿಮೆ ಅಣ್ಣ ಶ್ರೀ ಜತ್ತಿಯವರಿಗೆ ಅತ್ಯಂತ ಯಶಸ್ವಿಯಾಗಿ ಸಿದ್ಧಿಸಿದೆ. ಈ ಸಿದ್ಧಿಯ ಹಿಂದೆ ದೀರ್ಘ ಸಾಧನೆಯಿದೆ. ಪ್ರಾಮಾಣಿಕ ಪರಿಶ್ರಮವಿದೆ. ಅಂತೆಯೇ ಅಪಾರ ಅನುಭವವಿದೆ. ಪ್ರಾಮಾಣಿಕ ಪರಿಶ್ರಮವಿದ್ದಲ್ಲಿ ಪರಮಾತ್ಮನ ಕರುಣೆ, ಕೃಪೆ ಇರುತ್ತದೆಂಬುದು ಸುಳ್ಳಲ್ಲ.

ಹಣ್ಣು ತಿಂದು ಹರುಷ ಪಡುವವರು ತೋಟಿಗನ ಅನುವು-ಆಪತ್ತುಗಳನ್ನು ಹೇಗೆ ನೋಡುವುದಿಲ್ಲವೋ ಹಾಗೆ ನಾವಿಂದು ಅಣ್ಣ ಶ್ರೀ ಜತ್ತಿಯವರ ಪರಿಪಕ್ವ ಪ್ರವಚನ, ಸುಮಧುರ ಕೀರ್ತನ ಕೇಳಿ ಸಂತೋಷ ಪಡುತ್ತೇವೆ. ಆದರೆ ಅದರ ಹಿಂದೆ ಅವರುಂಡ ನೋವುಗಳು, ಸಂಕಷ್ಟಗಳು, ಅನುವು-ಆಪತ್ತುಗಳು ನಮಗೆ ಕಾಣುವುದೇ ಇಲ್ಲ. ಹೌದು... ಅದೇ ನಿಜವಾದ ಶಿವಭಕ್ತರ ಶರಣರ ಸ್ವಭಾವ. ಸದ್‌ಭಾವ. ಗಂಧದ ಕೊರಡು ತನ್ನ ಮೈ ತೇದುಕೊಂಡು ಮೆಲ್ಲಮೆಲ್ಲನೆ ಕರಗುತ್ತ ಸೊರಗುತ್ತ ಪರಿಮಳದ ಗಂಧವನ್ನು ಕೊಡುತ್ತದೆ. ತನ್ನ ಮೈ ತಾನೇ ಸುಟ್ಟು ಕೊಳ್ಳುತ್ತ ದೀಪ ಬೆಳಕನ್ನು ನೀಡುತ್ತದೆ. ಅಣ್ಣ ಶ್ರೀ ಜತ್ತಿಯವರನ್ನು ಅತ್ಯಂತ ಸಮೀಪದಿಂದ ಕಂಡವರಿಗೆ ಮೇಲಿನ ಮಾತು ಸತ್ಯವೆನಿಸದಿರಲಾರದು.

ಅಣ್ಣ ಶ್ರೀ ಜತ್ತಿಯವರು ನಮ್ಮ ನಾಡಿನ ಶ್ರೇಷ್ಠ. ಸುಪ್ರಸಿದ್ಧ ಪ್ರವಚನ ಕಾರರಾಗಿ, ಕೀರ್ತನಕಾರರಾಗಿ ಜನಮನದಲ್ಲಿ ಧಾರ್ಮಿಕ ಭಾವನೆ, ಭಕ್ತಿಗಳನ್ನು ಭದ್ರಗೊಳಿಸುತ್ತ, ಶರಣರು ಬಾಳಿಬೆಳಗಿದ ಮರ್ಮ ತಿಳಿಸುತ್ತ, ಮೂಲಭೂತ ಮಾನವೀಯ ಮೌಲಿಕ ತತ್ತ್ವಗಳನ್ನು ತಲಸ್ಪರ್ಶಿಯಾಗಿ ವಿಶ್ಲೇಷಿಸಿ, ವಿಭಜಿಸಿ, ವಿಮರ್ಶಿಸಿ, ವಿವೇಚಿಸಿ, ವಿಚಾರ ಮಾಡುವಂತೆ ಬುದ್ಧಿಯನ್ನು ಬಡಿದೆಬ್ಬಿಸಿ, ಹಾಲ್ ಬೆಳಸಿ ತಿಂದಂತೆ, ಹಾಲ್ಜೇನು ಕುಡಿದಂತೆ ಆ ತಾತ್ವಿಕ ರುಚಿಯನ್ನು ಜನರಿಗೆ ಹಚ್ಚುವದು ಸಾಮಾನ್ಯ ಮಾತೇನಲ್ಲ. ತಮ್ಮ ಸಮಗ್ರ ಜೀವನವನ್ನೇ ಅದಕ್ಕಾಗಿ ಮುಡುಪಿಟ್ಟು ನಡೆದಂತೆ ನುಡಿವ, ನುಡಿದಂತೆ ನಡೆವ ಅವರ ನಡೆನುಡಿಗಳೊಂದಾದ ಆ ಪವಿತ್ರ ಸಂಗಮದಲ್ಲಿ ನಾವು ಬಸವಣ್ಣನವರನ್ನು ಕಾಣಬಹುದು. ಅಥವಾ ಕೂಡಲ ಸಂಗನು ದೇವನನ್ನೇ ಕಾಣಬಹುದು. ಇಂದು "ಮೈಯುದ್ದ ಮಾತು – ಚೋಟುದ್ದ ನಡೆ" ಇರುವವರೇ ತುಂಬಿ ತುಳುಕುತ್ತಿರುವಾಗ ನಡೆ–ನುಡಿ ಒಂದಾದವರ ಮಾತು ಈಗಿನ ಜನಕ್ಕೆ ಸುಳ್ಳೆನಿಸಬಹುದು.

ಅವರ ಪ್ರವಚನ, ಕೀರ್ತನೆಗಳು ಕೇಳಲಷ್ಟೇ ಅಪ್ಯಾಯಮಾನವಲ್ಲ. ಕಿವಿಯಲ್ಲಿ ಸೇರಿ, ನೇರವಾಗಿ ಹೃದಯಕ್ಕೆ ಇಳಿದು, ಕರಳು ಕರಗಿಸಿ, ಕಂಬನಿ ಉಕ್ಕಿಸಿ, ನಮ್ಮಂತರಂಗದ ಸ್ಥಿತಿಗತಿಯನ್ನು ನಾವೇ ತೂಗಿ, ಅಳೆದು ನೋಡಿ, ತಪ್ಪು ಒಪ್ಪಿ ತಿದ್ದಿಕೊಂಡು, ಅವರ ಮಾತನ್ನು ಅಪ್ಪಿ ಆಚರಣೆಯಲ್ಲಿ ತರುವಂತೆ ಮಾಡುವ ಒಂದು ಆಕರ್ಷಣೆ ಇದೆ. ಅದು ಅವರ ವಾಙ್ಮಯ ತಪಸ್ಸಿನ ಫಲವೆಂದೇ ಹೇಳಬಹುದು. ಅವರ ಸಾಧನೆಯಲ್ಲಿ ಒಂದು ಸುದೃಢ ನಿಲುವಿದೆ. ಜೊತೆಗೆ ಅದನ್ನು ಸಾಧಿಸಿಯೇ ತೀರುವೆನೆಂಬ ಛಲವಿದೆ. ಅದರ ಫಲವೇ ಇಂದು ಅವರ ಹಣ್ಣಾದ ಹೃದಯದಲ್ಲಿ ಹಾಡು ಮಾಗಿ ನಿಂದಿದೆ. ಆದರಿಂದ ಅವರ ಕೀರ್ತನಕ್ಕೊಂದು ಕಳೆಬಂದು ಕಲೆಯಾಗಿ, ಅಲೆಯಾಗಿ ಕೇಳುಗರನ್ನು ಸಮ್ಮೋಹನ ಲೋಕಕ್ಕೆ ಕರೆದೊಯ್ಯುತ್ತದೆ. ಅವರ ಮೈಯ ನರನಾಡಿಗಳನ್ನು ಮೀಂಟಿ ನಾಭಿ, ಹೃದಯ, ಕಂಠಗಳಿಂದ ಚಿಮ್ಮಿ ಹೊಮ್ಮಿ ಸಿರಿಹರಯೆ ಪಡೆದು ಧುಮ್ಮಿಕ್ಕುವ ಕೀರ್ತನಗಂಗೆ ಕಥೆ, ಉಪಕಥೆ ದೃಷ್ಟಾಂತಗಳಿಂದ ತುಂಬಿ ಸೂಸುತ್ತ, ಅಭ್ಯಾಸ, ಅನುಸಂಧಾನ, ಅನುಭವಗಳ ವಿಸ್ತಾರ ಪಡೆದು ಭಾವ–ಭಾವಗಳಲ್ಲಿ ಸಮರಸವನ್ನು ಬಿಂಬಿಸುವ, ತುಂಬಿಸುವ ಜಾಣ್ಮೆ ಅವರಿಗಿದೆ. ಆದ್ದರಿಂದ ಅವರ ಕಾರ್ಯಕ್ರಮಕ್ಕೆ ಜನರು ಅಪಾರ ಸಂಖ್ಯೆಯಲ್ಲಿ ಸೇರುತ್ತಾರೆ.

೧೨ನೆಯ ಶತಮಾನದಲ್ಲಿ ಕಾರು, ಟಿ.ವ್ಹಿ. ಸಿನೇಮಾ, ಹೊಟೇಲು ಈ ಯಾವವೂ ಇರದ ಆ ಕಾಲದಲ್ಲಿ ಶ್ರೀ ಬಸವಣ್ಣನವರು,

"ಮತ್ತೊಂದ ಕಾಣದಂತೆ
ಮತ್ತೊಂದ ಕೇಳದಂತೆ

ನಿಮ್ಮ ಶರಣರ ಪಾದವಲ್ಲದೆ
ಅನ್ಯ ವಿಷಯಕ್ಕೆಳಸದಂತೆ
ಇರಿಸಯ್ಯಾ ಕೂಡಲ ಸಂಗಮದೇವಾ"

ಎಂದು ಬೇಡಿಕೊಂಡಿದ್ದರು. ಆದರೆ ಇಂದು ಅವೆಲ್ಲ ಸಾಧನಗಳು ಕೈಗೆಟುಕು ವಂತಿದ್ದರೂ ಅಣ್ಣ ಶ್ರೀ ಜತ್ತಿಯವರ ಬೇಡಿಕೆ ಕೂಡ ಅದೇ ಆಗಿದೆ. ಅವರು ಮಡದಿ, ಮಕ್ಕಳನ್ನು ಅಗಲಿ ಇದ್ದರೂ ಇರಬಹುದು. ಆದರೆ ವ್ಯಾಸಂಗ, ಸತ್ಸಂಗಗಳನ್ನು ಅಗಲಿ ಇರಲಾರರು. ಹಸಿವು, ನೀರಡಿಕೆ, ನಿದ್ರೆಗಳನ್ನು ಮರೆತರೂ ಮರೆಯಬಹುದು. ಆದರೆ ಸಾಧನೆ, ಶಿವಾರಾಧನೆ, ಬೋಧನೆಗಳನ್ನು ಎಂದೂ ಮರೆಯಲಾರರು. ಅವರ ಈ ಸದ್ದಿರದ ಸಾಧನೆಗೆ ಮಾರುಹೋಗಿ ಮುಗ್ಧರಾದ ಜನ ಕರೆಕರೆದು ಗೌರವದ ಗದ್ದುಗೆ ಹಾಸುತ್ತಾರೆ.

ಕೋಟಿ ಕೋಟಿ ಜನ್ಮದ ಪುಣ್ಯ ಕೆನೆಗಟ್ಟಿ ಜೀವಕೋಟಿಯಲ್ಲಿಯೇ ಶ್ರೇಷ್ಠ ವೆನಿಸಿದ ಮಾನವ ಜನ್ಮದ ಸಾರ್ಥಕತೆ ಕೇವಲ ವಿಷಯ ಭೋಗ, ಮೋಜು ಮಜಲು ಇವುಗಳಲ್ಲಿ ಇಲ್ಲವೆಂಬುದನ್ನು ಕೋಟಿಗೊಬ್ಬರು ಮಾತ್ರ ತಿಳಿದಿರುತ್ತಾರೋ ಏನೋ, ಕೋಟಿಗೊಬ್ಬ ಶರಣರ ಸಾಲಿನಲ್ಲಿ ಅಣ್ಣ ಶ್ರೀ ದಾನಪ್ಪ ಜತ್ತಿ ಕಂಗೊಳಸುತ್ತಾರೆ. ಅವರು ಪ್ರಾಮಾಣಿಕವಾಗಿ ಪಾರಮಾರ್ಥದ ಪಥ ಸಂಚಾರಿ. ಅವರು ನಿತ್ಯ ನಿತಾಂತ ನಿಜಸುಖದ ನಿಕ್ಷೇಪ ಸಂಪಾದನೆಯ ಗುರಿಯುಳ್ಳವರು. ಅವರು ಶ್ರೀಗುರುವಿನ ಚಿಚ್ಚರಣ ಕಿರಣದಲ್ಲಿ ಬಿಚ್ಚರಳಾದವರು. ಇಂಥ ಪರಮ ಚರಮ ಸಂಸ್ಕಾರವುಳ್ಳ ರಸಯೋಗಿ ಒಡಹುಟ್ಟಿದ ಅಣ್ಣ ಶ್ರೀ ದಾನಪ್ಪ ಜತ್ತಿಯವರಿಗೆ ತಂಗಿಯ ನೂರು ನಮಸ್ಕಾರ.

ಬಸವಮಂತ್ರ, ಶರಣರ ಗುಣಗಾನ, ಬಸವಪುರಾಣ, ಪ್ರವಚನ–ಕಿರ್ತನವಲ್ಲದೇ ಬೆಳಗಿಲ್ಲ, ಊಟವಿಲ್ಲ, ನಿದ್ರೆಯಿಲ್ಲ; ಅವುಗಳಲ್ಲಿಯೇ ಸಕಲ ಸಂಪತ್ತು, ಶರಣರ ಸಂಗ ಕೈಲಾಸ ಕಂಡ ಆ ಕಾಯಕ ಯೋಗಿಗೆ ಇದೋ ನುಡಿ ನಮನ,

ತವರೀನ ಬಳ್ಳಿ
ಕರಕೀಯ ಬೇರಿನಾಂಗ ಆಳಕ್ಕಿಳಿದು ಹಬ್ಬಲೆಂದು
ದೂರದ ಈ ತಂಗಿಯ
ಶುಭ ಹಾರೈಕೆ.

# ಸ್ವರ್ಗದಾ ಒಂದು ತುಣುಕು......

## ಸುಮಿತ್ರಾ ಕುಂಬಾರ

ನಾವು ಕೇಳುತ್ತ ಇದ್ದೇವೆ ಪುರಾಣ, ಕೀರ್ತನ, ಪುಣ್ಯಕಥಾಶ್ರವಣ ಇವುಗಳ ಪ್ರತಿಫಲ ಬಹಳ ದೊಡ್ಡದು ಎಂದು. ಅದರಲ್ಲಿಯೂ ಬಸವಪುರಾಣದ ಬಗ್ಗೆ ಹೇಳಬೇಕೆಂದರೆ ಸಂಕಲ್ಪಸಿದ್ಧಿದಾಯಕವಾದದ್ದು. ನಮ್ಮೂರಲ್ಲಿ ಅಂದರೆ ಚಿಂಚಣಿ ಯಲ್ಲಿ ೧೯೮೮ ರಲ್ಲಿ ಬಸವಪುರಾಣ ಬಹಳ ವಿಜೃಂಭಣೆಯಿಂದ ನಡೆಯಿತು. ಈ ಮಹಾಕಾರ್ಯದಲ್ಲಿ ನಾನು ಸೇವೆ ಸಲ್ಲಿಸಿದೆ, ಅದೂ ಸಂಕಲ್ಪರಹಿತವಾಗಿ. ಆದರೆ ಅದರಿಂದ ನನಗೆ ದೊರೆತ ಪ್ರತಿಫಲ ಬಹಳ ಅಮೂಲ್ಯವಾದುದು. ನನಗೊಬ್ಬ ಅಣ್ಣ ದೊರೆತದ್ದು ಭಾಗ್ಯದ ಸಂಗತಿಯೇ ಆಗಿದೆ. ಮಹಾಭಾರತದ ದ್ರೌಪದಿಗೆ ಅಣ್ಣನಾದ ಶ್ರೀ ಕೃಷ್ಣ, ಮುಕ್ತಾಯಕ್ಕನ ಅಣ್ಣ ಅಜಗಣ್ಣ ಇವರಿಗೇನೂ ನನ್ನಣ್ಣ ದಾನಪ್ಪ ಜತ್ತಿ ಕಡಿಮೆ ಅಲ್ಲ ಎಂದು ಒತ್ತಿ ಹೇಳಬಲ್ಲೆ.

ಸಾಮಾನ್ಯವಾಗಿ ಒಬ್ಬ ವ್ಯಕ್ತಿ ಒಂದು ರಂಗದಲ್ಲಿ ಪರಿಣತೆ, ಪಾಂಡಿತ್ಯವನ್ನು ಸಾಧಿಸಬಹುದು. ಹಲವು ಹದಿನಾರು ಕ್ಷೇತ್ರಗಳಲ್ಲಿಯೂ ಕರಗಳನ್ನು ಚಾಚಿ ಕರಗತ ಮಾಡಿಕೊಂಡಿರುವ ಮಹಾನ್ ಚೇತನ ಒಂದು ವ್ಯಕ್ತಿಯಾಗಿ ಗುರುತಿಸಲ್ಪಟ್ಟರೆ ಅದು ತಪ್ಪಾದೀತು. ಬದಲಾಗಿ ಅಂದೊಂದು ದಿವ್ಯಶಕ್ತಿ. ಸ್ವರ್ಗದ ಒಂದು ತುಣುಕು ಕೈಜಾರಿ ಭೂಮಿಗೆ ಬಿದ್ದಂಥ ಚಮತ್ಕೃತಿಯೆ ಸರಿ. ಹೆತ್ತೊಡಲಿನ ಪುಣ್ಯ ವಿಶೇಷ.

ಅನುಭವ ಮಂಟಪವನ್ನು ಮೀರಿಸುವಂತೆ ಅಲಂಕೃತಗೊಂಡ ಭವ್ಯಮಂಟಪ, ಎತ್ತರವಾದ ಪೀಠ. ಸಾಲಾಗಿ ಕುಳಿತ ಶ್ರೀಗಳ ವೃಂದ. ಮಧ್ಯದಲ್ಲಿ ವೀಣೆಯನ್ನು ಮೀಂಟುತ್ತಾ,

> "ಶ್ರೀ ಮದಮಲಜ್ಞಾನ ಭಕ್ತಿಪ್ರೇಮ ವೇದ ಪುರಾಣಶಾಸ್ತ್ರ ಸ್ತೋಮ
> ನುತನತ ಚಾರು ಚರಣಾಂಭೋಜ............"

ರಾಗಬದ್ಧವಾಗಿ ಪ್ರಾರ್ಥನೆಯನ್ನು ಆರಂಭಿಸಿ, ಮೆಟ್ಟಲು ಮೆಟ್ಟಲಾಗಿ ಶರಣರ ಯುಗಕ್ಕೆ ಶ್ರಾವಕರನ್ನು ಕೊಂಡೊಯ್ಯುವ ದಾನಪ್ಪ ಜತ್ತಿಯವರ ಧೀಮಂತ ವ್ಯಕ್ತಿತ್ವದಿಂದ ಆ ಪೀಠಕ್ಕೆ ಒಂದು ಮೆರಗು – ಮೈಯೆಲ್ಲ ಕಿವಿಯಾಗಿರಿಸಿ ಕಣ್ತುಂಬ ಆ ದಿವ್ಯ ಮೂರ್ತಿಯನ್ನು ತುಂಬಿಕೊಂಡು ಧನ್ಯತೆಯ ತೃಪ್ತಭಾವವನ್ನು ಮುಖದಲ್ಲಿ ಚಿಮ್ಮುವ ಶ್ರಾವಕರು ಬೆಲ್ಲದ ಪೆಂಟೆಗಳನ್ನು ಸಾಲಾಗಿ ಜೋಡಿಸಿದಂತೆ ಅಲುಗಾಡದೆ ಕುಳಿತ ಹತ್ತು ಸಾವಿರಕ್ಕೂ ಹೆಚ್ಚಿನ ಜನಸ್ತೋಮ. ಇದನ್ನು ಕಂಡವರಿಗೆ ಚಿಕ್ಯಾಗೋ ಪಟ್ಟಣದಲ್ಲಿ ನಡೆದ ಸರ್ವಧರ್ಮ ಸಮ್ಮೇಳನದಲ್ಲಿ ಹಿಂದೂ ಧರ್ಮದ ಪ್ರತಿನಿಧಿಯಾಗಿ

ಭಾಗವಹಿಸಿದಾಗ ಜಗತ್ತಿಗೆ ನಾನಾ ಮೂಲೆಗಳ ಜನರನ್ನು ತಮ್ಮ ಪ್ರತಿಭೆಯ ಪರಿಧಿಯಲ್ಲಿ ಸೆರೆಹಿಡಿದ ಸ್ವಾಮಿ ವಿವೇಕಾನಂದರ ನೆನಪಾಗುವುದು.

ಇದು ಬಸವ ಪುರಾಣದಲ್ಲಿ ನಾವು ಅನುಭವಿಸಿದ ನಿತ್ಯ ದರ್ಶನ ಭಾಗ್ಯವಾಗಿತ್ತು. ಮೇಲಿನ ಜನಸ್ತೋಮವನ್ನು ನಿಯಂತ್ರಿಸಲು ನಿಯೋಜಿಸಲ್ಪಟ್ಟ ಸ್ವಯಂ ಸೇವಕರಲ್ಲಿ ನಾನೊಬ್ಬಳು. ಆರಂಭದಲ್ಲಿ ಜತ್ತಿಯವರು ಎಲ್ಲರಂತೆ ನನಗೂ ಪರಿಚಿತರು ಮಾತ್ರ ಆಗಿದ್ದರು.

ಗಂಗೋತ್ರಿಯಲ್ಲಿ ಗಂಗೆ, ಮಹಾಬಳೇಶ್ವರದಲ್ಲಿ ಕೃಷ್ಣೆಯರು ಉಗಮಿಸಿದಂತೆ, ನಯ-ವಿನಯ ಎಂಬುದು ಜತ್ತಿಯವರ ಪವಿತ್ರ ಹೃದಯದಲ್ಲಿಯೇ ಹುಟ್ಟಿದೆ ಏನೋ ಎನ್ನುವಷ್ಟು ಅವರಲ್ಲಿ ಪರಿಪೂರ್ಣವಾಗಿದೆ. ಎಂದೂ ಮಾಸದ ಮುಗ್ಧನಗು ಸಾತ್ವಿಕತೆಯನ್ನು ಭಟ್ಟಿ ಇಳಿಸಿದ ಗಟ್ಟಿಯಂತೆ ನೆಲೆಸಿದೆ. ನಯ-ವಿನಯಗಳಿಂದ ಕೂಡಿದ ಹಿತವನ್ನೀವ ಮಿತವಾದ ಮಾತು. ಯಾರೂ ದಾನಪ್ಪ ಜತ್ತಿ ನನಗೆ ಪರಿಚಿತರು ಎಂದು ಹೇಳುವ ಮಟ್ಟದಲ್ಲಿ ಇಟ್ಟಿಲ್ಲ. ಜತ್ತಿಯವರನ್ನು ಬಲ್ಲವರೆಲ್ಲ ಅವರ ಆತ್ಮೀಯರೇ. "ಓ! ಜತ್ತಿಯವರೆ! ನಮ್ಮವರು" ಎಂದು ಹೇಳಲು ಸಂಭ್ರಮ ಪಟ್ಟುಕೊಳುತ್ತಾರೆ. ಅಂತೆಯೇ ಧರ್ಮ. ಸಂಸ್ಕೃತಿ. ನಾಡು ಸಹ ಹೆಮ್ಮೆಪಟ್ಟು ಕೊಳ್ಳುವಂತಿದೆ. ಇದಕ್ಕೆ ಕಾರಣ,

"ಇವನಾರವ ಇವನಾರವ ಇವನಾರವ ಎಂದೆನಿಸದಿರಯ್ಯಾ
ಇವ ನಮ್ಮವ ಇವ ನಮ್ಮವ ಇವ ನಮ್ಮವ ಎಂದೆನಿಸಯ್ಯಾ"

ಎಂದು ಹೇಳಿದ ಬಸವ ತತ್ತ್ವವನ್ನು ಅಕ್ಷರಶಃ ಆಚರಣೆಯಲ್ಲಿ ತಂದವರು. ಸ್ನೇಹ ಆತ್ಮೀಯತೆಯನ್ನು ಬಯಸಿ ಬಂದವರನ್ನೆಲ್ಲ ತನ್ನವರೆಂದು ಆದರಿಸುವ ದೊಡ್ಡ ಗುಣವೆ ಇವರ ಈ ಮೇರುಕೀರ್ತಿಗೆ ಕಾರಣವಾಗಿದೆ. ಎನಗಿಂತ ಕಿರಿಯರಿಲ್ಲ; ಶಿವಭಕ್ತರಿಗಿಂತ ಹಿರಿಯರಿಲ್ಲ ಎನ್ನುವ ಕಿಂಕರತ್ವ ಇವರಿಗೆ ಶಂಕರತ್ವವನ್ನು ಕರುಣಿಸಿದೆ.

ಎಲ್ಲಕ್ಕೂ ಮಿಗಿಲಾಗಿ ಇವರು ಗುಣಗ್ರಾಹಿಗಳು – ರಾಜನಿಂದ ಹಿಡಿದು ರಂಕನವರೆಗೆ ಯಾವ ತಾರತಮ್ಯವನ್ನು ಹೊಂದಿದವರಲ್ಲ. ಜಾತಿ-ಮತ-ಅಂತಸ್ತು ಇವು ಯಾವವೂ ಅಡ್ಡಿಯಾಗಿಲ್ಲ. ಅಹಂಕಾರವಂತೂ ಇವರ ಹತ್ತಿರ ತಪ್ಪಿಯೂ ಸುಳಿಯದು.

ಕೇವಲ ಆತ್ಮೀಯ ಮಾತ್ರವಲ್ಲ ಅಷ್ಟೇ ಉದಾತ್ತ, ಉನ್ನತ ಸುಸಂಸ್ಕೃತವುಳ್ಳದ್ದು ಜತ್ತಿಯವರ ಶ್ರೀಮನೆ. ಸಂಸ್ಕಾರದ ಅಗ್ನಿಯ ಲ್ಲಿ ಪುಟಕ್ಕಿಟ್ಟ ಕುಂದಣದಂತೆ ಹೊರ ಹೊಮ್ಮುವ ಭಾಷೆ ನಿಜಕ್ಕೂ ಲಿಂಗ ಮೆಚ್ಚಿ ತಲೆದೂಗುವಂತಿದೆ. ಇಂದಿನ ವಿಜ್ಞಾನ ಯುಗದಲ್ಲಿ ಧಾರ್ಮಿಕ ರಂಗದತ್ತ ಯುವಪೀಳಿಗೆ ದೃಷ್ಟಿ ಹಾಯಿಸುವುದೇ

ಕಷ್ಟವಾಗಿರುವಾಗ ಹತ್ತು ಸಾವಿರಕ್ಕೂ ಮೇಲ್ಪಟ್ಟ ಜನರನ್ನು ಕಟ್ಟಿಹಾಕಿದಂತೆ ಮಾತಿನ ಮೋಡಿಯಿಂದ ಹಿಡಿದಿರುವುದು ಸಣ್ಣ ಕೆಲಸವೇನಲ್ಲ.

ಸಂಜೆ ೬-೩೦ ಕ್ಕೆ ನಮ್ಮೂರಿನ ಎಲ್ಲ ಮನೆಗಳಿಗೂ ಬೀಗ ಬೀಳುತ್ತಿದ್ದವು. ಯಾವ ನೆಂಟರು ಬಂದರೂ ಸಹ ಪುರಾಣ ಮಂಟಪದಲ್ಲಿಯೇ ಭೇಟಿಯಾಗಬೇಕು. ಇಲ್ಲವೆ ಪುರಾಣ ಕಾರ್ಯಕ್ರಮ ಮುಗಿಯುವವರೆಗೆ ಕಾಯಬೇಕಾದ ಪರಿಸ್ಥಿತಿ. ಜನಗಲ್ಲಿ ಅಷ್ಟೊಂದು ಆತುರದ ನಿರೀಕ್ಷೆ ಜತ್ತಿಯವರ ಪುರಾಣದ ಬಗ್ಗೆ. ತುತ್ತೂರಿಯ ನಾದದ ಮೋಡಿಗೆ ಒಳಗಾಗಿ ಊರ ಮಕ್ಕಳೆಲ್ಲ ಕಿನ್ನರ ಜೋಗಿಯ ಬೆನ್ನು ಹತ್ತಿದಂತೆ ಮುದುಕರು - ಮಕ್ಕಳು ಮೊದಲುಗೊಂಡು ಪುರಾಣ ಮಂಟಪ ಸೇರುತ್ತಿದ್ದರು. ನಿಂತು ನೋಡಿದರೆ ಇದು ಜನರ ಗುಂಪಲ್ಲ, ಇದೊಂದು ಜನಸಾಗರ. ಸರ್ವಧರ್ಮ ಗಳ ತಿರುಳನ್ನು ಆಳವಾಗಿ ಅಭ್ಯಸಿಸಿದವರು, ವಿವಿಧ ಭಾಷೆಗಳ ಸಾಹಿತ್ಯವನ್ನು ಅರಗಿಸಿಕೊಂಡ ದಾನಪ್ಪನವರು ಮೇಧಾವಿ ತಿಮ್ಮನನ್ನು ಜೊತೆಗಿರಿಸಿಕೊಂಡು ಸಾಹಿತ್ಯ-ಸಂಗೀತ ತಿಳಿಹಾಸ್ಯದೊಂದಿಗೆ ತತ್ತ್ವಜ್ಞಾನವನ್ನು ಮುದುಕರಿಂದ ಮಕ್ಕಳು, ಅನಕ್ಷರಸ್ಥರಿಗೂ ಮನಮುಟ್ಟಿದಂತೆ ಹೇಳುತ್ತಿದ್ದರೆ ತಾದಾತ್ಮ್ಯಭಾವದಿಂದ ಕೇಳುವ ಜನರಿಗೆ ಮಂಗಲಾರತಿ ಮಾಡುವಾಗ ಇಷ್ಟುಬೇಗ ಮುಗಿಯಿತೆ ಎನ್ನುವ ಬೇಸರ.

ಕೇಳಿದರೆ ಕೇಳಬೇಕು ಪುರಾಣ ಜತ್ತಿಯವರಿಂದ – ಇದು ನನ್ನ ಮಾತಲ್ಲ ಮೂವತ್ತು ವರ್ಷಕ್ಕೂ ಮೇಲೆ ಪ್ರತಿವರ್ಷ ವಿಭಿನ್ನ ಮೇಧಾವಿಗಳಿಂದ ಪುರಾಣ ಆಲಿಸಿದ ನಮ್ಮೂರ ಜನಸಾಮಾನ್ಯರ ಅಭಿಪ್ರಾಯ. ಅರ್ಥಾತ್ ಬುದ್ಧಿಜೀವಿಗಳ ಅನುಭವದ ಮಾತು. ಜನರ ಹೃದಯದಿಂದ ಕೊಡಲ್ಪಟ್ಟ ಪ್ರಮಾಣಪತ್ರ. ಇದಕ್ಕೆ ಸಾಟಿಯಾದ ಪ್ರಮಾಣಪತ್ರ ಬೇರಿಲ್ಲ.

ಆಂಗ್ಲರು ಗಾಂಧೀಜಿಯವರನ್ನು ಬಹುರೂಪಿ ಎಂದು ವರ್ಣಿಸಿದ್ದಾರೆ. ಕಾರಣ ಗಾಂಧೀಜಿ ಕೆಲವರಿಗೆ ಯೋಗಿಯಾಗಿ, ತಪಸ್ವಿಯಾಗಿ; ಕೆಲವರಿಗೆ ಹಟವಾದಿಯಾಗಿ, ಇನ್ನು ಕೆಲವರಿಗೆ ಹಾಸ್ಯಗಾರರಾಗಿ, ಕೆಲವರಿಗೆ ಮಹಾತ್ಮನಾಗಿ, ಕೆಲವರಿಗೆ ಕೇವಲ ಬತ್ತಲೆಯ ಮುದುಕನಾಗಿ ಮತ್ತೆ ಕೆಲವರಿಗೆ ಆತ್ಮೀಯ ಅಜ್ಜನಾಗಿ ಕಂಡರು. ಅಂತೆಯೇ "ಅವರವರ ಭಾವಕ್ಕೆ ಅವರವರ ಭಕುತಿಗೆ" ಎಂಬಂತೆ, ಆತ್ಮೀಯತೆಯ ಒಡನಾಟದಲ್ಲಿ ನಾನು ದಾನಪ್ಪನವರ ತಂಗಿಯಾಗಿ ಗುರುತಿಸಲ್ಪಟ್ಟೆ. ಆದುದರಿಂದ ಅವರ ವಿಭಿನ್ನ ರಂಗಗಳಾದ ಸಾಹಿತ್ಯ, ಸಂಗೀತ ಕಲೆ, ಪುರಾಣ, ಕೀರ್ತನ ಇತ್ಯಾದಿ ರಂಗಗಳಿಗಿಂತ ತಂಗಿಯಾಗಿ ಹೆಚ್ಚಿಗೆ ಸ್ಪಂದಿಸಬಯಸುವೆ. ಯಾಕೆಂದರೆ ಜತ್ತಿಯವರು ಪ್ರವೇಶಿಸದ ರಂಗವೇ ಇಲ್ಲ. ಇವರ ಪ್ರತಿಭೆ ಆಕಾಶವಾಣಿ, ಚಲನಚಿತ್ರಗಳಿಗೂ ಸುಳಿದಿದೆ. ಅವರ ಆಯಾ ರಂಗದ ಅಭಿಮಾನಿಗಳು, ಸ್ನೇಹಿಗಳು, ಒಡನಾಡಿಗಳು ಅವರ ವ್ಯಕ್ತಿತ್ವದ ವಿಭಿನ್ನ ಮುಖಗಳನ್ನು ಅವರವರು ಕಂಡಂತೆ ಮೂಡಿಸುತ್ತಾರೆ.

ನಾನು ನನ್ನದಾದ ಸ್ಥಾನವನ್ನು ಬಿಟ್ಟುಕೊಡದೆ ತಂಗಿಯಾಗಿ ನನ್ನ ಅನುಭವವನ್ನು ಹಂಚಿಕೊಳ್ಳುವೆ.

ಇಂದಿಗೆ ನಾಲ್ಕು ವರ್ಷಗಳು ಸಂದರೂ ಅಣ್ಣನವರ ನೆನಪು ಇಲ್ಲಿಯ ಜನಮನದಲ್ಲಿ ಇನ್ನೂ ಹಸಿಹಸಿಯಾಗಿದೆ. "ದಾನಪ್ಪಣ್ಣ ಜತ್ತಿ ಈಗ ಎಲ್ಲಿ ಇದಾರ್ರಿ ಸುಮಕ್ಕಾ" ಎಂದು ಪರಿಜನ ಬಂಧುಗಳು ಇಂದಿಗೂ ಕೇಳುತ್ತಾರೆ. 'ಬೇಡ' ಮಹರ್ಷಿಯಾಗಿ ಪರಿವರ್ತಿತಗೊಂಡ ಘಟನೆಗಿಂತಲೂ ಇದು ಮಿಗಿಲು. ಎಲ್ಲರಿಂದಲೂ ಅಣ್ಣ ಎಂದು ಬಾಯಿತುಂಬ, ಹೃದಯತುಂಬ ಕರೆಯಿಸಿಕೊಳ್ಳುವದು ಸಾಮಾನ್ಯವಲ್ಲ. ಈಗಲೂ ಅವರ ಕೀರ್ತನೆಗಳ ಕ್ಯಾಸೆಟ್ ಹಾಕಿ ಕೇಳುತ್ತಾರೆ. ರೇಡಿಯೋದಲ್ಲಿ ಬಿತ್ತರಿಸುವಂತಿದ್ದರೆ ಊರಲ್ಲಿ ಅಲ್ಲಲ್ಲಿ ಗುಂಪು ಕೂಡಿ ಕಾಯುತ್ತಾರೆ.

"ಜೀವಿ ಜೀವಿಗಳಿಗುಂಟು ಜನ್ಮಜನ್ಮದಾ ನಂಟು" ಎಂಬಂತೆ, ನಮ್ಮ ಬಾಂಧವ್ಯ ಇಂದು ಬಹಳೇ ಗಟ್ಟಿಗೊಂಡಿದೆ. ನನ್ನ ಎಲ್ಲ ಅಳಲು, ಆನಂದ, ಅನಿಸಿಕೆಗಳನ್ನು ಅಣ್ಣನವರಲ್ಲಿ ನಿವೇದಿಸಿಕೊಂಡು ಹಂಚಿಕೊಳ್ಳಬಲ್ಲೆ. ಎಲ್ಲಿಯೇ ಇದ್ದರೂ ಎಂಥ ಕಾರ್ಯಬಾಹುಲ್ಯವಿದ್ದರೂ ತಂಗಿಯನ್ನು ಮನಃಪಟಲದಿಂದ ದೂರಸರಿಸಿದವರಲ್ಲ. ಕೆಲವು ದಿನಗಳ ಹಿಂದೆ ನನಗೆ ವೃತ್ತಿ ತರಬೇತಿಗೆ (ಧರ್ಮಸ್ಥಳ) ಹೋಗಲೇಬೇಕಾದ ಅನಿವಾರ್ಯ ಪ್ರಸಂಗ ಬಂದಿತು. ಒಂದಿನವೂ ಅಗಲಿರದ ತಾಯಿ ಮಾನಸಿಕವಾಗಿ ಬಹಳೆ ತತ್ತರಿಸಿದಾಗ ನನಗೆ ಸರಕಾರಿ ಚಾಕರಿಯನ್ನು ಬಿಡಲೇ ಎನಿಸದಿರಲಿಲ್ಲ. ಅಂಥ ಪ್ರಸಂಗದಲ್ಲಿ ಅವ್ವನಿಗೆ ಮೇಲಿಂದ ಮೇಲೆ ಪತ್ರ ಬರೆದು ಧೈರ್ಯ ತುಂಬಿದರು. ಇಲ್ಲಿಯ ಯೋಗಕ್ಷೇಮವನ್ನು ನನಗೂ ತಿಳಿಸುತ್ತ ತರಬೇತಿಯನ್ನು ಯಶಸ್ವಿಯಾಗಿ ಮುಗಿಸಿಕೊಂಡು ಬರುವಂತೆ ಮನೋಬಲವನ್ನು ನನಗಿತ್ತರು.

ಬದುಕನ್ನು ಎರಡು ಬಗೆಯಾಗಿ ವಿಂಗಡಿಸುತ್ತಾರೆ. ಒಂದು ಸಾರ್ಥಕ ಬದುಕು ಇನ್ನೊಂದು ಸ್ವಾರ್ಥಕ ಬದುಕು. ಎಲ್ಲರ ಬದುಕು ಸಾರ್ಥಕವಾದುದಲ್ಲ. ಅದು ಕೆಲವರ ಬದುಕು ಮಾತ್ರ. ಅವರು ನಡೆವಲ್ಲಿ, ನುಡಿವಲ್ಲಿ, ನಿಂತಲ್ಲಿ ಅನುಕರಣೀಯವಾದ ಗುರುತು ಮೂಡಿರುತ್ತದೆ. ಸ್ವಾರ್ಥಕ ಬದುಕು ಸಾಮಾನ್ಯರ ಬದುಕು, ಅಂಥವರ ಬದುಕಿನ ಗುರುತು ಉಳಿಯದು. ನೀರಲ್ಲಿ ಬರೆದ ಗೆರೆಯಂತೆ ಅವರ ಹಿಂದೆಯೇ ಮುಚ್ಚುತ್ತ ಹೋಗುವುದು. ಸಮಾಜಕ್ಕಾಗಿ, ನಾಡಿಗಾಗಿ, ಧರ್ಮಕ್ಕಾಗಿ, ಕಲೆಗಾಗಿ, ಅಣ್ಣಾ ಬದುಕುತ್ತಿರುವಾಗ ಪ್ರತಿ ಕ್ಷಣವೂ ಸಾರ್ಥಕ ಬದುಕಾಗಿದೆ. ಪುಟಿಯುತ್ತಿರುವ ಚೇತನದ ಚಿಲುಮೆಯಾದ ಅಣ್ಣಾ ಇಂಥ ಆರೋಗ್ಯದಿಂದ ಕೂಡಿದ ಶತಮಾನದ ಸಾರ್ಥಕ ಬದುಕನ್ನು ಬದುಕಲಿ.

# ಕಲಾಕುವರ ದಾನಪ್ಪ ಜತ್ತಿ

**ಡಾ. ಎಂ. ಎನ್. ವಾಲಿ**

"ವ್ಯಕ್ತಿ ಇತಿಹಾಸವನ್ನು ಸೃಷ್ಟಿದರೆ ಇತಿಹಾಸ ವ್ಯಕ್ತಿಯನ್ನು ನಿರ್ಮಿಸುತ್ತದೆ" ಎಂದು ಬಲ್ಲವರು ಹೇಳುವದುಂಟು. ವ್ಯಕ್ತಿ ಶಕ್ತಿಯಾಗಿ ನಿಲ್ಲಲು ಜೀವನ ಹಂಬಲ ಬೇಕು. ಮತ್ತು ದೇವನ ಕರುಣೆಬೇಕು. ವ್ಯಕ್ತಿ ಶಕ್ತಿಯಾದಾಗ ಆತ್ಮಕಲ್ಯಾಣ ಮತ್ತು ಸಮಾಜ ಕಲ್ಯಾಣಗಳನ್ನು ಏಕಕಾಲದಲ್ಲಿ ಸಾಧಿಸಿ ಆತ ಸರ್ವರ ಪ್ರಶಂಸೆಗೆ ಪಾತ್ರನಾಗುತ್ತಾನೆ. ಅವನ ಸಾಧನೆ ಸಾಮಾನ್ಯರಿಗೆ ಅಚ್ಚರಿಯನ್ನುಂಟು ಮಾಡುತ್ತದೆ. ಅಂತಹ ಸಾಧನೆಗೈದು ಸಿದ್ಧಿಪಡೆದ ವಿರಳರ ಪಂಕ್ತಿಯಲ್ಲಿ ಶ್ರೀ ದಾನಪ್ಪ ಜತ್ತಿ ಅವರೂ ಒಬ್ಬರೆಂಬುದು ಸತ್ಯಸಂಗತಿ.

ವಿಜಾಪೂರ ಜಿಲ್ಲೆ ಹಲವು ವೈಶಿಷ್ಟ್ಯಗಳಿಂದ ಕೂಡಿದೆ. ಇದು ಶರಣರ ನಾಡು. ಬಡತನಕ್ಕೆ ಹೆಸರಾದಂತೆ. ಸಾಹಿತ್ಯ–ಕಲೆ–ಸಂಸ್ಕೃತಿಗಳ ಸಿರಿವಂತಿಕೆಗೂ ಹೆಸರಾಗಿದೆ. ವಿಜಾಪುರ ಪಟ್ಟಣದ ನೆರೆಯ ತಿಕೋಟಾದಲ್ಲಿ ಜತ್ತಿ ಎಂಬುದೊಂದು ವೀರಶೈವ ಮನೆತನವಿದೆ. ಈ ಕುಟುಂಬದ ಸಿದ್ರಾಮಪ್ಪ–ದೊಡ್ಡಮ್ಮ ದಂಪತಿಗಳು ಸುಶೀಲ ಸಂಪನ್ನರಾಗಿದ್ದರು. ಇವರ ಪುಣ್ಯವೇ ಹಣ್ಣಾಗಿ ಬಂದಂತೆ ಈ ದಂಪತಿಗಳ ಪುಣ್ಯೋದರದಿಂದ ದಿನಾಂಕ ೩೧–೮–೧೯೩೮ ರಂದು ಜನಿಸಿದ ಗಂಡುಮಗುವೇ ಈಗ ಪ್ರವಚನ ಪ್ರವೀಣ ದಾನಪ್ಪ ಜತ್ತಿ ಶಾಸ್ತ್ರಿ ಎಂಬ ಹೆಸರಿನಿಂದ ಬೆಳಗುತ್ತಿದೆ. ಬಾಲಕ ಆರು ವರ್ಷದವನಾಗುತ್ತಲೇ ಊರಿನ ಕನ್ನಡ ಪ್ರಾಥಮಿಕ ಶಾಲೆಗೆ ಸೇರಿ ೭ನೇ ಇಯತ್ತೆಯವರೆಗೆ ಓದುತ್ತಲೇ ಶಿಕ್ಷಣ ಕಾರಣಾಂತರಗಳಿಂದ ನಿಂತು ಹೋಯಿತು.

ಶ್ರೀ ದಾನಪ್ಪನವರದು ಚುರುಕು ಬುದ್ಧಿ. ಏಕಪಾಠಿಯಂತೆ ಒಮ್ಮೆ ಹೇಳಿದುದು ಅವರಿಗೆ ಕರಗತ. ಮಗುವಾಗಿರುವಾಗಲೇ ಹತ್ತು ಹಲವು ಚಟುವಟಿಕೆ ಗಳಲ್ಲಿ ಆಸಕ್ತಿ. ಆ ಕಾಲಕ್ಕೆ ಊರಿನ ಹಾಗೂ ಸುತ್ತಲಿನ ಊರುಗಳಲ್ಲಿ ಜರುಗುವ ನಾಟಕ, ಬಯಲಾಟಗಳನ್ನು ತಪ್ಪದೇ ನೋಡುತ್ತಿದ್ದ. ಅಲ್ಲಲ್ಲಿ ನಡೆಯುವ ಭಜನಾ ಮೇಳಗಳಲ್ಲಿ ಸೇರಿ ಹಾಡುವ ಹಾಗೂ ವಾದ್ಯ ನುಡಿಸುವ ಹಂಬಲವಿತ್ತು. ಹೀಗಾಗಿ ಕಲಾರಾಧನೆ ಅವರಲ್ಲಿ ಬಾಲ್ಯದಿಂದಲೇ ಹಾಸು ಹೊಕ್ಕಾಗಿ ಬಂತು. ಮುಂದೊಂದು ದಿನ ಇವರು ಕಲಾಪ್ರವೀಣರಾಗುತ್ತಾರೆಂಬ ಹಲವರ ಊಹೆ ಹುಸಿಯಾಗಲಿಲ್ಲ.

ಶ್ರೀ ದಾನಪ್ಪ ಜತ್ತಿ ಅವರು ಬಯಲಾಟ, ಶ್ರೀಕೃಷ್ಣ ಪಾರಿಜಾತ, ನಾಟಕ ಹಾಗೂ ಬಾನುಲಿ ನಾಟಕಗಳಲ್ಲಿ ಪಾತ್ರವಹಿಸಿ ತಮ್ಮ ಕಲೆಯಿಂದ ಜನಮೆಚ್ಚುಗೆ ಗಳಿಸಿದರು. ತಮ್ಮೂರಿನ ಯುವಕರನ್ನು ಕಲೆಹಾಕಿ 'ಅರುಣೋದಯ ನಾಟ್ಯ

ಸಂಘ' ಎಂಬ ಹೆಸರಿನ ಸಂಘವನ್ನು ಕಟ್ಟಿ ಅದರ ನಿರ್ದೇಶಕರಾದರು. ಪತ್ತೆಂಟು ವರ್ಷಕಾಲ ಧಾರವಾಡ ಆಕಾಶವಾಣಿ ಕೇಂದ್ರದ ನಾಟಕ ವಿಭಾಗವಲ್ಲಿ ನಟರಾಗಿ ಸೇವೆ ಸಲ್ಲಿಸಿದರು. ೧೯೭೭ರಲ್ಲಿ ತೆರೆಕಂಡ 'ಭಾರತರತ್ನ' ಎಂಬ ಕನ್ನಡ ಚಲನಚಿತ್ರದಲ್ಲಿ ಒಂದು ಚಿಕ್ಕ ಪಾತ್ರದಲ್ಲಿಯೂ ಕಾಣಿಸಿಕೊಂಡ ಹೆಗ್ಗಳಿಕೆ ಇವರದಾಗಿದೆ.

ಸಮಾಜಸೇವೆ ಶ್ರೀ ದಾನಪ್ಪನವರ ಜೀವನದ ಉಸಿರು. ವಿವಿಧ ಸಂಘ. ಸಂಸ್ಥೆಗಳಲ್ಲಿ ಅವರು ಸಕ್ರೀಯವಾಗಿ ಸೇವೆ ಸಲ್ಲಿಸಿದ್ದಾರೆ. ತಿಕೋಟಾದ ಟೌನ ಪಂಚಾಯತ ಚೇಅರಮನ್ನರಾಗಿ ಕ್ರಿ.ಶ. ೧೯೭೧ ರಿಂದ ೧೯೭೭ ರವರೆಗೆ ಕಾರ್ಯ ಮಾಡಿದ್ದಾರೆ. ಇದೇ ಅವಧಿಯಲ್ಲಿ ಅಂದರೆ ೧೯೭೧ ರಿಂದ ೧೯೭೮ ರವರೆಗೆ ತಿಕೋಟಾದ ಸಾರ್ವಜನಿಕ ಗ್ರಂಥಾಲಯದ ಚೇಅರಮನ್ನರಾಗಿ ಶ್ರಮಿಸಿ ಅದು ಕೇಂದ್ರ ಗ್ರಂಥಾಲಯವಾಗುವಂತೆ ಮಾಡಿದ್ದಾರೆ.

ಕ್ರಿ.ಶ. ೧೯೭೭ರಲ್ಲಿ ಶ್ರೀಯುತರ ಜೀವನದಲ್ಲಿ ಒಂದು ಹೊಸ ತಿರುವು ಬಂದಂತೆ ಕಾಣುತ್ತದೆ. ಖ್ಯಾತ ಸಾಹಿತಿಗಳೂ, ಸಂಶೋಧಕರೂ, ವೀರಶೈವ ಪ್ರಾಚೀನ ನಿಡುಮಾಮಿಡಿ ಪೀಠದ ಜಗದ್ಗುರುಗಳೂ ಆದ ಪರಮಪೂಜ್ಯ ಡಾ. ಜ.ಚ.ನಿ. ಅವರಿಂದ ವಿಧ್ಯುಕ್ತವಾಗಿ ಶ್ರೀ ದಾನಪ್ಪನವರು ಲಿಂಗಸಂಸ್ಕಾರ ದೀಕ್ಷೆ ಪಡೆದರು. ಅನಂತರ ಅವರು ಧಾರ್ಮಿಕ ರಂಗವಲ್ಲಿ ಧುಮುಕಿ ಹಲವು ವಿಧದಲ್ಲಿ ಸೇವೆ ಮಾಡುತ್ತಿದ್ದಾರೆ. ವಿಶೇಷವಾಗಿ ಪುರಾಣ, ಪ್ರವಚನ, ಕೀರ್ತನೆಗಳಿಗೆ ತಮ್ಮ ಜೀವನವನ್ನು ಮುಡಿಪಾಗಿಟ್ಟು ಅದನ್ನೇ ಕಾಯಕವಾಗಿಸಿಕೊಂಡಿದ್ದಾರೆ. ಅನೇಕ ಊರುಗಳ ಮಠಮಾನ್ಯಗಳಲ್ಲಿ ಅವರು ತಿಂಗಳುಗಟ್ಟಲೆ ಪುರಾಣ, ಪ್ರವಚನ ಕಾರ್ಯ ಕೈಕೊಂಡು ಜನರಲ್ಲಿ ಧಾರ್ಮಿಕ ಜಾಗೃತಿ ಮಾಡಿದ್ದಾರೆ. ಮತ್ತು ನೈತಿಕತೆಯತ್ತ ಮುನ್ನಡೆಸಿದ್ದಾರೆ.

ಅವರದು ಸಾದಾ ವೇಷಭೂಷಣ. ಕೆಳಗೆ ಧೋತರ, ಮೇಲೊಂದು ಶರ್ಟು, ಹೆಗಲಮೇಲೆ ಒಂದು ಶಲ್ಲೆ. ಕೊರಳಲ್ಲಿ ರುದ್ರಾಕ್ಷಿ ಮಾಲೆ, ಹಣೆಯಲ್ಲಿ ಎದ್ದು ಕಾಣುವ ವಿಭೂತಿಯ ಮೂರು ಬೆರಳುಗಳು. ಸದಾ ನಗುಮುಖ, ಗೌರವ ಸೂಚಿಸುವ ಮುಖ ಮುದ್ರೆ. ಮಾತು ಹಿತಮಿತ, ಕೆಲವೊಮ್ಮೆ ಚಾಟಿಯೇಟಿನಂತೆ ನೇರ. ಅದಕ್ಕೆ ಹಾಸ್ಯದ ಲೇಪನವಿರುವದರಿಂದ ನಿರೀಕ್ಷಿತ ಫಲ ನಿಶ್ಚಿತ. ಒಟ್ಟಿನಲ್ಲಿ ಲಿಂಗ ಮೆಚ್ಚಿ ಅಹುದಹುದೆನ್ನುವ ಮಾತು. ಪುರಾಣ – ಪ್ರವಚನಗಳಲ್ಲಿ ಇವರು ಉದ್ಧರಿಸುವ ಹಳಗನ್ನಡ, ನಡುಗನ್ನಡ, ಹೊಸಗನ್ನಡ ಕಾವ್ಯದ ಭಾಗಗಳನ್ನು ಕಂಡಾಗ ಇಂದಿನ ಸ್ನಾತಕೋತ್ತರ ಪದವೀಧರರೂ ನಾಚಬೇಕು. ಇದೆಲ್ಲದರ ಹಿಂದೆ ಸಾಧನೆಯಿದೆ, ಶ್ರಮವಿದೆ ಎಂಬುದು ಇಲ್ಲಿ ಗಮನಿಸಬೇಕಾದ ಅಂಶ. ಶ್ರೀ ದಾನಪ್ಪ ನವರು ಪುರಾಣ – ಪ್ರವಚನಗಳ ಮೂಲಕ ಧರ್ಮ, ಸಾಹಿತ್ಯ, ಸಂಸ್ಕೃತಿಗಳ ಪರಿಚಯ ಮಾಡಿಸುತ್ತಾರೆ. ಭಾಷೈಕ್ಯತೆ, ರಾಷ್ಟ್ರಭಕ್ತಿಯನ್ನು ಬಿಂಬಿಸುತ್ತಾರೆ.

ಆಯಾ ಸಂದರ್ಭಕ್ಕೆ ತಕ್ಕಂತೆ ಅಭಿನಯವನ್ನು ಅಳವಡಿಸಿಕೊಂಡು ಎಲ್ಲರಿಗೂ ಅಚ್ಚರಿಗೊಳಿಸುತ್ತಾರೆ.

ಶ್ರೀ ಜತ್ತಿಯವರ ಇನ್ನೊಂದು ಪ್ರಮುಖ ಕಲಾಸೇವೆಯೆಂದರೆ ಅವರು ಕೀರ್ತನಕಾರರಾಗಿ ಶ್ರಮಿಸುತ್ತಿರುವದು. ತಿರುನೀಲಕಂಠ, ಅಕ್ಕಮಹಾದೇವಿ, ಅಣ್ಣ ಬಸವಣ್ಣ, ಕೋಳೂರು ಕೊಡಗೂಸು, ನೆಲ್ಲೂರ ನಿಂಬೆಕ್ಕ, ಹರಳಯ್ಯ, ಮಧುವರಸ, ಸಂತ ನಾಮದೇವ ಹೀಗೆ ಹಲವಾರು ಶರಣರ – ಸಂತರ ಸನ್ನಿವೇಶ ಗಳನ್ನು ಕುರಿತು ಅವರು ಕೀರ್ತನೆ ಮಾಡುತ್ತಾರೆ. ಅಲ್ಲಲ್ಲಿ ಬರುವ ಶೃಂಗಾರ, ಹಾಸ್ಯ, ಕರುಣ, ಅದ್ಭುತ ರಸಗಳಿಗನುಗುಣವಾಗಿ ಹಾವ – ಭಾವ ಮಾಡುತ್ತ ಕಥೆ ಮುಂದುವರಿಸಿದರೆ ಅಬಾಲ ವೃದ್ಧರೂ ತಲೆದೂಗುತ್ತಾರೆ. ಸಮಯ ಗತಿಸಿದ ಪರಿವೆಯೇ ಯಾರಿಗೂ ಉಂಟಾಗದು. ಇದು ಅವರ ಕಲಾ ನೈಪುಣ್ಯಕ್ಕೆ ಸಾಕ್ಷಿ. ಅವರ ಕಲಾ ಸೇವೆಗೆ ಪ್ರತಿಯಾಗಿ – ಅವರಿಗೆ ವಚನ ರಚನಾ ಚತುರ, ಕಲಾರಾಧಕ, ಪ್ರವಚನ ಕಲಾಪ್ರವೀಣ, ಕೀರ್ತನ ಕೇಸರಿ, ಕನ್ನಡ ಕಲಾಕುವರ – ಮೊದಲಾದ ಬಿರುದುಗಳೂ, ಸತ್ಕಾರ ಸಮಾರಂಭದೊಡನೆ ಪ್ರಶಸ್ತಿಗಳೂ ಬಂದಿವೆ. ಬಾನುಲಿ ಕೇಂದ್ರದಿಂದ ಅವರ ಕೀರ್ತನೆಗಳು ಪ್ರಸಾರಗೊಳ್ಳುತ್ತಲಿವೆ.

ಶ್ರೀ ದಾನಪ್ಪ ಜತ್ತಿ ಅವರು ಸಾಹಿತ್ಯ ಕ್ಷೇತ್ರದಲ್ಲಿಯೂ ಶ್ರಮಿಸಿದ್ದಾರೆ. ಅವರ ಲೇಖನಿಯಿಂದ ಆಗಲೇ ಅಮೌಲ್ಯ ಕಾಣಿಕೆ (ಸಣ್ಣ ಕಥೆಗಳು), ಭಾವ ಸೌರಭ (ಕವನ ಸಂಕಲನ), ವಚನಾಮೃತ (ವಚನ ಸಂಕಲನ), ಬಸವತತ್ತ್ವ ದರ್ಶನ (ಸಂಪಾದನೆ), ಶರಣರು ನಕ್ಕಾಗ (ಉಪನ್ಯಾಸ) ಈ ಕೃತಿಗಳು ಬೆಳಕುಕಂಡಿವೆ. ಅವರು ಚೆನ್ನಾಗಿ ಬರೆಯಬಲ್ಲರೆಂಬುದಕ್ಕೆ ಈ ಗ್ರಂಥಗಳು ಸಾಕ್ಷಿಯಾಗಿವೆ.

ಶ್ರೀಯುತ ಜತ್ತಿಯವರ ಧರ್ಮಪತ್ನಿ ಸೌ. ಶಾಂತಾ – ಆದರ್ಶ ಗೃಹಿಣಿ. ಮನೆತನದ ಹೊಣೆಹೊತ್ತು ಹೆಸರಿಗೆ ತಕ್ಕಂತೆ ಶಾಂತಿಯಿಂದ ಬದುಕಿನ ಜಟಕಾ ಬಂಡಿ ಎಳೆಯುವದರಲ್ಲಿ ಸಹಾಯಹಸ್ತ ನೀಡುತ್ತಿರುವಳು. ಇವರ ಏಕಮಾತ್ರ ಪುತ್ರ ಸೋಮಶೇಖರನೆಂಬವ ಕೃಷಿ ಸಹಾಯಕನಾಗಿ ಸೇವೆಸಲ್ಲಿಸುತ್ತಿದ್ದಾನೆ. ದೊಡ್ಡಮ್ಮ, ಸಿದ್ಧರಾಮ – ಎಂಬಿಬ್ಬರು ಮೊಮ್ಮಕ್ಕಳು ಜತ್ತಿಯವರ ಬಾಳಿಗೆ ಬೆಳಕಾಗಿ ಬಂದಿದ್ದಾರೆ. ಚಿಕ್ಕಸಂಸಾರ – ಚೊಕ್ಕಸಂಸಾರ. ಅದುವೇ ಸುಖೀ ಸಂಸಾರ ಎಂಬುದಕ್ಕೆ ಇವರ ಕುಟುಂಬವೇ ಸಾಕ್ಷಿ.

ಶ್ರೀ ದಾನಪ್ಪನವರಿಗೆ ಈಗ ೫೪ ವರುಷಗಳು. ಅವರ ಹಿತೈಷಿಗಳೆಲ್ಲ ಒಂದಾಗಿ ಮುಂದಾಗಿ ಅವರ ಕುರಿತು ಅಭಿನಂದನಾ ಗ್ರಂಥ ಹೊರತರುವ ಆಲೋಚನೆ ಮಾಡಿರುವದು ಹೆಮ್ಮೆಯ ಸಂಗತಿ. ಈ ಕಾರ್ಯ ಬೇಗನೇ ಫಲಪ್ರದವಾಗಲೆಂಬುದು ನನ್ನ ಬಯಕೆ. ಶ್ರೀ ದಾನಪ್ಪ ಜತ್ತಿ ಅವರಿಗೆ ಶುಭವಾಗಲಿ ಎಂದು ಹೃದಯಾರೆ ಹಾರೈಸುವೆ.

# ನಾನು ಕಂಡಂತೆ ನಮ್ಮ ತಂದೆ

## ಸೋಮಶೇಖರ ದಾ. ಜತ್ತಿ

ಆತ್ಮವಿಶ್ವಾಸ, ದೃಢಸಂಕಲ್ಪ ಮತ್ತು ಸತತ ಪ್ರಯತ್ನಗಳಿದ್ದರೆ ಮನುಷ್ಯ ಏನನ್ನಾದರೂ ಸಾಧಿಸಬಹುದು ಎಂಬುದಕ್ಕೆ ನನ್ನ ತಂದೆಯವರೆ ನಿದರ್ಶನ. ಶ್ರೀಮಂತ ವ್ಯಾಪಾರಸ್ಥರ ಮನೆತನದಲ್ಲಿ ಜನಿಸಿದ ಅವರು ವ್ಯಾಪಾರಸ್ಥರಾಗಿ ಇನ್ನು ಹೆಚ್ಚಿನ ಶ್ರೀಮಂತರಾಗಬಹುದಿತ್ತು. ಆದರೆ ಅವರ ಒಲವು ಕಲೆ, ಸಾಹಿತ್ಯ, ಸಂಗೀತ, ಸಾಮಾಜಿಕ ಮತ್ತು ಧಾರ್ಮಿಕ ರಂಗಗಳತ್ತ ಇರುವದರಿಂದ ತಮ್ಮ ಜೀವನವನ್ನೆ ಕಲೆಗಾಗಿ ಮುಡಿಪಾಗಿಟ್ಟರು. ಕಲೆಯೇ ಅವರ ಜೀವನವಾಯಿತು.

ಏಕಮಾತ್ರ ಪುತ್ರನಾದ ನಾನು ಕಳೆದ ೩೨ ವರುಷಗಳಿಂದ ಅವರ ಒಡನಾಟದಲ್ಲಿ ಕಂಡುಂಡ ಅನುಭವಗಳನ್ನು ತಮ್ಮಲ್ಲಿ ಬಿಚ್ಚು ಮನಸ್ಸಿನಿಂದ ಹೇಳ ಬಯಸುತ್ತೇನೆ.

ಬಾಲ್ಯಾವಸ್ಥೆಯಲ್ಲಿ ತಂದೆಗಿಂತ ತಾಯಿಯ ಮಡಿಲಿನಲ್ಲಿ ಹೆಚ್ಚು ಬೆಳೆದವನು ನಾನು. ಪ್ರಾಥಮಿಕ ಶಾಲೆಯ ಶಿಕ್ಷಣ ಪಡೆಯುತ್ತಿದ್ದಾಗ ತಂದೆಯವರು ಊರಲ್ಲಿ ಹವ್ಯಾಸಿ ಕಲಾವಿದರ ಬಳಗವನ್ನು ಸಂಘಟಿಸಿ ಜಾತ್ರೆ, ಹಬ್ಬ ಮುಂತಾದ ವಿಶೇಷ ದಿನಗಳಲ್ಲಿ ರಂಗ ನಾಟಕಗಳನ್ನು ಏರ್ಪಡಿಸುತ್ತಿದ್ದರು. ಅದರಲ್ಲಿ ನಾಯಕಿಯ ಪಾತ್ರ ಇವರದಾಗಿರುತ್ತಿತ್ತು. ಮಧುರಕಂಠ, ಆಕರ್ಷಕ ಮೈಕಟ್ಟು, ಅಭಿನಯದಲ್ಲಿ ಪ್ರಾವೀಣ್ಯತೆ ಕಂಡ ನಾನು ಮಂತ್ರಮುಗ್ಧನಾಗುತ್ತಿದ್ದೆ. ನಾಟಕದ ದಿನ ರಾತ್ರಿ ಊಟ ಮಾಡದೇ, ನನ್ನ ತಾಯಿಯವರು ಕಂಠ ಮಧುರವಾಗಲು ಜೇಷ್ಠಮಧು, ಬೆಲ್ಲ ಇತ್ಯಾದಿ ಹಾಕಿ ಮಾಡಿಕೊಡುತ್ತಿದ್ದ ಕಷಾಯ ಮಾತ್ರ ಸೇವನೆಮಾಡುತ್ತಿದ್ದರು. ಇವರ ಹಾವ–ಭಾವ ಅಭಿನಯವನ್ನು ಕಂಡ ಅಪರಿಚಿತ ಪ್ರೇಕ್ಷಕರು ನಿಜವಾದ ಸ್ತ್ರೀ ಎಂದು ಭಾವಿಸಿದ್ದುಂಟು. ಅವರ ಹಲವಾರು ನಾಟಕಗಳನ್ನು ನೋಡಿ, ಅನುಭವಿಸಿ ಆನಂದಿಸಿದ್ದೇನೆ. ಅದರಲ್ಲಿ ಬಾಬಾನಗರ (ನಮ್ಮ ಊರಿನಿಂದ ೨ ಕಿ.ಮೀ. ದೂರದಲ್ಲಿದೆ)ದಲ್ಲಿ ನಾಟಕ ಇತ್ತು. ನಾನು ನಾಟಕ ನೋಡಲು ಹೋಗಿದ್ದೆ. ನನ್ನನ್ನು ಪಾತ್ರಧಾರಿಗಳು ಸ್ಟೇಜಿಗೆ ಹೋಗುವ ದಾರಿಯಲ್ಲಿ ಒಂದು ಖುರ್ಚಿ ಹಾಕಿ ಕೂಡ್ರಿಸಿದ್ದರು. ತಂದೆಯವರು ನನ್ನ ಕೈಯಲ್ಲಿ ಕರವಸ್ತ್ರಕೊಟ್ಟು ಪ್ರೇಕ್ಷಕರಿಂದ ಬಂದ ಬಹುಮಾನದ ಹಣವನ್ನು ಅದರಲ್ಲಿಡಲು ಹೇಳಿದ್ದರು. ನಾಟಕ ನೋಡುತ್ತ, ನೋಡುತ್ತ ನಿದ್ರೆ ಮಾಡತೊಡಗಿದ್ದೆ. ಎಷ್ಟು ಬಹುಮಾನ ಬಂತೋ. ನಾಟಕ ಯಾವಾಗ ಮುಗಿಯಿತೋ ಗೊತ್ತಾಗಲ್ಲಿಲ್ಲ. ಬೆಳಗ್ಗೆ ಅವರೇ ನನ್ನನ್ನು ಎಬ್ಬಿಸಿ ಊರಿಗೆ ಕರೆದುಕೊಂಡು ಬಂದರು. ಇನ್ನೊಮ್ಮೆ ಹೊನವಾಡ ಎಂಬ ಗ್ರಾಮದಲ್ಲಿ ನಾಟಕ ನಡೆದಾಗ "ಮಾದರಿ ಮಾನವ" ಎಂಬ ಬಿರುದನ್ನು ಸ್ತ್ರೀ ಪಾತ್ರದಲ್ಲಿದ್ದಾಗ

ಕೊಟ್ಟು ಸತ್ಕರಿಸಿದ್ದರು. ಶ್ರೀಕೃಷ್ಣಪಾರಿಜಾತ ಬೈಲಾಟದಲ್ಲಿ ಗೊಲ್ಲತಿ ಪಾತ್ರ ನಿರ್ವಹಿಸುತ್ತಿದ್ದರು. ಆದರೆ ನನ್ನ ಎಳೆ ವಯಸ್ಸಿಗೆ ಆ ಸಂಗೀತಮಯ ನಾಟಕ ಅರ್ಥವಾಗಲಿಲ್ಲ. ೧೯೭೪ರಲ್ಲಿ ಇವರು ಅಭಿನಯಿಸಿದ "ಭಾರತ ರತ್ನ" ಚಲನಚಿತ್ರ ಬಿಡುಗಡೆಯಾಯಿತು. ನೋಡಿ ಸಂತಸಪಟ್ಟೆ.

ನಾನು ಮಗುವಾಗಿದ್ದಾಗ ವಿಪರೀತ ಕೆಮ್ಮು ಇತ್ತು. ಆರೈಕೆಗಾಗಿ ವಿಜಾಪೂರದಲ್ಲಿ ಸಂಬಂಧಿಕರ ಮನೆಯಲ್ಲಿ ನನ್ನನ್ನಿಟ್ಟು ಆಗಾಗ ಬಂದು ಆಸ್ಪತ್ರೆಯಲ್ಲಿ ಚಿಕಿತ್ಸೆ ಕೊಡಿಸುತ್ತಿದ್ದರು. ನನಗೆ ಎಲ್ಲರನ್ನು ಬಿಟ್ಟು ಇರಲು ಸಾಧ್ಯವಾಗಲಿಲ್ಲ; ಊರಿಗೆ ಮರಳಿ ಬಂದೆ. ಒಮ್ಮೆ ಮಲ್ಲಿಕಾರ್ಜುನ ದೇವಸ್ಥಾನದಲ್ಲಿ ನನ್ನಿಂದ ಬಸವಣ್ಣನವರ ಒಂದು ವಚನ (ಚಕೋರಂಗೆ ಚಂದ್ರಮನ ಆಗಮನದ ಚಿಂತೆ ಎಂಬ ವಚನ) ವಿಶ್ಲೇಷಣೆ ಮಾಡಲು ತಂದೆಯವರು ಹೇಳಿದರು. ತುಂಬಿದ ಸಭೆ ಕಂಡು ಭಯವಾಯಿತು. ಆದರೂ ತಕ್ಕಮಟ್ಟಿಗೆ ಮಾಡಿದೆ. ೫ನೆಯ ತರಗತಿಯಲ್ಲಿದ್ದಾಗ ನನ್ನನ್ನು ಧಾರವಾಡದ ಆಕಾಶವಾಣಿ ಕೇಂದ್ರ ನೋಡಲು ಕರೆದುಕೊಂಡು ಹೋಗಿದ್ದರು. ದಾರಿಯಲ್ಲಿ ಬದಾಮಿಯ ಬನಶಂಕರಿ. ಮೇಣ ಬಸ್ತಿಗಳನ್ನು ನೋಡಿ ಧಾರವಾಡಕ್ಕೆ ಹೋಗಿದ್ದೆವು. ಅಲ್ಲಿ "ನಮ್ಮ ಮಕ್ಕಳು" ಚಲನಚಿತ್ರ ನೋಡಿದ್ದು ಇನ್ನೂ ಹಸಿರಾಗಿದೆ.

ತಿಕೋಟಾದ ಹಿರಿಯರು ತಂದೆಯವರನ್ನು ಟೌನ ಪಂಚಾಯತದ ಚೇರಮನ್ನರನ್ನಾಗಿ ಅವಿರೋಧವಾಗಿ ಆಯ್ಕೆಮಾಡಿದರು. ೭-೮ ವರ್ಷಗಳ ಕಾಲ ನಿಸ್ವಾರ್ಥ ಸೇವೆ ಸಲ್ಲಿಸಿದ ಇವರು ಆಗಷ್ಟ ತಿಂಗಳಲ್ಲಿ ಶ್ರಾವಣ ಮಾಸದ ಪುರಾಣ ಕಾರ್ಯಕ್ರಮಗಳು ಬೇರೆ ಊರಲ್ಲಿ ಇದ್ದರೂ ತಪ್ಪದೇ ೧೫ನೇ ತಾರೀಖು ಊರಿಗೆ ಬಂದು ಸ್ವಾತಂತ್ರ್ಯ ದಿನಾಚರಣೆಯಲ್ಲಿ ಭಾಗವಹಿಸಿ, ತಮ್ಮ ರಾಷ್ಟ್ರೀಯ ಪ್ರಜ್ಞೆ ತೋರುತ್ತಿದ್ದರು. ಯಾವುದೇ ರಾಜಕೀಯ ಪಕ್ಷಕ್ಕೆ ಅಂಟಿಕೊಳ್ಳದೇ ಸಾಮಾಜಿಕ ಕಾರ್ಯಗಳನ್ನು ಮಾಡಿ, ಸ್ವಯಂ ನಿವೃತ್ತಿ ಘೋಷಿಸಿ. ರಾಜೀನಾಮೆಯನ್ನಿತ್ತು ಹೊರ ಬಂದರು. ಬರುವ ಮುನ್ನ ತಿಕೋಟಾದ ಶ್ರೀ ಬಾಲಚಂದ್ರ ವಾಚನಾಲಯವನ್ನು ಕೇಂದ್ರ ಗ್ರಂಥಾಲಯ ಇಲಾಖೆಗೆ ಹಸ್ತಾಂತರ ಮಾಡಿ ಸಾಹಿತ್ಯ. ಸಂಸ್ಕೃತಿ ಪ್ರಿಯರಿಗೆ ಹೆಚ್ಚಿನ ಸೌಲಭ್ಯಗಳು ಲಭ್ಯವಾಗುವಂತೆ ಮಾಡಿದರು.

ನನಗೆ ಜನ್ಮಕೊಟ್ಟ ತಂದೆಯೇ ನನ್ನ ಜೀವನವನ್ನು ಸುಂದರವಾಗಿ ರೂಪಿಸಿಕೊಳ್ಳಲು ಗುರುವಾದರು. ಅವರ ಒಂದೊಂದು ಹಿತೋಕ್ತಿ ನನ್ನ ಬಾಳಿಗೆ ದಾರಿದೀಪಗಳಾಗಿವೆ. ಒಮ್ಮೆ ವಿಜಾಪೂರದ ತಾಂತ್ರಿಕ ತರಬೇತಿ ಕೇಂದ್ರಕ್ಕೆ ಸೇರಲು ಪ್ರಯತ್ನಿಸಿದೆ. ಸಂದರ್ಶನದಲ್ಲಿ ಆಯ್ಕೆಯಾಗಲಿಲ್ಲ, ನಿರಾಶೆಯಾಗಿ ಮರಳಿ ಊರಿಗೆ ಬರದೇ ಸಂಬಂಧಿಕರ ಊರಾದ ಹೋರ್ತಿಗೆ ಹೋಗಿದ್ದೆ. ಅಲ್ಲಿಂದ ಪತ್ರ ಬರೆದು ತಂದೆಯವರಿಗೆ ವಿಷಯ ತಿಳಿಸಿದೆ. ಅವರಿಂದ ಉತ್ತರ ಬಂತು. ಅದರಲ್ಲಿ "ಜಗತ್ತು ಬಹಳ ವಿಶಾಲವಿದೆ. ಇಂದಿನ ಸೋಲು ನಾಳಿನ ಯಶಸ್ಸಿಗೆ ದಾರಿ. ಕಾರಣ ಮನಕ್ಕೆ

ಬೇಸರ ಮಾಡಿಕೊಳ್ಳಬಾರದು" ಎಂದು ಬರೆದಿದ್ದರು. ಅದನ್ನು ಓದಿ ಹೃದಯ ತುಂಬಿ ಬಂತು. ತಕ್ಷಣ ಊರಿಗೆ ಹೊರಟುಬಂದೆ. ಇನ್ನೊಮ್ಮೆ "ಒಬ್ಬ ನನ್ನ ಕಾಲಿಗೆ ಚಪ್ಪಲಿಗಳಿಲ್ಲ" ಎಂದು ಕೊರಗುತ್ತಿದ್ದ. ಎಲ್ಲಿಯವರೆಗೆ ಎಂದರೆ "ಕಾಲಿಲ್ಲದವನನ್ನು ಕಾಣುವವರೆಗೆ" ಎಂದು ಹೇಳಿ, ದೇವರು ನಮಗೆ ಕಾಲುಗಳನ್ನಾದರೂ ಕೊಟ್ಟಿದ್ದಾನೆ ಎಂಬ ಸಂತೃಪ್ತಿಭಾವ ಬೇಕು ಎಂದು ವಿವರಿಸಿದರು. ನನ್ನನ್ನು ಪ್ರೀತಿ ಹುಡುಗರ ಸ್ನೇಹ ಮಾಡಗೊಡಲಿಲ್ಲ. ಮತ್ತೊಂದು ಸಂದರ್ಭದಲ್ಲಿ "ವಯಸ್ಸಿಗೆ ಬಂದ ಮಗ ಸ್ನೇಹಿತನಿದ್ದಂತೆ. ನಾನು ನಿನ್ನನ್ನು ಅದೇ ದೃಷ್ಟಿಯಿಂದ ಕಾಣುತ್ತೇನೆ" ಎಂದು ಹೇಳಿ ತಮ್ಮ ಹೃದಯ ವಿಶಾಲತೆಯನ್ನು ತೋರಿದರು. ನನ್ನ ಸಮಸ್ಯೆಗಳಿಗೆ ಹಲವಾರು ಹಿತನುಡಿಗಳಿಂದ ಪರಿಹಾರ ಸೂಚಿಸಿದರು. ಅವರಲ್ಲಿಯ ಶಿಸ್ತು, ಸಮಯಪ್ರಜ್ಞೆ ಹಾಗೂ ನ್ಯಾಯನಿಷ್ಠುರತೆಗಳು ನನಗೆ ಆದರ್ಶಗಳಾಗಿವೆ.

ಮಾಧ್ಯಮಿಕ ಶಾಲೆಯನ್ನು (೯ನೇ ಇಯತ್ತೆ ಪಾಸಾಗಿ) ಬಿಟ್ಟು ಕಿರಾಣಿ (ಚಿಲ್ಲರೆ) ಅಂಗಡಿಯನ್ನಿಟ್ಟೆ. ಆ ಸಂದರ್ಭದಲ್ಲಿ ತಂದೆಯವರಿಗೆ ಆರೋಗ್ಯ ಸರಿ ಇರಲಿಲ್ಲ. ಆರ್ಥಿಕ ಸ್ಥಿತಿಯು ಉತ್ತಮವಿರಲಿಲ್ಲ. ವಿಜಾಪೂರ ಆಯುರ್ವೇದಿಕ ಆಸ್ಪತ್ರೆಯಲ್ಲಿ ಸೇರಿಸಲು ತಂದೆಯವರ ಸ್ನೇಹಿತರಾದ ಶ್ರೀ ಅಣ್ಣಪ್ಪಗೌಡ್ರು ಪಾಟೀಲ ಹಾಗೂ ತೆಲಸಂಗದ ಮಾಧ್ಯಮಿಕ ಶಾಲೆಯ ಶಿಕ್ಷಕರಾದ ಶ್ರೀ ವೀರಪ್ಪ ಇಂಚಗೇರಿ ಅವರು ಬಹಳ ಸಹಾಯಮಾಡಿದರು. ನನ್ನಲ್ಲಿ ಧೈರ್ಯ ತುಂಬಿದರು. ಒಮ್ಮೆ ಆಸ್ಪತ್ರೆಯಲ್ಲಿದ್ದಾಗಲೇ ಇಂಜಕ್ಷನ್ ರಿಯಾಕ್ಷನ್ ಆಗಿ ವಿಪರೀತ ಚಳಿಜ್ವರ ಪ್ರಾರಂಭವಾಯಿತು. ರಾತ್ರಿಯಾಗಿದ್ದರಿಂದ ಯಾವ ವೈದ್ಯರೂ ದೊರೆಯಲಿಲ್ಲ. ನರ್ಸಗಳು ಆಸ್ಥೆ ವಹಿಸಲಿಲ್ಲ. ನನಗೆ ಏನು ಮಾಡಬೇಕೆಂದು ತೋಚಲಿಲ್ಲ. ಆಗ ತಂದೆಯವರೇ ಎಲ್ಲ ಹೊದಿಕೆಗಳನ್ನು ಹೊಚ್ಚಲು ಹೇಳಿದರು. ಸರಿ ೮–೧೦ ಹೊದಿಕೆಗಳನ್ನು ಹೊಚ್ಚಿದೆ. ನಂತರ ಅವರನ್ನು ಗಟ್ಟಿಯಾಗಿ ಹಿಡಿದುಕೊಂಡು ೫ ನಿಮಿಷ ಕುಳಿತೆ. ಅಷ್ಟರಲ್ಲಿ ಅವರಿಗೆ ಬೆವರು ಬಿಟ್ಟು ಚಳಿಜ್ವರ ಕಡಿಮೆಯಾಯಿತು. ಕೆಲವು ದಿನವಿದ್ದು ಮರಳಿ ಮನೆಗೆ ಬಂದೆವು. ಆ ವೇಳೆಯಲ್ಲಿ ಇಲಕಲ್ಲದ ಶ್ರೀ ವಿಜಯಮಹಾಂತ ಶ್ರೀಗಳು. ಹುಬ್ಬಳ್ಳಿಯ ಜಗದ್ಗುರು ಮಹಾಸನ್ನಿಧಿಗೆ ತಿಳಿಸಿ ಘಟಪ್ರಭೆಯ ಆಸ್ಪತ್ರೆಯಲ್ಲಿರಲು ವ್ಯವಸ್ಥೆ ಮಾಡಿದರು. ನಂತರ ಆರೋಗ್ಯ ಸುಧಾರಿಸಿತು.

ಪುಣೆಯ ಬಿ. ಜಿ. ಶಿರ್ಕೆ ಎಂಬ ಕಂಪನಿಯಿಂದ ನಮ್ಮೂರಿನ ಹುಡುಗರು ವಿದೇಶದಲ್ಲಿ ನೌಕರಿ ಮಾಡಲು ಹೋಗುತ್ತಿದ್ದರು. ನನಗೆ ಆಸಕ್ತಿ ಇರಲಿಲ್ಲ. ಮನೆಯಲ್ಲಿ ತಾಯಿ ಮತ್ತು ಆಯಿ (ಅಜ್ಜಿ) ನನ್ನನ್ನು ಕಳಿಸಲು ನಿರಾಕರಿಸಿದರು. ಆದರೆ ತಂದೆಯವರು "ಅತ್ರ ವಿಶಾಲ ವಿಶ್ವವನ್ನು ತೆರೆದ ಕಂಗಳಿಂದ ನೋಡಿ ಬರಲಿ. ಸಾಮಾನ್ಯಜ್ಞಾನ ಬೆಳೆಯಲಿ. ಸಂಸ್ಕೃತಿ, ಆಚಾರ-ವಿಚಾರಗಳ ಅರಿವು ಬರಲಿ. ಜೊತೆಗೆ

ಸ್ವಾವಲಂಬಿಯಾಗಿ ಬದುಕಲು ಕಲಿಯಲಿ" ಎಂಬ ಹೆಬ್ಬಯಕೆಯಿಂದ ಎಂದೂ ಒಂದು ವಾರಕ್ಕಿಂತ ಹೆಚ್ಚಿಗೆ ತಂದೆ–ತಾಯಿಗಳನ್ನು ಬಿಟ್ಟಿರದ ನನ್ನನ್ನು ಎರಡು ವರ್ಷ ಇರಾಕಕ್ಕೆ ಕಳುಹಿಸಿದರು. ಅಲ್ಲಿದ್ದಾಗ ಪೂಜ್ಯರಾದ ಇಲಕಲ್ಲ, ಹುಬ್ಬಳ್ಳಿ ಹಾಗೂ ಗದುಗಿನ ಶ್ರೀಗಳಿಂದ ಪತ್ರಗಳು ಬಂದಿದ್ದವು. ಪರಂಜ್ಯೋತಿ ಪತ್ರಿಕೆಯನ್ನು ಹುಬ್ಬಳ್ಳಿ ಸನ್ನಿಧಿಯವರು ಕಳಿಸಿದ್ದರು. ಗದುಗಿನ ತೋಂಟದಾರ್ಯ ಶ್ರೀಗಳು "ಹುಲಿ ಎಷ್ಟೇ ಪರಾಕ್ರಮಿಯಾದರೂ ಬೇಟೆಗಳು ತಾವಾಗಿಯೇ ಬಂದುಬೀಳುವದಿಲ್ಲ. ಅದೇ ರೀತಿ ಮನುಷ್ಯನಲ್ಲಿ ಸಾಹಸ ಮನೋಭಾವವಿಲ್ಲದಿದ್ದರೆ ಪ್ರಗತಿಹೊಂದಲು ಸಾಧ್ಯವಿಲ್ಲ" ಎಂದು ಬರೆದಿದ್ದರು. ಇವರೆಲ್ಲರ ಸಾನ್ನಿಧ್ಯಕ್ಕೆ ತಂದೆಯವರೇ ಕಾರಣ.

ಮರಳಿ ಬಂದ ನಂತರ ಎಸ್.ಎಸ್.ಎಲ್.ಸಿ. ಪರೀಕ್ಷೆ ಕಟ್ಟಿ ಪ್ರಥಮ ದರ್ಜೆಯಲ್ಲಿ ಪಾಸಾದೆ. ಕೃಷಿ ಸಹಾಯಕ ಹುದ್ದೆಗೆ ಅರ್ಜಿ ಸಲ್ಲಿಸಿದೆ. ಸಂದರ್ಶನಕ್ಕೆ ಕರೆ ಬಂತು. ನಾನು ಹಾಗೂ ಸೋದರಮಾವ, ತಂದೆಯವರನ್ನು ಬೆಂಗಳೂರಿಗೆ ಜೊತೆಯಲ್ಲಿ ಕರೆದುಕೊಂಡು ಹೋಗಲು ಸಂಕಲ್ಪ ಮಾಡಿದೆವು. ಆದರೆ ಅವರು ಯಾರಲ್ಲೂ ಸ್ವಹಿತ ಸಾಧನೆಗಾಗಿ ಸಹಾಯ ಯಾಚಿಸಿದವರಲ್ಲ. ನಮ್ಮ ಒತ್ತಾಸೆಗೆ ಒಪ್ಪಿ ಬೆಂಗಳೂರಿಗೆ ಬಂದರು. ಸ್ನೇಹಿತ, ಸೋದರಮಾವ ಹಾಗೂ ನನ್ನ ೨ - ೩ ದಿನಗಳ ಪ್ರಯತ್ನ ಫಲ ನೀಡಲಿಲ್ಲ. ೪ ನೇ ದಿನ ಬೆಳಗಿನ ಜಾವದಲ್ಲಿ ತಂದೆಯವರು ತಾವು ಕನಸೊಂದು ಕಂಡಿದ್ದು - ಗುಡ್ಡಾಪೂರ ದಾನಮ್ಮದೇವಿಯ ದರ್ಶನ ಆಶೀರ್ವಾದವಾಯಿತು. ಇಂದು ನಿಮ್ಮ ಕೆಲಸದಲ್ಲಿ ಯಶಸ್ಸು ಕಾದಿದೆ ಎಂದು ಹೇಳಿದರು. ಅವರು ನುಡಿದಂತೆ ಅಂದು ನಮ್ಮ ಕಾರ್ಯಕೈಗೂಡಿತು. ಸಂದರ್ಶನದಲ್ಲಿ ಆಯ್ಕೆಯಾಗಿ ಇಂದು ಕೃಷಿ ಸಹಾಯಕನಾಗಿ ಸೇವೆ ಸಲ್ಲಿಸುತ್ತಿದ್ದೇನೆ. ಬಾಗಲಕೋಟೆಯಲ್ಲಿ ತರಬೇತಿಯಲ್ಲಿದ್ದಾಗ ಒಂದು ದಿನ ಮುಂಗೋಡಕ್ಕೆ ಸ್ನೇಹಿತನೊಬ್ಬನನ್ನು ಕರೆದುಕೊಂಡು ಹೋಗಿದ್ದೆ. ಅಲ್ಲಿ ತಂದೆಯವರ ಕಾರ್ಯಕ್ರಮ ನಡೆದಿತ್ತು. ಜನಪದ ಗಾಯಕ ಶ್ರೀ ಬಾಳಪ್ಪ ಹುಕ್ಕೇರಿಯವರು ವೇದಿಕೆಯಲ್ಲಿದ್ದರು. ದಾನಪ್ಪ ಜತ್ತಿ ಶಾಸ್ತ್ರಿಗಳ ಮಗ ಇಲ್ಲಿಗೆ ಬಂದಿದ್ದಾರೆ ಎಂದು ಹೇಳಿದರು. ಸರಿ ಅಲ್ಲಿಯ ಶ್ರೀಗಳು ಹಾಗೂ ಜನತೆ ನನ್ನನ್ನು ವೇದಿಕೆಯಮೇಲೆ ಬರಲು ತಿಳಿಸಿದರು. ಅಲ್ಲಿ ಶ್ರೀಗಳಿಂದ ಆಶೀರ್ವಾದ ಪಡೆದು ಎಲ್ಲರಿಗೂ ವಂದಿಸಿ ಕೃತಜ್ಞತೆ ಹೇಳಿದೆನು.

ಒಳ್ಳೆಯವರ ಒಡನಾಟ, ವಿಪುಲ ಸಾಹಿತ್ಯ ಸಂಗ್ರಹ, ಅನುಕೂಲಕರ ವಾತಾವರಣದಲ್ಲಿ ನನ್ನ ಸಾಹಿತ್ಯ ಕೃಷಿ ಆರಂಭವಾಯಿತು. ೬ ನೇ ತರಗತಿಯಲ್ಲಿದ್ದಾಗಲೇ 'ಕನ್ನಡಕ' ಎಂಬ ಮಕ್ಕಳ ಕವನ ಬರೆದು ತಂದೆಯವರಿಗೆ ತೋರಿಸಿದೆ. ಅವರು ಓದಿ ಅದನ್ನು ಖ್ಯಾತ ಸಾಹಿತಿ ಶ್ರೀ ಶಂ.ಗು. ಬಿರಾದಾರ ಅವರಿಗೆ ಕೊಟ್ಟರು. ಅವರು ಓದಿ 'ಕರ್ಮವೀರ' ಪತ್ರಿಕೆಗೆ ಕಳುಹಿಸಿದರು. ೧೫ ದಿನಗಳಲ್ಲಿ ಪ್ರಕಟಗೊಂಡು

ಮುಂದ ನೀಡಿತು. ನನ್ನಲ್ಲಿ ಸಾಹಿತ್ಯಾಸಕ್ತಿ ಹೆಚ್ಚಾಯಿತು. ತಂದೆಯವರ ಪುಸ್ತಕ ಭಂಡಾರದಲ್ಲಿರುವ ಮೌಲಿಕ ಗ್ರಂಥಗಳನ್ನು ಓದುವ ಹವ್ಯಾಸ ಬೆಳೆಸಿಕೊಂಡೆ. ೧೯೮೦ ರಲ್ಲಿ "ಚೈತನ್ಯ-ಚೇತನ" ಎಂಬ ಮರುಳ ಶಂಕರ ದೇವರ ಬಗ್ಗೆ ಉಪನ್ಯಾಸ ಗ್ರಂಥ ಬರೆದು ತಂದೆಯವರಿಗೆ ತೋರಿಸಿದೆ. ಓದಿ ಸಂತಸ ವ್ಯಕ್ತಪಡಿಸಿದರು. ಅದನ್ನು ಕೆಳದಿಯ ರಾಜಗುರುಗಳು ಓದಿ ಹುಬ್ಬಳ್ಳಿಯ ಮೂರುಸಾವಿರ ಮಠದ ಜಗದ್ಗುರುಗಳ ಸನ್ನಿಧಿಗೆ ತಲುಪಿಸಿದರು. ಅವರು ಓದಿ ತಮ್ಮ ಸಂಸ್ಕೃತಿ ಪ್ರಸಾರೋಪನ್ಯಾಸ ಮಾಲೆಯಿಂದ ಪ್ರಕಟ ಪಡಿಸಿದರು. ಅದೇ ವೇಳೆಯಲ್ಲಿ ಸಂಯುಕ್ತ ಕರ್ನಾಟಕ, ಸಂಜೆ-ವಾಣಿಯಲ್ಲಿ ಅನೇಕ ಮಕ್ಕಳಕತೆ. ಕವನಗಳು ಹಾಗೂ ಪರಂಜ್ಯೋತಿ ಯಲ್ಲಿ ಲಲಿತ ಪ್ರಬಂಧಗಳು ಪ್ರಕಟಗೊಂಡವು. ಇದಕ್ಕೆಲ್ಲ ತಂದೆಯವರ ಪ್ರೋತ್ಸಾಹವೇ ಮುಖ್ಯ ಕಾರಣ. ತಂದೆಯವರು ಶಿಶಿರ ವಸಂತದಲ್ಲಿ ಕಾಲಿಡುತ್ತಿರುವ ಈ ಸುಸಮಯ ದಲ್ಲಿ ಶತಾಯುಷಿಗಳಾಗಿ ಇನ್ನೂ ಹೆಚ್ಚಿನ ಸೇವೆ ಸಮಾಜಕ್ಕೆ ಸಂದಲಿ ಎಂದು ಹೃದಯಾರೆ ಆ ಪರಮಾತ್ಮನಲ್ಲಿ ಪ್ರಾರ್ಥಿಸುವೆ.

# ವಿಶಾಲ ಹೃದಯಿ

## ಕೆ. ಎಂ. ಜ್ಞಾನಯೋಗೀಶ್ವರ ಶಾಸ್ತ್ರಿಗಳು

'ತಿಕೋಟಾ' ಎಂಬುದು ಒಂದು ಊರಿನ ಹೆಸರು. ಹೀಗೆ ಜನವಾಣಿಯಲ್ಲಿ ತಿಕೋಟಾ ಎಂದಾಗಿರಬಹುದು. ಮೂಲತ. ಈ ಊರಿನ ಹೆಸರು 'ತ್ರಿಕೂಟ' ಎಂಬುದೇ ಸತ್ಯ. ತ್ರಿಕೂಟವೆಂದರೆ ಮೂರರ ಸಂಗಮ ಎಂಬ ಅರ್ಥ ಕೊಡುತ್ತದೆ. ಮಾತು–ಮತಿ–ಕೃತಿ ಈ ಮೂರು ಬೆರೆತು ಒಂದಾದಾಗ ಅದು ತ್ರಿಕೂಟವೆನಿಸುತ್ತದೆ.

ಅದರಂತೆ ಇಂದು ತಿಕೋಟಾ (ತ್ರಿಕೂಟ) ಎಂಬ ಹೆಸರು ಕೇಳಿದಾಕ್ಷಣ ಕೇಳುಗರ ಕಣ್ಣೆದುರಿನಲ್ಲಿ ಶ್ರೀ ಜತ್ತಿ ದಾನಪ್ಪನವರ ವ್ಯಕ್ತಿತ್ವ. ಹೆಸರು ಮೂಡಿನಿಲ್ಲುತ್ತದೆ. ಸಾಧಾರಣ ಎತ್ತರದ ನಿಲುವು. ನಿಲುವಿಗೆ ತಕ್ಕ ಮೈಕಟ್ಟು. ಮೈಕಟ್ಟಿಗೆ ತಕ್ಕಂತೆ ದುಂಡುಮುಖ. ವಿಶಾಲವಾದ ಹಣೆ. ಹಣೆಯಲ್ಲಿ ಸದಾ ತ್ರಿಬೆರಳ ಭಸ್ಮ. ನೀಳವಾದ ಮೂಗು. ರಸಿಕತೆಯಲ್ಲಿ ರಸಪಾಕವೇ ಗಟ್ಟಿಗೊಂಡಂತೊಪ್ಪುವ ದಂತಪಂಕ್ತಿಗಳು. ಬಿಳಿಯ ಜುಬ್ಬಾ. ಬಿಳಿಯ ಪಂಚೆ ಉಟ್ಟು ಭುಜದ ಮೇಲೊಂದು ಬಿಳಿಯ ವಸ್ತ್ರ ಹೊದ್ದು. ಹಸ್ತದೊಳಗೊಂದು ಕರವಸ್ತ್ರ ಹಿಡಿದು ಹೊರಟ ಆ ವ್ಯಕ್ತಿ ಯಾರೆಂದು ಕೇಳುವುದೇ ಬೇಡ. ಸುಸ್ಪಷ್ಟ ಮಾತನಾಡಲು ಬಾರದ ಪುಟ್ಟ ಮಕ್ಕಳು ಸಹ ಮುಗುಳು ನಗೆ ಸೂಸುತ್ತ 'ತಿಕೋಟಾ'ದ ಜತ್ತಿ ದಾನಪ್ಪನವರೆಂದು ಬೆರಳೆತ್ತಿ ತೋರಿಸುತ್ತಾರೆ.

ಹೀಗೆ ಕಿರಿಯ ಮಕ್ಕಳೊಂದಿಗೆ ಮಗುವಾಗಿ. ಹಿರಿಯರೊಂದಿಗೆ ಹಿರಿಯ ಅನುಭಾವಿಯಾಗಿ. ವಯೋವೃದ್ಧರೊಂದಿಗೆ ವೃದ್ಧರಾಗಿ. ಕಲೆಗಾರನಾಗಿ. ವೃತ್ತಿಯಿಂದ ಚಾಣಾಕ್ಷ ವ್ಯಾಪಾರಿಯಾಗಿ. ಶೀಲದಿಂದ ಗೃಹಸ್ಥರಾಗಿ. ಗುರು-ಲಿಂಗ-ಜಂಗಮ ಪ್ರೇಮಿಗಳಾಗಿ. ಬಸವ ಧರ್ಮದನುಯಾಯಿಗಳಾಗಿ. ಪ್ರವೃತ್ತಿಯಿಂದ ಸಾಹಿತಿಗಳಾಗಿ. ಕವಿಗಳಾಗಿ. ವಚನ ರಚನಾ ಚತುರ ಅನುಭಾವಿಯಾಗಿ. ಸುಸಮಾಜ ನಿರ್ಮಿಸುವ ಪಣತೊಟ್ಟು ತಿಕೋಟಾದ ಸರಪಂಚರಾಗಿ. ಸದಾ ಅಧ್ಯಾತ್ಮ ಚಿಂತನಶೀಲರಾಗಿ. ಪುರಾಣ ಪಟುಗಳಾಗಿ. ಶ್ರೇಷ್ಠ ಮಟ್ಟದ ಪ್ರವಚನಕಾರರಾಗಿ. ಕಲೋಪಾಸಕರಾಗಿ. ನಾಟಕ. ಸಿನೆಮಾ ರಂಗಗಳ ಅಭಿನಯ ವಿಶಾರದರಾಗಿ. ಭಜನಾ ಸಮ್ಮೇಲನಗಳಲ್ಲಿ ಜನಪ್ರಿಯ ಹಾಡುಗಾರರಾಗಿ. ರೇಡಿಯೋ ನಾಟಕಗಳಲ್ಲಿ ನಾಟ್ಯಕಲಾ ಕೋವಿದರಾಗಿ ಹೀಗೆ ಪ್ರತಿಯೊಂದು ರಂಗಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡು ತಮ್ಮ ಬದುಕಿನ ೫೪ ವಸಂತಗಳನ್ನು ಕಳೆದು ೫೫ನೆಯ ವಸಂತಕ್ಕೆ ಕಾಲಿರಿಸುವ ಶ್ರೀ ಜತ್ತಿ ದಾನಪ್ಪನವರು ಒಬ್ಬ ಪ್ರಮುಖ ವ್ಯಕ್ತಿ ಎಂದರೆ ಸಾಲದು. ಅವರನ್ನು ಒಬ್ಬ ಸಮಾಜ ಸಂಘಟನೆಯ ಶಕ್ತಿ ಎಂದು ಪರಿಗಣಿಸಿದರೆ ತಪ್ಪಾಗಲಾರದು.

ಇಂದು ಅಭಿನಂದನೆಗೆ ಪಾತ್ರರಾದ ಶ್ರೀ ಜತ್ತಿ ದಾನಪ್ಪನವರೊಂದಿಗೆ ನಾವು ಕೂಡುವ ಯೋಗ ತೆಲಸಂಗದ ಹಿರೇಮಠದ ಶ್ರೀ ಷ. ಬ್ರ. ಶ್ರೀ ಪೂಜ್ಯ ಬಸವಲಿಂಗ ಪಟ್ಟಾಧ್ಯಕ್ಷರ ಶ್ರೀಮಠದಲ್ಲಿ ಮೂರು ತಿಂಗಳು ಬಸವಪುರಾಣ ನಡೆದಾಗ ಒದಗಿಬಂತು. ನಮ್ಮ ಪುರಾಣ ಪ್ರವಚನದ ಜೊತೆಗೆ ಐದು ದಿನಗಳ ಪರ್ಯಂತರ ಅವರ ನುಡಿ ಸೇವೆಯು ಅಲ್ಲಿ ಸಲ್ಲಿತು. ಅಂದು ಉಭಯರು ಕೂಡಿ ಅಲ್ಲಿ ಐದು ದಿನಗಳವರೆಗೆ ಸಂತಸದ ನಗೆಗಡಲಲ್ಲಿ ತೇಲುತ್ತ ಅವರೊಂದಿಗೆ ಕಳೆದ ದಿನಗಳು ಜೀವನದಲ್ಲಿ ಎಂದೂ ಮರೆಯದ ಕ್ಷಣಗಳಾಗಿವೆ. ಅವರ ಸರಳ ವ್ಯಕ್ತಿತ್ವ, ಅನುಭವ ಪೂರ್ಣ ಅಸ್ಖಲಿತವಾಣಿ ಜೊತೆಗೆ ಆಗಾಗ ಮಿಂಚುಬಾಣಗಳಂತೆ ಎಸೆಯುವ ತಿಮ್ಮನ ಕತೆ, ಹಾಸ್ಯ ಚುಟುಕುಗಳು ನಮ್ಮೊಂದಿಗೆ ನೆರೆದ ಶ್ರವಣಾರ್ಥಿಗಳನ್ನು ಮಂತ್ರಮುಗ್ಧರನ್ನಾಗಿ ಮಾಡಿಬಿಟ್ಟಿತು. ಅದರಂತೆ ಅವರೊಂದಿಗೆ ಬಿಡುವಿನ ಸಮಯದಲ್ಲಿ ಅವರಿಂದಲೇ ಕೇಳಿದ ಕೆಲವು ವಿಚಾರಗಳಿಂದ ಶ್ರೀ ದಾನಪ್ಪನವರು ಸಿಹಿ-ಕಹಿಗಳೆರಡನ್ನು ಬೇವು–ಬೆಲ್ಲದಂತೆ ಸವಿದು ಸಮಗಂಡ ಸಂಯಮಶೀಲರೆಂಬುದು ಅರ್ಥವಾಯಿತು.

ಹೀಗೆ ನಮ್ಮೊಂದಿಗೆ ಐದು ದಿನಗಳಿದ್ದು ಆರನೆಯ ದಿನದಂದು ತೆಲಸಂಗದಲ್ಲಿ ನಮ್ಮನ್ನು ನಮ್ಮ ಪಾಡಿಗೆ ಬಿಡದೆ ತಮ್ಮ ಊರಾದ 'ತಿಕೋಟಾ'ಕ್ಕೆ ಪ್ರೀತಿಯಿಂದ ಕರೆದುಕೊಂಡು ಹೋಗಿ, ಮಾವಿನಫಲ ಸಿಗದ ಪ್ರಸಂಗದಲ್ಲೂ ದುಡುಕಿ ಬಹುದೂರದಿಂದ ತರಿಸಿ ಸೀಕರಣೆಯ ಪ್ರಸಾದದಿಂದ ತೃಪ್ತಿಪಡಿಸಿ, ತಮ್ಮ ಮನೆಯ ಬಳಗದ ಪರಿಚಯದೊಂದಿಗೆ ತಮ್ಮ ಶಾರದಾಂಬಾ ಸಾಹಿತ್ಯ ಮಂದಿರದ ಸಂಗೀತ, ಸಾಹಿತ್ಯ ಪರಿಣಿತರ ಬಳಗದ ಪರಿಚಯ ಮಾಡಿಸಿದುದು ಜ್ಞಾಪಿಸಿಕೊಂಡರೆ ಅವರ ಹೃದಯ ವಂತಿಕೆಯ ವಿಶಾಲತೆ ಅರ್ಥವಾಗುತ್ತದೆ.

'ಮಾವು' ಎಂದರೆ ಪ್ರೀತಿ – ಮಾವು ಫಲದಿಂದ ಜಂಗಮ ತೃಪ್ತಿಗೈದ ಅವರ ಪ್ರೀತಿ ಅಪಾರ ವಿಶ್ವಾಸದ ಪ್ರತೀಕವಾಗಿದೆ – ಮಾವಿನಷ್ಟೇ ರುಚಿಯಾಗಿದೆ. ಅವರ ಸವಿಸವಿದ ನಾನೇ ಧನ್ಯ! ಮಾತು, ಮತಿ, ಕೃತಿ ಮೂರೊಂದಾಗಿ, ತಿಕೋಟಾದ ವಾಸಿಗಳಾಗಿ, ಅಭಿಮಾನಿಗಳಿಗೆ ಆನಂದದ ಸೆಲೆಯಾಗಿ ಬಾಳುಸಾಗಿಸುತ್ತಿರುವ ಜತ್ತಿ ದಾನಪ್ಪನವರು ಇನ್ನು ನೂರು ವರ್ಷಗಳ ಚೆಲುವಿನ ವಸಂತಗಳ ಸೊಬಗನ್ನು ಅನುಭವಿಸಲಿ ಎಂದು ಹೃದಯಾರೆ ಹಾರೈಸುವೆ.

# ಬಾಳ ಗೆಲುಮೆಯಲಿ ದಾನಪ್ಪ ಜತ್ತಿ

**ಡಾ. ಸಿಂಪಿ ಲಿಂಗಣ್ಣ**

ಕೃಷಿಕನ ಮನೆಯಲ್ಲಿ ಹೋರಿಯಾಗಿ ಹುಟ್ಟುವುದೊಂದು ಸೌಭಾಗ್ಯವೇ ಸರಿ. ಆ ಹೋರಿ ಕರು ಕೆಚ್ಚಲಿನ ನಾಲ್ಕು ಮೊಲೆಗಳ ಅಧಿಕಾರಿ. ಅಂತೆಯೇ ಜಿಗಿದು ನೆಗೆದು ತನ್ನ ಮುಮ್ಮೃಸ್ಸನ್ನು ಸೂರೆಗೊಳಿಸುತ್ತದೆ. ಅದರ ಮುಂದಿನ ಹೆಜ್ಜೆಯೇ ಬೀಜದ ಹೋರಿಯ ಠೀವಿ. ಮುಂದೆ ಕಂಟಲೆತ್ತು – ಆಟ ಪಾಟದ ಮೋಡಿಯೆತ್ತು – ಗಾಡಿ ಯೆತ್ತು ಆಗುತ್ತ ಮುಂದುವರೆಯುವುದು. ನೊಗಹೊತ್ತ ಎತ್ತು. ಶಿವನಹೊತ್ತ ಎತ್ತು ಬಸವ ಅನಿಸುತ್ತದೆ. ಇದೇ ಬಾಳ ಪರಂಪರೆ.

ತಿಕೋಟಾ ಗ್ರಾಮದ ವಣಿಕ ಮನೆತನದಲ್ಲಿ ಕಾಯಿಯ ಸೋಲದ – ಕಾಯಿಯ ಗೆಲ್ಲದ ಪರದಿಗನ ಮರಿಯಾಗಿ. ಮಗನಾಗಿ ಜನ್ಮ ತೊಟ್ಟ ಚುರುಕುಜೀವಿ, ಊರ ಪಂಚಾಯತಿಯ ಕಾರುಭಾರಿಯ ಪಟ್ಟವೇರಿದ್ದು. ಶಿಕ್ಷಕರಿಗೆ ಮಿತ್ರ. ಸಾಹಿತಿಗಳಿಗೆ ಸಹೃದಯಿ – ರಸಿಕ, ಹಾಡಿಗೆ ಮೋಡಿಯಾಗಿ. ಬಯಲಾಟ. ನಾಟ್ಯರಂಗಗಳಲ್ಲಿ ಹೆಣ್ಣಾಗಿ. ಗಂಡಾಗಿ ಸುಳಿದು ಬೆಳೆದು ಪ್ರವಚನ ಪಟುವಿನ ದಾರಿಯಲ್ಲಿ ಮುಂದು ವರೆದು ಶಾಸ್ತ್ರಿಯೆನಿಸಿಕೊಳ್ಳುವದು ಅಂಥ ಇಂಥವರ ತುತ್ತಲ್ಲ. ದಾನಪ್ಪ ಜತ್ತಿಯವರು ಸಾಹಸದ ದಾರಿಗುಂಟ ಸಾಗಿಬಂದಿದ್ದಾರೆ. ೫೫ರ ನಿವೃತ್ತಿಯ ಸೋಪಾನದ ಅಡಿಗೆ ಬಂದುನಿಂತಿದ್ದಾರೆ.

ಮನೆ. ಮನೆತನ. ಅಂಗಡಿ. ಹೊಲ. ವ್ಯವಹಾರ ನೋಡಿಕೊಳ್ಳಲು ಹೆಂಡತಿ ಸೌ. ಶಾಂತಮ್ಮನವರು, ಮಗ – ಸೋಮಶೇಖರ ಸುಸಮರ್ಥರಾಗಿದ್ದಾರೆಂದು ಹೇಳ ಬಹುದಾಗಿದೆ. ದಾನಪ್ಪ ಜತ್ತಿ ಇವರ ಪ್ರವಚನ ಪ್ರಸಂಗದಲ್ಲಿ ಪುರಾಣ. ಕೀರ್ತನೆ ಸಂದರ್ಭದಲ್ಲಿ ಸಾಹಿತ್ಯ, ಕಾವ್ಯ. ನಾಟಕ. ಅಭಿನಯ. ಹಾಸ್ಯ ಮೊದಲಾದವುಗಳು ಕರೆಕಳಿಸಿದಂತೆ ಸಕಾಲಕ್ಕೆ ಹೊರಹೊಮ್ಮುವವು. ಆಲೋಚನೆಯ ಪರಿಣಾಮಕ್ಕೆ ಪ್ರತಿಫಲವೂ ಒಲಿದುಬಂದರೆ ಯಾರು ಬೇಡವೆನ್ನುತ್ತಾರೆ. ಆ ಧನಕ್ಕೆ ತಾನು ಒಡೆಯನಾಗಿರದೆ ಪಾರುಪತ್ಯಗಾರನೆಂದು ಬಗೆಯುವ ತಿಳುವಳಿಕೆಯೂ ಮೂಡಿ ಬರುತ್ತದೆ.

ಬಾಳಿನ ರಂಗಭೂಮಿಯಲ್ಲಿ ಕಾಣಿಸಿಕೊಂಡು ನಿಂತವನು ಮೊದಮೊದಲು ಇದ್ದದ್ದು ಮರೆದು ಇಲ್ಲದ್ದು ತೆರೆಯಬೇಕಾಗುತ್ತದೆ. ಇದೇ ಹಾಲ್–ಜೇನು ಸುರಿ ಯುವ ಕ್ರಮ. ಹುಸಿನಗುತ ಬಂದ ನಾವು ನಸುನಗುತ ಬಾಳಿ. ತುಸು ನಗುತ ತೆರಳುವುದೇ ಸೂಕ್ತ ದಾರಿ. ಅದು ತುಸು ತಡೆದು ಬರಬಹುದು. ಇನ್ನೂ ಒಂದು ದೊಡ್ಡ ಪಾಠ ಜೀವಕೋಟಿಗೆ ಅನಿವಾರ್ಯ.

ಇದ್ದದ್ದಾಗಲು ಹೇಸುವುದಿಲ್ಲ
ಇಲ್ಲದ್ದಾಗಲು ಹೇಸುವುದಿಲ್ಲ

ಎಂಬ ಸಿಧ್ಧಾಂತಕ್ಕೆ ಬರುವ ಸಂದರ್ಭ ತಪ್ಪಿಸಲಿಕ್ಕಾಗುವುದಿಲ್ಲ. ಅದೇ ಬಾಳಗೆಲುವಿನ ಒಳಗುಟ್ಟು.

ನೀನಾಗದಿರು ಇನ್ನು ಬೇರೆಯವರಂತೆ
ನೀನಾಗು ಮೊದಲು ನೀನು ನಿನ್ನಂತೆ

ಇದೇ ಪೌರುಷ ಮಾರ್ಗ. ಪೌರುಷವು ಪುರುಷರಿಗಿದ್ದಷ್ಟೇ ಸ್ತ್ರೀಗೂ ಉಂಟು. ಪುರುಷನನ್ನು ಹೆತ್ತವಳು ಪೌರುಷಗೇಡಿಯಾಗಿರಬಹುದೇ ?

ಜತ್ತಿ ದಾನಪ್ಪನವರು ಗುಡ್ಡಾಪುರ ದಾನಮ್ಮನ ಹೆಸರಿನಲ್ಲಿ ಬೆಳೆದುಬಂದವರು. ತಿಕೋಟೆಯ ರಕ್ಷಣೆಯಲ್ಲಿ ನಲಿದು ಬಂದವರು. ಬೀಳೂರಿನ ಸಾಂಬನ ಉಪ್ಪು ಉಂಡವರು. ಅವರು ತಮ್ಮ ೫೫ನೆಯ ವಯಸ್ಸಿನ ನಿಲುಮೆಯಲ್ಲಿಯೂ ತನ್ನ ತಾನರಿಯುವ ತವಕ ಬಿಟ್ಟು ಕೊಡಬೇಕಾಗಿಲ್ಲ.

ನಿಲ್ಲು ನಿಲ್ಲಲೆ ಜೀವ ನಿನ್ನನೇಕಾಂತದಲಿ
ದೇವನಿದಿರಲಿ ಮಾತನೊಂದು ಕೇಳ್ವೆಂ
ನಿರ್ವಿಚಾರದಿ ಭವದ ಘೋರಾಂಧಕಾರದೊಳು
ನೀನೆತ್ತ ಪೋದಪೆಯೋ ನಿಂತು ನೋಡೈ ॥

ಶ್ರೀ ಮಾತಾರವಿಂದರು ಉಸಿರುವಂತೆ ನಮ್ಮ ಬದುಕಾಗಬೇಕು. ದಾನಪ್ಪ ಈ ದಾರಿಯಲ್ಲಿ ನಡೆದುಬಂದಿದ್ದಾರೆ. ಮುಂದೆಯೂ ನಡೆಯುತ್ತಾರೆ. ಅವರ ಆತ್ಮೀಯ ವೈಶಾಲ್ಯ ಬದುಕು ಅರ್ಥಪೂರ್ಣವಾಗಲೆಂದು ಬಯಸುವೆ.

# ಪ್ರಸಿದ್ಧ ಪ್ರವಚನ ಪಟು

## ಬಸವರಾಜ ಬಿ. ದೇಸಾಯಿ

ಸಾಮಾಜಿಕ, ಸಾಹಿತ್ಯಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ದಾನಪ್ಪ ಜತ್ತಿಯವರದು ಶ್ಲಾಘನೀಯ ಸೇವೆ. ಮೂಲವಾಗಿ ವ್ಯಾಪರಿಗಳಾದರೂ ಈ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡದ್ದೊಂದು ಸುದೈವವೇ ಸರಿ. ಕೇವಲ ಏಳನೆಯ ಇಯತ್ತೆವರೆಗೆ ವಿದ್ಯಾಭ್ಯಾಸ ಮಾಡಿದ್ದರೂ ಸಹ ಅವರ ಪಾಂಡಿತ್ಯ, ಪ್ರತಿಭೆ ಅಸಾಧ್ಯವಾದದ್ದು. "ದೈವ ಬಲವೊಂದಿದ್ದರೆ ದೇವರನ್ನೇ ಗೆಲ್ಲಬಹುದು" ಎಂಬಂತೆ ದಾನಪ್ಪ ಜತ್ತಿಯವರಿಗೆ ಪ್ರತಿಯೊಂದು ಕಾರ್ಯದಲ್ಲಿ ಯಶಸ್ಸು ಸಿಕ್ಕಿದ್ದು ಅವರ ಸಾಧನೆಯ ಪ್ರತೀಕವಾಗಿದೆ.

ದಾನಪ್ಪ ಜತ್ತಿಯವರು ಸಾಹಿತಿಗಳಾಗಿ ಪ್ರಪ್ರಥಮ ಕುಸುಮವಾಗಿ ಹೊರತಂದ "ಅಮೂಲ್ಯ ಕಾಣಿಕೆ" ಕಥಾ ಸಂಕಲನ ನಿಜವಾಗಿಯೂ ಅದು ಅವರ ಜೀವನದ ಅಮೌಲ್ಯವಾದ ಕಾಣಿಕೆಯೇ ಸರಿ. ಅದರಲ್ಲಿಯ ಒಂದೊಂದು ಕಥೆಗಳು ನೈಜ ಜೀವನದ. ತ್ಯಾಗ ಮನೋಭಾವದ, ಸಾಮಾಜಿಕ ಕಳಕಳಿಯನ್ನು ಹೊಂದಿದ, ಇಂದಿನ ನವ ಪೀಳಿಗೆಗೆ ಮಾರ್ಗದರ್ಶಕವಾದ ಕೃತಿಯಾಗಿದೆ. ಕಥೆಗಳಂತೆ ಅವರ ಕವನಗಳು ಸಹ ಪ್ರಶಂಸನೀಯ.

"ಆಡು ಮುಟ್ಟದ ಗಿಡವಿಲ್ಲ" ಎಂಬಂತೆ ದಾನಪ್ಪನವರ ಸಾಹಿತ್ಯ, ಸಂಗೀತ, ನಟನೆ, ಪುರಾಣ, ಪ್ರವಚನ, ಕೀರ್ತನೆ, ರಾಜಕೀಯ, ಸಾಮಾಜಿಕ, ಧಾರ್ಮಿಕ ರಂಗಗಳಲ್ಲಿನ ಕಳಕಳಿಯ ದುಡಿಮೆಗಳನ್ನೆಲ್ಲ ಗಮನಿಸಿದಾಗ ಅವರ ಬಹುರೂಪದ ದರ್ಶನ ನಮಗಾಗುತ್ತದೆ.

ನಾನು ದಾನಪ್ಪ ಜತ್ತಿ ಅವರ ಹತ್ತಿರದ ಸಂಬಂಧಿಯಾಗಿ ಹಾಗೂ ಸಾಹಿತಿ ಮಿತ್ರನಾಗಿ, ಅವರಿಂದ ಜೀವನದಲ್ಲಿ ಕಲಿತುಕೊಂಡ ಪಾಠವೆಂದರೆ ಬದುಕಿನಲ್ಲಿ ಸುಖ, ದುಃಖಗಳು ಅನಿವಾರ್ಯ, ಅವು ಬಂದಾಗ ಒಂದೇ ಸಮನಾಗಿ ಸ್ವೀಕರಿಸುವ ದಿಟ್ಟತನ, "ಜಗವೆಲ್ಲ ನಗುತಿರಲಿ, ಜಗದಳವು ನನಗಿರಲಿ" ಎಂಬ ಕವಿವಾಣಿಯಂತೆ, ಜತ್ತಿಯವರು ತಮ್ಮ ಸಾಂಸಾರಿಕ ಜೀವನದಲ್ಲಿ ಎಷ್ಟೇ ತೊಂದರೆ ಅನುಭವಿಸಿದರೂ ಅದೆಲ್ಲವನ್ನು ನಗುತ್ತ ಎದುರಿಸಿ ಗೆದ್ದವರು. ಕಹಿಯನ್ನು ನಗುತ್ತಲೇ ಸವಿದು, ಬದುಕಿನಲ್ಲಿ ರುಚಿ ಪಡೆದವರು. ತಮ್ಮ ಕಲೆಯೊಂದಿಗೆ ತಿಮ್ಮನನ್ನು ಕರಗತ ಮಾಡಿಕೊಂಡು ಜನತೆಯನ್ನು ನಗಿಸುತ್ತಲೇ ಅವರೊಂದಿಗೆ ಚೈತನ್ಯದಿಂದ ಬದುಕಿದವರು.

ಸಾಹಿತ್ಯ, ಕಲೆ, ಧಾರ್ಮಿಕ ತ್ರಿವೇಣಿ ಸಂಗಮವಾದ ಜತ್ತಿಯವರದು ನಿತ್ಯ ಕಾಯಕದ ಕಾಯ. ಅವರು ಕಥೆಗಾರನಾಗಿ ಕಥೆ ಬರೆಯುತ್ತಾರೆ, ಕವಿಯಾಗಿ ಕವನ ಸೃಷ್ಟಿಸುತ್ತಾರೆ. ನಾಟಕದಲ್ಲಿ ಸ್ತ್ರೀಯರೂ ಕೂಡ ಬೆರಳು ಕಚ್ಚುವಂತೆ ಸ್ತ್ರೀ ಪಾತ್ರ ವಲ್ಲಿ ಕಾಣಿಸಿಕೊಳ್ಳುತ್ತಾರೆ. ರಾಜಕೀಯದಲ್ಲಿ ಸೇರಿ ದಕ್ಷ ಆಡಳಿತ ಒದಗಿಸುತ್ತಾರೆ. ಕೀರ್ತನೆ, ಪುರಾಣ, ಪ್ರವಚನಕಾರರಾಗಿ ಧಾರ್ಮಿಕ ಸೇವೆ ಸಲ್ಲಿಸುತ್ತಾರೆ.

ಹೀಗೆ ಅನೇಕ ರಂಗಗಳಲ್ಲಿ ಅವರದು ನಿಸ್ವಾರ್ಥ ಸೇವೆ, ಸಾರ್ಥಕ ಕಾಯಕ, ಇಂಥ ಪವಿತ್ರವಾದ ೫೪ ವಸಂತಗಳನ್ನು ಕಳೆದು ೫೫ನೆಯ ವಸಂತದಲ್ಲಿ ಕಾಲಿರಿಸಿದ ದಾನಪ್ಪನವರು ಶತಾಯುಷಿಗಳಾಗಿ, ಹಚ್ಚ ಹಸಿರಾದ ಬದುಕು ನಡೆಸಿ, ನಾಡಿಗರ ಹೃದಯ ಸಿಂಹಾಸನದಲ್ಲಿ ಅಚ್ಚಳಿಯದೇ ರೂಪಗೊಳ್ಳಲಿ ಎಂದು ಆ ಬಸವೇಶ್ವರನಲ್ಲಿ ಪ್ರಾರ್ಥಿಸುವೆ.

# ವಿಶಿಷ್ಟ ಕಲೆಯ ವ್ಯಕ್ತಿ

## ಶ್ರೀ ವಿಜಯ ಮಹಾಂತೇಶ ದೇವರು

ಪ್ರಚಲಿತವಾದ ಯಾಂತ್ರಿಕ ಯುಗದಲ್ಲಿ ಜನಜೀವನದ ಬದುಕು ತೀರ ಸಂಕುಚಿತಗೊಳ್ಳುತ್ತಿರುವ ಸಂದರ್ಭದಲ್ಲಿ ಜನತೆಯ ಬದುಕಿಗೆ ಧಾರ್ಮಿಕ ತಳಹದಿ ಅನಿವಾರ್ಯವಾಗಿದೆ. ಮಾನವ ತಾನೊಬ್ಬ ಸಂಸಾರಕ್ಕೆ ಸೀಮಿತವಾದ ವ್ಯಕ್ತಿ ಎಂಬುದನ್ನು ತೊರೆದು, ತಾನೊಬ್ಬ ಸಮಾಜದ ಪ್ರಜೆ ಎಂಬ ವಿಶಾಲ ಮನೋಭಾವನೆಯನ್ನು ತಾಳಬೇಕಾಗಿದೆ. ಜನತೆಗೆ ಸಾಮಾಜಿಕ ಪ್ರಜ್ಞೆಯ ಅವಶ್ಯಕತೆ ಇರುವದರಿಂದ ಈ ದೆಸೆಯಲ್ಲಿ ಧರ್ಮದ ಪ್ರಸಾರವೂ ಕೂಡ ಸೂಕ್ತ ರೀತಿಯಲ್ಲಿ ನಡೆಯಬೇಕಾದ ಸಂದರ್ಭದಲ್ಲಿ ಸಾಕಷ್ಟು ಜನ ಮಠಾಧಿಪತಿಗಳು ಶ್ರಮಿಸುತ್ತಿದ್ದಾರೆ.

ಶ್ರೀ ದಾನಪ್ಪ ಜತ್ತಿಯವರು ಧಾರ್ಮಿಕತೆಯನ್ನು ನಾರ್ಮಿಕತೆಯೊಂದಿಗೆ ಬೆರೆಸಿ ಜನತೆಯ ಮನದಲ್ಲಿ ಧರ್ಮದ ಬೀಜ ಬಿತ್ತುತ್ತಿರುವ ಒಬ್ಬ ಶ್ರೇಷ್ಠ ಕಲಾಕಾರರಾಗಿದ್ದಾರೆ. ಅವರ ವಾಕ್ ಪ್ರೌಢಿಮೆ, ಶೈಲಿ ಅತ್ಯಂತ ಸೊಗಸಾದದ್ದು. ನಾವು ಪ್ರಪ್ರಥಮಬಾರಿಗೆ ಅವರ ಕಾರ್ಯಕ್ರಮವನ್ನು ಕೇಳಿದಾಗಲೇ ಅವರೊಬ್ಬ ವಿಶಿಷ್ಟ ಕಲೆಯ ವ್ಯಕ್ತಿಯಾಗಿ ಕಂಡುಬಂದರು. ವೀರಶೈವಾಚಾರಗಳಾದ ಅಷ್ಟಾವರಣ, ಷಟಸ್ಥಲ, ಪಂಚಾಚಾರಗಳನ್ನು ಜನತೆಯ ಮನಕ್ಕೆ ನಾಟಿಸುವ ರೀತಿ ವಿಶೇಷವಾಗಿ ಕಂಡುಬಂದವು. ಆ ಕ್ಷಣಗಳೇ ಈ ಲೇಖನಕ್ಕೆ ಸ್ಫೂರ್ತಿಯಾಗಿವೆ.

ನಗುವು ಸಹಜ ಧರ್ಮ; ನಗಿಸುವುದು ಪರಧರ್ಮ<br>
ನಗುವು ಕೇಳುತ ನಗುವುದತಿಶಯದ ಧರ್ಮ<br>
ನಗುವ ನಗಿಸುವ ನಗಿಸಿ ನಗುತ ಬಾಳುವ ವರವ<br>
ಮಿಗೆ ನೀನು ಬೇಡಿಕೊಳೊ – ಮಂಕುತಿಮ್ಮ.

ಡಿ.ವಿ.ಜಿ.ಯವರ ಈ ಮಾತಿನಲ್ಲಿ ಮಾನವನ ನಿಜವಾದ ಧ್ಯೇಯ ಮತ್ತೊಬ್ಬರನ್ನು ನಗಿಸಿ, ಅಂದರೆ ಒಳಿತನ್ನು ಬಯಸುವದಾಗಿರಬೇಕೆಂಬುದು ಸ್ಪಷ್ಟವಾಗಿದೆ. ಪ್ರಸ್ತುತ ಶ್ರೀ ದಾನಪ್ಪ ಜತ್ತಿಯವರು ಈ ವರವನ್ನು ದೇವರಲ್ಲಿ ಪಡೆದುಕೊಂಡು ಬಂದಂತೆ ತೋರುತ್ತದೆ. ಅಲ್ಲದೆ ಅವರ ನೀತಿಯುಕ್ತ ಹಾಸ್ಯ ಕತೆಗಳಲ್ಲಿ ತಿಮ್ಮನ ಹೆಸರೇ ಇರುವದು ಇನ್ನೂ ಒಂದು ವೈಶಿಷ್ಟ್ಯವಾಗಿ ಕಂಡುಬಂದಿದೆ.

ಕೀರ್ತನೆ, ಪುರಾಣ, ಪ್ರವಚನ, ಹಲವು ಕಲಾ ಮಾಧ್ಯಮಗಳ ಮೂಲಕ 'ಕಲಾಪೂಜೆ'ಗೈಯ್ಯುತ್ತಿರುವ ಇವರ ವ್ಯಕ್ತಿತ್ವವನ್ನು ಹಲವು ಮುಖಗಳಿಂದ

ಅಧ್ಯಯನ ಮಾಡಲು ಸಾಧ್ಯ. ಸಾಹಿತ್ಯ, ರಂಗಭೂಮಿ ಮುಂತಾದ ಮಾಧ್ಯಮಗಳಲ್ಲಿ ತಮ್ಮ ಪ್ರತಿಭೆಯನ್ನು ರೂಢಿಸಿಕೊಂಡ ಇವರದು ಅಪರೂಪದ ವ್ಯಕ್ತಿತ್ವವೆಂದೇ ಹೇಳಬಹುದು. ಅದರಲ್ಲೂ ರಂಗಭೂಮಿಯಂಥ ಮಾಧ್ಯಮಗಳು ಒಬ್ಬ ಕಲಾಕಾರನ ಸಾಮರ್ಥ್ಯದ ಒರೆಗಲ್ಲು ಎನ್ನಬಹುದು. ಕಾರಣವೆಂದರೆ ಆಧುನಿಕ, ತಾಂತ್ರಿಕವಾದ ಸಿನೇಮಾಕ್ಕಿಂತ ಅದು ಭಿನ್ನವಾದದ್ದು. ಅಂಥದ್ದರಲ್ಲಿ ಶ್ರೀ ಜತ್ತಿಯವರು ಪಳಗಿ ಬಂದವರು. ಅವರ ಕಲಾ ಸಾಧನೆಯು ಮೇಲುಗೈ ಎನ್ನಬಹುದು.

ದಾನಪ್ಪನವರು ತಮ್ಮ ವೈಯಕ್ತಿಕ ಬದುಕಿನ ಪರಿಧಿಯಿಂದ ಸಾಮಾಜಿಕ ಜೀವನಕ್ಕೆ ಸಂಪೂರ್ಣವಾಗಿ ಅರ್ಪಿಸಿಕೊಂಡು ಕಲೆಗಾಗಿ ತಮ್ಮ ವೃತ್ತಿಯನ್ನು ಬಲಿಗೊಟ್ಟು, ಬೆಂಕಿಯನ್ನುಂಡು ಪುಟವಿಕ್ಕಿದ ಚಿನ್ನದಂತೆ ಕಲಾ ಪ್ರತಿಭೆಗೆ ಪಾವಿತ್ರ್ಯ ತಂದುಕೊಂಡಿದ್ದಾರೆ. ಬೇಂದ್ರೆಯವರು ಹೇಳುವಂತೆ,

"ಅಂತರಂಗದ ಅಣಿಮುತ್ತುಗಳನೆತ್ತಿ
ಪವಣಿಸುವ ಜಾಣೆ ಎನಗೆಂದು ಬಹುದೊ"

ಎಂಬಂತೆ ದಾನಪ್ಪನವರು ಸಾಂಸಾರಿಕ ವ್ಯಾಮೋಹಕ್ಕೆ ಬದುಕನ್ನು ಬಲಿಗೊಡದೆ ಅಂತರಂಗದಲ್ಲಿ ಹುದುಗಿದ ಪ್ರತಿಭೆಯನ್ನು ಕಥೆ, ಕವನ, ವಚನ, ಕೀರ್ತನೆ, ಪ್ರವಚನ, ಪುರಾಣಗಳ ರೂಪಕೊಟ್ಟು ಜನತೆಯ ಹೃದಯಕ್ಕೆ ದಿವ್ಯ ಚೇತನ ನೀಡಿದ್ದಾರೆ. ಪ್ರತಿಯೊಬ್ಬ ವ್ಯಕ್ತಿಯ ಭಾಷೆ ಭಾವನೆಯ ಪ್ರತಿರೂಪವಾಗಿರುತ್ತದೆ. ಅಂತರಂಗದಲ್ಲಿ ಸುವಿಚಾರಗಳು ಇದ್ದಾಗ ಮಾತ್ರ ಆ ಭಾಷೆ ಶುದ್ಧವಾಗಿರಲು ಸಾಧ್ಯ. ಈ ದೃಷ್ಟಿಯಲ್ಲಿ ಜತ್ತಿಯವರ ಪ್ರತಿ ನುಡಿಯೂ ಮುತ್ತಾಗಿರುತ್ತದೆ. ಬಸವಣ್ಣನವರು ಹೇಳುವಂತೆ,

ನುಡಿದರೆ ಮುತ್ತಿನಹಾರದಂತಿರಬೇಕು
ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು
.................................

ಅನುಭವದಿಂದ, ಅಂತರಂಗದ ಶುದ್ಧಿಯಿಂದ ಹೇಳಿದ ಮಾತುಗಳು ಮಾತ್ರ ಮುತ್ತಾಗಲು, ಮತ್ತೊಬ್ಬರ ಬಾಳನ್ನು ಬೆಳಗುವ ದೀಪ್ತಿಯಾಗಿರಲು ಸಾಧ್ಯ. ದಾನಪ್ಪ ಜತ್ತಿಯವರ ಪ್ರತಿ ಮಾತುಗಳು ಮೇಲಿನ ಹೇಳಿಕೆಗೆ ಸಾಕ್ಷಿಯಾಗಿವೆ. ಅವರ ಈ ಪ್ರೌಢಿಮೆಯ ಹಿಂದೆ ಅಪಾರವಾದ ಪರಿಶ್ರಮ ಅಡಗಿರುವುದು ಸ್ಪಷ್ಟ. ಅವರ ಪ್ರವಚನ ಸಮಾಜಕ್ಕೊಂದು ದಾರಿದೀಪ. ಯಾವುದೇ ವ್ಯಕ್ತಿ ತಾನು ಬದುಕಿದ ಸಮಾಜದ ಕೊಳೆಯನ್ನು ತನ್ನ ಶಕ್ತ್ಯಾನುಸಾರ ನಿರ್ಮೂಲಗೊಳಿಸುವುದು ಆದ್ಯ ಕರ್ತವ್ಯ. ಅಂಥ ಕರ್ತವ್ಯ ಪ್ರಜ್ಞೆ ದಾನಪ್ಪನವರಿಗಿದೆ. ಧಾರ್ಮಿಕ ವಿಷಯವೆಂಬುದು

ಜನತೆಗೆ ಮನರಂಜನೆಯು ವಿಷಯವಲ್ಲ. ಅದರ ಸೂಕ್ಷ್ಮ ಸಂವೇದನೆಗಳನ್ನು ಜನತೆಯ ಹೃದಯಕ್ಕೆ ತಲುಪಿಸಲು ಪ್ರಾಜ್ಞರಾದ ಜತ್ತಿಯಂಥವರಿಂದ ಮಾತ್ರ ಸಾಧ್ಯ.

ಆಧುನಿಕ ಕವಿಗಳ ಕಾವ್ಯದಲ್ಲಿ ಹುದುಗಿರಬಹುದಾದ ಚಿಂತನ-ಮಂಥನಗಳನ್ನು ಶ್ರೀ ದಾನಪ್ಪನವರು ಸಂದರ್ಭಕ್ಕನುಸಾರವಾಗಿ ಬಳಸಿಕೊಂಡು ಸಾಮಾನ್ಯನ ಹತ್ತಿರಕ್ಕೆ ಬರುತ್ತಾರೆ. ಹಳಗನ್ನಡದ ಕವಿಗಳಾದ ಪಂಪ, ರನ್ನ, ಮುದ್ದಣ್ಣರಂತೆಯೇ ಹೊಸಗನ್ನಡದ ಬೇಂದ್ರೆ, ಕುವೆಂಪು, ಕೆ. ಎಸ್. ಎನ್., ಜಿ. ಎಸ್. ಶಿವರುದ್ರಪ್ಪ ದಾನಪ್ಪನವರ ಪ್ರವಚನದಲ್ಲಿ ಸ್ವಚ್ಛಂದವಾಗಿ ವ್ಯವಹರಿಸುತ್ತಾರೆ.

ಇವೆಲ್ಲದರ ಜೊತೆಗೆ ಸಂಗೀತವೂ ಅವರಿಗೆ ಪರಿಶ್ರಮದ ಫಲವಾಗಿ ದಕ್ಕಿದೆ. ಅದು ಪ್ರವಚನಕ್ಕೆ ಹೆಚ್ಚಿನ ಮೆರಗು ನೀಡಿದೆ. ಒಬ್ಬ ಸಾಂಸಾರಿಕ ವ್ಯಕ್ತಿಗೆ ವೈಯಕ್ತಿಕ ವಾದ ಒಂದೇ ಜೀವನವಿದ್ದರೆ, ಕಲಾವಿದ ಸಾಮಾಜಿಕ ವೃಕ್ಷಕ್ಕೆ ನೀರೆರೆಯುತ್ತಲೇ ಅದರ ನೆರಳಲ್ಲಿಯೇ ಬದುಕುವಂಥವನು. ಹೀಗಾಗಿ ಅಂಥವರ ಬದುಕು ನಿರಂತರವಾಗಿ ಚಲನಾತ್ಮಕವಾಗಿರುವದು. ಹಲವಾರು ಕಾರ್ಯಕ್ರಮಗಳಿಗಾಗಿ ಸದಾ ಪ್ರವಾಸ ದಲ್ಲಿರುವದು ದಾನಪ್ಪನವರ ಜೀವನದಲ್ಲಿ ಅನಿವಾರ್ಯ. ಇದರ ಜೊತೆ ವಿವಿಧ ಜನತೆಯ ಸಹಯೋಗದಿಂದ ಅವರ ಅನುಭವದ ಕ್ಷೇತ್ರ ಹೆಚ್ಚು ವಿಸ್ತಾರವಾಗುತ್ತ ಬೆಳೆದುಬಂದದ್ದನ್ನು ಕಾಣಬಹುದಾಗಿದೆ. ಈ ಕಾರಣದಿಂದಾಗಿಯೇ ಅನುಭವಿಗಳು ಹೇಳಿದ್ದು "ದೇಶ ಸುತ್ತು ಇಲ್ಲವೆ ಕೋಶ ಓದು" ಎಂದು. ವೈವಿಧ್ಯಮಯ ಬದುಕಿನ ಜನತೆಯೊಂದಿಗೆ ಬಾಳುವಾಗ ಇರಬೇಕಾದ ಶಾಂತಿ, ಸಹನೆಯನ್ನು ಶ್ರೀ ಜತ್ತಿಯವರು ಸಹಜವಾಗಿಯೇ ರೂಢಿಸಿಕೊಂಡಿದ್ದಾರೆ.

'ವಿದ್ಯೆಗೆ ವಿನಯವೇ ಭೂಷಣ' ಎಂಬಂತೆ ವಿನಯಶೀಲರಾದ ದಾನಪ್ಪನವರನ್ನು ಮಾನವೀಯ ದೃಷ್ಟಿಯಿಂದ ಗೌರವಿಸಬೇಕಾದುದು ಹೆಮ್ಮೆಯ ವಿಷಯವೇ ಸರಿ. "ಒಬ್ಬ ರಾಜ ಸ್ವದೇಶದಲ್ಲಿ ಮಾತ್ರ ಗೌರವಿಸಲ್ಪಟ್ಟರೆ ವಿದ್ವಾಂಸರು ಎಲ್ಲೆಡೆಯೂ ಗೌರವಿಸಲ್ಪಡುತ್ತಾರೆ" ಎಂಬ ಸುಭಾಷಿತಗಾರರ ಮಾತು ದಾನಪ್ಪ ಜತ್ತಿಯವರ ವಿಷಯದಲ್ಲಿ ಶತಃಸಹ ಸತ್ಯವಾಗಿ ಪರಿಣಮಿಸಿದೆ.

ಸಮಾಜದ ಈ ಆಸ್ತಿ ಬೆಳೆಯಲಿ, ತನ್ಮೂಲಕವಾಗಿ ಸಮಾಜವೂ ಬೆಳಗುವಂತೆ ಜಗದಾದಿ ಜಗದ್ಗುರು ಪಂಚಾಚಾರ್ಯರು ಹಾಗೂ ಶ್ರೀ ಗುರು ಮಂಚೇಶ್ವರರ ಪೂರ್ಣ ಕೃಪಾದೃಷ್ಟಿ ಶ್ರೀ ದಾನಪ್ಪ ಜತ್ತಿಯವರ ಮೇಲೆ ಇರಲೆಂಬುದೇ ನಮ್ಮ ಆಶಯಪೂರ್ವಕವಾದ ಹಾರೈಕೆ.

# ಪ್ರವಚನ ಕಲಾ ಪ್ರವೀಣ

## ಜಿ. ಎಸ್. ಅನ್ನದಾನಿ

ಸ್ನೇಹ, ಸೌಜನ್ಯ, ಪ್ರೀತಿ, ವಿಶ್ವಾಸ, ಆತ್ಮೀಯತೆ, ನಿರಾಡಂಬರತೆ, ಸಜ್ಜನಿಕೆಗಳ ಸಾಕಾರಮೂರ್ತಿ ದಾನಪ್ಪ. ಕಳೆದ ಇಪ್ಪತ್ತೈದು ವರ್ಷಗಳಿಗೂ ಮಿಕ್ಕಿ ನಮ್ಮಲ್ಲಿ ಸ್ನೇಹದ ಬೆಸುಗೆ. ಜಿಲ್ಲಾ ಬರಹಗಾರ ಬಳಗದ ಸದಸ್ಯರಾಗಿ ಪರಿಚಿತರಾದವರು. ಶಂ. ಗು. ಬಿರಾದಾರರ ನಚ್ಚಿನ, ಮೆಚ್ಚಿನ ಅನುಯಾಯಿ, ನಾಟಕಕಾರ, ಅಭಿನಯ ಪಟು, ಸಂಗೀತಗಾರ, ಕಥೆಗಾರ, ತಿಕೋಟ ಪಂಚಾಯತದ ರಾಜಕೀಯ ಮುಖಂಡ ನಾಗಿ, ಸೂತ್ರಧಾರನಾಗಿ, ಬಹುಮುಖ ಪ್ರತಿಭೆಯ, ಹೊಸ ಹರೆಯದ ಧೀಮಂತ ತರುಣನಾಗಿ ಗೋಚರಿಸಿದ್ದ.

೧೯೬೬ರಲ್ಲಿ ತಿಕೋಟಾದಲ್ಲಿ ಕವಿ ಸಮ್ಮೇಳನ ಸಂಘಟಿಸಿದ ದಾನಪ್ಪನನ್ನು ಅತೀ ಹತ್ತಿರದಿಂದ ಅವನ ಎಲ್ಲಾ ಮುಖಗಳನ್ನು ಚುಟುಕು ಕವಿಯಾಗಿ ಅದರಲ್ಲಿ ಭಾಗವಹಿಸಿದ ನಾನು ಕಂಡುಕೊಂಡಿದ್ದ ಪರಿಚಯ ಸ್ನೇಹಕ್ಕೆ ತಿರುಗಿತ್ತು. ಅಲ್ಲಿಂದ ಇಲ್ಲಿಯವರೆಗೆ ಆ ಸ್ನೇಹ ವಿಶ್ವಾಸಗಳು ಅಬಾಧಿತವಾಗಿಯೇ ಮುಂದುವರೆದಿವೆ. ಆ ಸ್ನೇಹ ವಿಶ್ವಾಸಗಳಲ್ಲಿಯೇ ನಾನು ಹಾಗೂ 'ಶಂ.ಗು.' ಒಂದು ಆತ್ಮೀಯ ಸಲಹೆ ನೀಡಿದ್ದೆವು. "ನೀನು ಎಲ್ಲಾದರಲ್ಲೂ ಕೈಹಾಕುವುದಕ್ಕಿಂತ ನಿನ್ನ ಪ್ರತಿಭೆಯನ್ನು ಒಂದೇ ಕಡೆ ಹರಿಸು. ಸಾಹಿತಿಯಾಗು ಅಥವಾ ನಟನಾಗು ಅಥವಾ ರಾಜಕೀಯ ಮುಖಂಡನಾಗು ಅಥವಾ ಸಂಗೀತಗಾರನಾಗು" ಎಂದು.

ಗಂಡನ ಪ್ರಾಣವನ್ನು ಸೆಳೆದೊಯ್ಯುತ್ತಿದ್ದ ಯಮನನ್ನು ಅನುಸರಿಸಿದ ಸಾವಿತ್ರಿಗೆ "ಏನಾದರೂ ಕೇಳು ಕೊಡುತ್ತೇನೆ. ಗಂಡನ ಪ್ರಾಣವನ್ನು ಮಾತ್ರ ಕೇಳಬೇಡ" ಎಂದ ಯಮರಾಜನಿಗೆ, ತನ್ನ ಬುದ್ಧಿವಂತಿಕೆಯಿಂದ ಅತ್ತೆ–ಮಾವಂದಿರ ಕಣ್ಣುಗಳನ್ನೂ, ಕಳೆದುಹೋದ ಸಾಮ್ರಾಜ್ಯವನ್ನೂ, ಗಂಡನ ಪ್ರಾಣವನ್ನು ಒಂದೇ ಬೇಡಿಕೆಯಲ್ಲಿ ಪಡೆದುಕೊಂಡ ಹಾಗೆ ದಾನಪ್ಪ ಜತ್ತಿ ಕೂಡ ತಮ್ಮ ಬುದ್ಧಿವಂತಿಕೆ ಉಪಯೋಗಿಸಿ ಸಾಹಿತ್ಯ, ಸಂಗೀತ, ನಟನೆ, ಭಾಷಣ ಕಲೆಗಳ ಸಂಗಮವಾಗಿ ಪ್ರವಚನಕಲಾ ಪ್ರವೀಣನಾಗಿ ಇಂದು ಕರ್ನಾಟಕದ ಮೂಲೆ ಮೂಲೆಗಳಲ್ಲಿ ಪ್ರಸಿದ್ಧನಾಗಿದ್ದಾನೆ.

ಅವರ 'ಪ್ರವಚನ ಕಲಾ ಪ್ರವೀಣ' ಬಿರುದಿನ ಅಗ್ಗಳಿಕೆ ಒಂದು ಸ್ಮರಣಾರ್ಹ ಘಟನೆ, ಅವರ ನಮ್ಮ ಸ್ನೇಹದಲ್ಲಿ. ೧೯೭೮ರ ಜುಲೈ ತಿಂಗಳದಲ್ಲಿ ಹುನಗುಂದ

ತಾಲೂಕಿನ ಬೆಳಗಲ್ಲ ಗ್ರಾಮದಲ್ಲಿಯ ಜನರ ಪರವಾಗಿ ನಾನು ಹಾಗೂ ಶ್ರೀ ಸಂಗಪ್ಪ ಶಾಸ್ತ್ರಿ ಅಂಗಡಿ ಶ್ರಾವಣದಲ್ಲಿ ನಡೆಯಲಿರುವ ಪುರಾಣ ಕಾರ್ಯಕ್ರಮಕ್ಕೆ ಯೋಗ್ಯ ಸಮರ್ಥ ಪುರಾಣ ಹೇಳುವವರನ್ನು ಕರೆಯಲು ಆಮಂತ್ರಣ ಕೊಡಲು ಅಧಿಕಾರ ಹೊಂದಿ ಅಂಥವರ ಸಂಶೋಧನೆ ಮಾಡುತ್ತ ಹೊರಟಿದ್ದೆವು.

ಗದಗ, ಕೋಡಿಕೊಪ್ಪ ತಿರುಗಿ ಕೊನೆಗೆ ನವಲಗುಂದಕ್ಕೆ ಬಂದೆವು. ಅಲ್ಲಿ ನನ್ನ ಆತ್ಮೀಯ ಗೆಳೆಯ ಪ್ರೊ. ಸಂಗಮೇಶ ಹಂಡಗಿ ಅವರನ್ನು ಕಂಡಾಗ ಅವರ ಜೊತೆ ಅಲ್ಲಿಯ ಮಠಕ್ಕೆ ಸ್ವಾಮಿಗಳ ದರ್ಶನಕ್ಕೆ ಹೋದಾಗ ಆ ಮಠದಲ್ಲಿ ಈ ಹಿಂದೆ ಪ್ರವಚನ ಮಾಡಿದ ದಾನಪ್ಪ ಜತ್ತಿ ಅವರ ಹೆಸರು ಪ್ರಸ್ತಾಪಕ್ಕೆ ಬಂತು. "ಪುರಾಣ ಏನು ಮಾಡುತ್ತೀರಿ. ಶ್ರೀ ಜತ್ತಿಯವರು ಪ್ರವಚನ ಮಾಡುತ್ತಾರೆ. ಡಾ. ಸಿದ್ಧಯ್ಯ ಪುರಾಣಿಕರ "ಶರಣ ಚರಿತಾಮೃತ" ಅವರ ಬಾಯಲ್ಲಿ ಕೇಳಬೇಕು. ಒಂದು ಹೊಸತನ, ಹೊಸ ವಿಚಾರ, ಹೊಸಪ್ರಜ್ಞೆ ಜನರಲ್ಲಿ ಬೆಳೆಯಲು ಅವಕಾಶವಾಗುತ್ತದೆ" ಎಂದರು. ಸಂಗಮೇಶ ಹಂಡಗಿ ಹಾಗೂ ನಾನು ಹೈಸ್ಕೂಲಿನ ಸಹಪಾಠಿಗಳು. ಅವನ ಬಗ್ಗೆ ನನಗೆ, ನನ್ನ ಬಗ್ಗೆ ಅವನಿಗೆ ಒಂದು ಆತ್ಮೀಯ ವಿಶ್ವಾಸ. ಸಂಗಮೇಶ ಹಂಡಗಿ ಹಾಗೂ ಶ್ರೀ ಸ್ವಾಮಿಗಳ ಒತ್ತಾಯ ಮತ್ತು ದಾನಪ್ಪ ಜತ್ತಿ ಹಳೆಯ ಸ್ನೇಹಿತರು ಅವರಿಗೆ ಯಾಕೆ ಅವಕಾಶ ಕೊಡಬಾರದು ಎನ್ನುವ ಕುತೂಹಲ. ಹೀಗಾಗಿ ಪುರಾಣದ ವಿಚಾರ ಬಿಟ್ಟು ಪ್ರವಚನ ಹೇಳಲು ನಿರ್ಧಾರ ಮಾಡಿ ನೇರವಾಗಿ ತಿಕೋಟಾಕ್ಕೆ ಹೋಗಿ ಅವರನ್ನು ಕಂಡು ಆಮಂತ್ರಣ ಕೊಟ್ಟು ಬಂದೆವು.

ಪುರಾಣ ಪ್ರಿಯರಾದ ಹಳ್ಳಿಯ ಜನರಿಗೆ ಇದು ರುಚಿಸುತ್ತದೆಯೋ ಇಲ್ಲವೋ ಎನ್ನುವ ಎದೆಗುದಿ ನನ್ನ ಆತ್ಮೀಯರಾದ ಶ್ರೀ ದಾನಪ್ಪ ಶಾಸ್ತ್ರಿಗಳಿಗೆ. ನನಗೆ ಒಂದು ತೆರನ ಕುರುಡು ವಿಶ್ವಾಸ – ದಾನಪ್ಪನಲ್ಲಿ ಪ್ರತಿಭೆಯಿದೆ. ಸಂಗೀತ, ಸಾಹಿತ್ಯದ ಜೊತೆಗೆ ಹಾಸ್ಯ ಪ್ರಜ್ಞೆಯಿದೆ. ಯಶಸ್ವಿಯಾಗುತ್ತಾರೆ ಎಂದು ತಿಳಿಸಿ ಹೇಳಿದೆ.

ಬೆಳಗಲ್ಲಿನ ಶ್ರೀ ವಿಜಯ ಮಹಾಂತೇಶ ಮಠದಲ್ಲಿ ಅಂದು ಪ್ರವಚನ ಪ್ರಾರಂಭ. ದಾನಪ್ಪ ಜತ್ತಿ ಮಂಟಪದಲ್ಲಿ ಆಸೀನರಾದರು. ಅವರನ್ನು ನೋಡಿದ ಅನೇಕರು. "ಅಯ್ಯೋ ತೆಳ್ಳಗೆ ಇದ್ದಾನೆ. ಇವ ಏನು ಹೇಳ್ತಾನೆ ?" ಎಂದು ಅಪಹಾಸ್ಯಗೈದರು. ಆದರೆ ದಾನಪ್ಪ ಹುಸಿಗೊಳಿಸಲಿಲ್ಲ ನನ್ನ ನಂಬಿಕೆಯನ್ನು. ಸಿದ್ಧಯ್ಯ ಪುರಾಣಿಕರ "ಶರಣ ಚರಿತಾಮೃತ" ಅವರ ಬಾಯಲ್ಲಿ ಅಮರವಾಯಿತು. ತಿಮ್ಮನ ತಲೆಯ ಹಾಸ್ಯ ಚಟಾಕಿಗಳನ್ನು ನಡುನಡುವೆ ಹೇಳುತ್ತ ತಮ್ಮ ಸಂಗೀತ, ಸಾಹಿತ್ಯ, ನಟನೆ, ಕಥಾ ನಿವೇದನೆ ತಂತ್ರಗಳಿಂದ ಬೆಳಗಲ್ಲು ಮಾತ್ರವಲ್ಲ ಸುತ್ತಲಿನ ಹತ್ತು ಹಳ್ಳಿಗಳ

ಸಮಸ್ತ ನಾಗರಿಕರ ಮನಸೂರೆಗೊಂಡರು. ಪ್ರವಚನ ಮುಕ್ತಾಯಕ್ಕೆ "ಪ್ರವಚನ ಕಲಾ ಪ್ರವೀಣ" ಎನ್ನುವ ಬಿರುದು, ಶ್ರೀ ಮ.ನಿ.ಪ್ರ.ಸ್ವ. ಸದಾಶಿವ ಸ್ವಾಮಿಗಳು ಹಾನಗಲ್ಲ ಅವರ ಅಧ್ಯಕ್ಷತೆಯಲ್ಲಿ, ಶ್ರೀ ಜಗದ್ಗುರು ತೋಂಟದಾರ್ಯ ಮಹಾಸ್ವಾಮಿಗಳು ಅವರಿಂದ, ಶ್ರೀ ವಿಜಯ ಮಹಾಂತಸ್ವಾಮಿಗಳು. ಇಳಕಲ್ಲ ಇವರ ನೇತೃತ್ವದಲ್ಲಿ ದೊರೆಯಿತು.

ಪ್ರವಚನ ಕಲೆಯಲ್ಲಿ ದಾನಪ್ಪ ಜತ್ತಿ ಈಗ ಕರ್ನಾಟಕದಲ್ಲಿ ಹೆಸರಿಸಬಹುದಾದ ಒಂದು ಹೆಮ್ಮೆಯ ಹೆಸರು.

## ಮಹೇಶಕುಮಾರ ಎಂ. ಗಣಾಚಾರಿಮಠ

ಜೀವನದಲ್ಲಿ ನಿಜವಾದ ಸುಖವು ಸಿಗುತ್ತಿದ್ದರೆ ಅದು ಭೋಗದಿಂದಲ್ಲ. ತ್ಯಾಗದಿಂದ ಮಾತ್ರ ಎಂಬಂತೆ, ನಿಸ್ವಾರ್ಥ ಕಲಾಪ್ರೇಮಿಯಾಗಿರುವ ದಾನಪ್ಪ ಜತ್ತಿಯವರು ಇಂದು ಇಷ್ಟೊಂದು ಜನಪ್ರಿಯತೆಯನ್ನು ಗಳಿಸಬೇಕಾದರೆ ಅವರ ತ್ಯಾಗವೇ ಇದಕ್ಕೆ ಕಾರಣ ಎಂಬುದರಲ್ಲಿ ಸಂದೇಹವಿಲ್ಲ.

ದಾನಪ್ಪನವರು ಧಾರ್ಮಿಕ ಕ್ಷೇತ್ರದಲ್ಲಿ ಸಲ್ಲಿಸಿದ ಸೇವೆಯನ್ನು ಗಮನಿಸಿದರೆ ಅವರಲ್ಲಿರುವ ತಾತ್ವಿಕ ನಿಷ್ಠೆ ಮತ್ತು ಧರ್ಮದ ಬಗ್ಗೆ ಅವರಲ್ಲಿರುವ ಸಹಾನುಭೂತಿ, ವೀರಶೈವ ತತ್ತ್ವದ ನಿಲುವನ್ನು ಸ್ಪಷ್ಟವಾಗಿ ಗುರುತಿಸಬಹುದು. ಧಾರ್ಮಿಕ ನಿಲುವಿನ ಜೊತೆಜೊತೆಗೆ ಸಾಮಾಜಿಕ, ಸಾಂಸ್ಕೃತಿಕ ಸೃಷ್ಟಿಯಲ್ಲಿ ಅವರು ಮಾಡಿದ ಕಾರ್ಯಗಳು ಮಹತ್ತರವಾಗಿವೆ. "ಅಧ್ಯಾತ್ಮ ಎಂಬುದು ನಿಷ್ಕ್ರಿಯತೆಯಲ್ಲ; ಕ್ರಿಯಾಶೀಲತೆಯ ಕಳಶ" ಎಂಬುದನ್ನು ತೋರಿಸಿಕೊಟ್ಟ ಯಶಸ್ಸು ಅವರದು.

ಅಲ್ಲದೆ ಶರಣ ಸಾಹಿತ್ಯದಲ್ಲಿ, ವೀರಶೈವ ತತ್ತ್ವಾಚರಣೆಯಲ್ಲಿ ಅವರು ಮಾಡಿರುವ ಸೇವೆ ಗಣನೀಯವಾದುದು. ಅವರು ತಮ್ಮ ಕಲಾಪ್ರತಿಭೆಯಿಂದ ಕನ್ನಡ ಜನತೆಗೆ, ಶಿವಭಕ್ತರಿಗೆ ಸೌಜನ್ಯಪೂರ್ಣ ಬದುಕಿನ ದಾರಿ ತೋರಿಸಿದರು.

ನಾನು – ನನ್ನ ಜೀವನದಲ್ಲಿ ಮರೆಯಲಾರದ ಒಂದು ದಿನ ಅದು. ದಾನಪ್ಪನವರು ಮಹಾರಾಷ್ಟ್ರದ ಗಡಹಿಂಗ್ಲಜ ನಗರದಲ್ಲಿ ನಡೆಸಿದ "ಪ್ರಭುಲಿಂಗಲೀಲೆ" ಪ್ರವಚನ ನನ್ನನ್ನು ಧನ್ಯಗೊಳಿಸಿದೆ. ಅಲ್ಲದೆ ಚಿಕ್ಕೋಡಿಯ ಚಿಂಚಣಿ ಗ್ರಾಮದಲ್ಲಿ ದಾನಪ್ಪನವರ 'ಬಸವಪುರಾಣ' ಕೇಳಿ ಬದುಕನ್ನು ಸಾರ್ಥಕಗೊಳಿಸಿಕೊಂಡಿರುವೆ.

ದಾನಪ್ಪನವರು ತಾವು ಗಳಿಸಿಕೊಂಡಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯದಲ್ಲಿ ಬಿತ್ತಿ ಬೆಳೆ ತೆಗೆಯುವಲ್ಲಿ ಸಫಲತೆಯನ್ನು ಗಳಿಸಿಕೊಂಡಿದ್ದಾರೆ. ರಾಜ್ಯದ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯಕ್ಷೇತ್ರಗಳಲ್ಲಿ ನಿರತರಾಗಿ ಜನರಿಗೆ ಧಾರ್ಮಿಕ ಮಾರ್ಗದರ್ಶನ ಮಾಡಿ ಯಶಸ್ಸು ಸಂಪಾದಿಸಿದ್ದಾರೆ. ತಮ್ಮ ಸ್ವಾನುಭವವೇ ಒಂದು ಶಿವಾನುಭವವನ್ನಾಗಿ ರೂಢಿಸಿಕೊಂಡಿರುವ ಅವರು ಅದನ್ನೇ ಪ್ರವಚನದ ಮೂಲಕ ಬಿತ್ತರಿಸಿ ಮನುಷ್ಯನ ಬದುಕನ್ನು ಸತ್‌ಪಥದತ್ತ ನಡೆಸುವಲ್ಲಿ ಯಶಸ್ಸು ಗಳಿಸಿದ್ದಾರೆ. ಧಾರ್ಮಿಕದ ದಾರಿದೀಪವಾಗಿ ಜನತೆಯ ಹೊಸ ಬದುಕಿಗೆ ಕ್ರಿಯಾಶೀಲತೆ ನೀಡುವಲ್ಲಿ ಗೆಲುವು ಸಂಪಾದಿಸಿದ್ದಾರೆ.

ವೀರಶೈವ ಧರ್ಮದ ಸಮಷ್ಟಿ ವ್ಯಕ್ತಿತ್ವವನ್ನು ತೆರೆದು ತೋರುವಲ್ಲಿನ ದಾನಪ್ಪನವರ ಪ್ರಜ್ಞೆ ತುಂಬಾ ಪ್ರಶಂಸನೀಯ. ತಮ್ಮ ಕೋಗಿಲೆಯ ಕಂಠದಿಂದ, ಹಾಸ್ಯ ಚಾತುರ್ಯದಿಂದ, ಜನತೆಯ ಹೃದಯ ಗೆದ್ದ ಅವರು ಧರ್ಮದ ಸೇವೆಯಿಂದ, ಶರಣರ ವಚನಗಳ ಮೂಲಕ, ಕನ್ನಡಿಗರ ಹೃದಯದಲ್ಲಿ ಮೂರ್ತಗೊಂಡು, ಕೀರ್ತಿಗೊಂಡು ನಿಂತಿದ್ದಾರೆ.

ಜನಾನುರಾಗಿಗಳಾದ ದಾನಪ್ಪನವರು ನಿಜವಾಗಿಯೂ ಅಭಿನಂದನೆಗೆ ಅರ್ಹರು. ಅವರನ್ನು ಸರಕಾರ ಗುರುತಿಸಬೇಕು. ಸನ್ಮಾನಿಸಬೇಕು. ಅವರ ಆಯುರಾರೋಗ್ಯ ಹೆಚ್ಚಿ ಬದುಕಿಗೆ ಹಸಿರು ಮೂಡಿಸಬೇಕು. ದಾನಪ್ಪ ಜತ್ತಿಯವರು ಈ ಪಥವಲ್ಲೇ ನಡೆದು, ಕತ್ತಲೆ ಕಳೆದು. ಬೆಳಕು ನೀಡುವ ಸೂರ್ಯ – ಚಂದ್ರರಾಗಲಿ ಎಂದು ಹಾರೈಸುವೆ.

# ಭಾವಪೂರ್ಣ ಅಭಿನಯ ಚತುರ

## ಶಿವಲಿಂಗಶಾಸ್ತ್ರಿ ಹಿರೇಮಠ

೧೯೭೪ ರಲ್ಲಿ ಶ್ರೀ ಶಿವಲಿಂಗೇಶ್ವರ ನಾಟ್ಯ ಸಂಘ, ಸಂಕನೂರ ಈ ಕಲಾ ಸಂಸ್ಥೆಯನ್ನು ಕಟ್ಟಿಕೊಂಡು ನಾನು ಅಲ್ಲಲ್ಲಿ ಸಂಚರಿಸುತ್ತ ೧೯೭೫ ರಲ್ಲಿ ಎಪ್ರಿಲ್ ತಿಂಗಳು ತಿಕೋಟಾಕ್ಕೆ ಹೋದೆ. ನಾನು ಆ ಮೊದಲು ಎಂದೂ ನೋಡದ ಊರಿಗೆ ಹೋಗಿ ಥಿಯೆಟರ್ ಹಾಕಲು ಸ್ಥಾನ, ನಾಟಕವಾಡಲು ಪರವಾನಗಿ ಕೇಳಿದೆ. ಸಮೀಪದಲ್ಲಿ ನಿಂತಿದ್ದ ವ್ಯಕ್ತಿ "ಅಯ್ಯೊ ಸ್ವಾಮಿ, ಈ ಊರಿನಲ್ಲಿ ಮೊನ್ನೆ ತಾನೆ ಸಿನೆಮಾ ಲುಕ್ಸಾನ ಆಗಿ ನಿಂತು ಹೋಗಿದೆ. ಇನ್ನು ನಿಮ್ಮ ನಾಟಕ ಇಲ್ಲಿ ನಡೆಯೋದಿಲ್ಲ" ಎಂದು ಹೇಳಿದ.

ಅಷ್ಟರಲ್ಲಿಯೇ ಅಂದಿನ ಪಂಚಾಯ್ತಿ ಚೇರಮನ್ನರು ಅಲ್ಲಿಗೆ ಬಂದರು. ನಾನು ನಿರಾಶನಾಗಿ ಊರಿಗೆ ಹೊರಟಿದ್ದೆ. "ಸ್ವಾಮಿ ಇಲ್ಲಿ ಬನ್ನಿರಿ, ಇದು ನಾಟಕದ ಸ್ಟೇಜ್ ಹಾಕುವ ಜಾಗೆ, ಇದೋ ತೆಗೆದುಕೊಳ್ಳಿ ಪಂಚಾಯ್ತಿ ಪರವಾನಗಿ ಪತ್ರ, ನಿಮಗೆ ಸರ್ವರೀತಿ ಪ್ರೋತ್ಸಾಹ ನಾವು ನೀಡುತ್ತೇವೆ. ನಮ್ಮೂರಿಗೆ ಬನ್ನಿರಿ" ಎಂದರು.

ನಾನು ಆನಂದ ಆಶ್ಚರ್ಯದಿಂದ ಆ ವ್ಯಕ್ತಿಯನ್ನೇ ನಿಟ್ಟಿಸಿ ನೋಡಿದೆ. **"The sound body in the sound mind"** ಎಂದು ವಿವೇಕಾನಂದರು ಹೇಳುವಂತೆ, ಎತ್ತರ ನಿಲುವಿನ ಹಿರಿಗುಣದ ಸಮಚಿತ್ತದ ಶಾಂತನಿಧಿಯ ಕಂಡೆ. ಆಹಾ ! ಆ ಮುಖದಲ್ಲಿ ನೊಂದು ಬೆಂದು ಬಂದವರಿಗೆ ಸಾಂತ್ವನ ನೀಡುವ ಕರುಣಾರಸ ಉಕ್ಕುತ್ತಿತ್ತು. ನಾನು ಮನದಲ್ಲಿ ಯೋಚಿಸಿದೆ. ಈ ವ್ಯಕ್ತಿ ಯಾರಿರಬಹುದು ? ಇವರೇ ಲಿಂಗನೇಮಿ ಜಂಗಮಪ್ರೇಮಿ, ಸಂಗೀತ ಸಾಹಿತ್ಯಕಲಾ ಪ್ರೇಮಿ ಶ್ರೀ ದಾನಪ್ಪ ಜತ್ತಿ. ಅನುಕಂಪದ ಅಮೃತ ನೀಡಿದ ಕರುಣಾಮೂರ್ತಿ.

ಇವರ ಆಶ್ರಯ ದೊರಕಿ ನನ್ನ ಕಲಾ ಸಂಸ್ಥೆ ಬಮಕಿ ಮುನ್ನಡೆಯಿತು. ಸಂಸ್ಥೆಗೆ ಹೊಸ ಚೇತನ ಮೂಡಿಬಂತು. ಅಬ್ಬರದ ನಾಟಕ ಪ್ರಯೋಗ ನಡೆಯಿತು. ನನ್ನದು ಪುಟ್ಟ ನಾಟ್ಯ ಸಂಸ್ಥೆ. ಸೀನ್ಸುಗಳು ಸಾಧಾರಣ. ಕಲಾವಿದರ ಕೊರತೆ ಬೇರೆ. ಆದರೂ ಇದ್ದುದ್ದರಲ್ಲಿಯೇ ಅಚ್ಚುಕಟ್ಟು. ಚಿಕ್ಕದಾಗಿದ್ದರೂ ಚೊಕ್ಕವಾಗಿತ್ತು. ಒಂದು ದಿನ ರೇಣುಕಾ (ಎಲ್ಲಮ್ಮ) ನಾಟಕದ ತಾಲೀಮು (ಪ್ರ್ಯಾಕ್ಟಿಸ್) ನಡೆದಾಗ ತಿಕೋಟಾದ ಗಣ್ಯವರ್ತಕರು, ರಂಗಭೂಮಿಯ ಶ್ರೇಷ್ಠ ಕಲಾವಿದ. ದಿ. ಹಂದಿಗನೂರ ಸಿದ್ರಾಮಪ್ಪನವರ ಗರಡಿಯಲ್ಲಿ ಪಳಗಿದ ಕಲಾವಿದ ಶ್ರೀ ಇಜೇರಿ ಈರಪ್ಪನವರು "ಶಾಸ್ತ್ರಿಗಳೆ ನಿಮ್ಮ ಕಂಪನಿಗೆ ಇನ್ನ ಹೆಚ್ಚಿನ ಕಲೆಕ್ಷನ್ ಆಗುತ್ತದೆ,

ಶ್ರೀ ದಾನಪ್ಪನವರನ್ನು ಪಾತ್ರ ಮಾಡಿಸಿರಿ. ನಾನು ಹಾರ್ಮೋನಿಯಂ ಬಾರಿಸುವೆ" ಎಂದು ಸಲಹೆ ನೀಡಿದರು. ಶ್ರೀ ಜತ್ತಿಯವರನ್ನು ಕರೆಸಿ ಒಪ್ಪಿಸಿದರು.

ನನ್ನ ಸಹೋದರ ವ್ಹಿ. ವ್ಹಿ. ಶಾಸ್ತ್ರಿಗಳು ಜಮದಗ್ನಿ, ಡಿ. ಅನುರಾಧಾ ರೇಣುಕಾ, ನಾನು ಪರಶುರಾಮ, ಶ್ರೀ ಜತ್ತಿ ವಾಲಖಿಲ್ಯನ ಪಾತ್ರ. ತಿಕೋಟಾ ಜನರ ಕಣ್ಣುಗಳಿಗೆ ಹಬ್ಬ ತುಂಬಿತು. ನಾಟಕದ ದಿಬ್ಬ ಜತ್ತಿಯವರ ಅಭಿನಯ ಅಬ್ಬಾ ! ಕಲಾಪ್ರೇಮಿಗಳಿಗೆ ಸಿಹಿಕಬ್ಬು, ಬಿಟ್ಟೋಡಿತು ಮನದ ಮಬ್ಬು, ವಾಲಖಿಲ್ಯ ನಿಗೆ ಗುರು, ದೈವ, ಬಂಧು ಬಳಗ ಸರಲವೂ ಆದ ಜಮದಗ್ನಿ ಮಹರ್ಷಿಯನ್ನು ಕಾರ್ತವೀರ್ಯಾರ್ಜುನನ ಮಕ್ಕಳು ಬ್ರಾಹ್ಮಣವೇಷದಲ್ಲಿ ಬಂದು ಕೊಲೆಗೈದರು ಎಂದು ಪರಶುರಾಮನಿಗೆ ಹೇಳುವ ಸನ್ನಿವೇಶದಲ್ಲಿ ನಾನು ರಂಗಭೂಮಿಯಲ್ಲಿ ಹಿಂದೆಂದೂ ನೋಡದ ನೂತನ ಅಭಿನಯ ನೀಡಿ, ನನ್ನ ಕಣ್ಣಲ್ಲಿ ಕರುಣರಸ ಕಂಬನಿ ಚಿಮ್ಮಿಸಿದರು ಭಾವದುಂಬಿ ಅಭಿನಯಿಸಿ, ಕರುಣೆ ವಾಲಖಿಲ್ಯನ ಪಾತ್ರದಲ್ಲಿ ಶ್ರೀ ದಾನಪ್ಪ ಜತ್ತಿಯವರು. ಆ ಅಭಿನಯಕ್ಕೆ ಮನಸ್ಸು ಮಾರುಹೋಯಿತು. ಮಾತು ಮೌನವಾಯಿತು. ಕಂಗಳು ಕಂಬನಿ ಮಿಡಿಯಿತು. ಸನ್ನಿವೇಶದಿಂದ ಒಳಗೆ ಬಂದೆ. ಜತ್ತಿಯವರನ್ನು ಕಂಡು ಅಪ್ಪಿದೆ. ಆನಂದಪಟ್ಟೆ. ಆ ನೆನಪು ಇಂದಿಗೂ ನನ್ನ ಮನದಲ್ಲಿ ಹಸಿರಾಗಿದೆ. ಕೇವಲ ಎರಡೇ ದಿನದಲ್ಲಿ ಪಾತ್ರದ ಸಂಭಾಷಣೆಗಳನ್ನು ಚೆನ್ನಾಗಿ ಕಲಿತು, ಪಾತ್ರಕ್ಕೆ ಜೀವಕಳೆಕೊಟ್ಟು, ಜನಮನ ಸೂರೆಗೊಂಡು ಚನ್ನಾಗಿ ಅಭಿನಯಿಸಿದವರು ಜತ್ತಿಯವರು.

ತಿಕೋಟಾದಲ್ಲಿ ಇರುವಾಗ ಅಥಣಿ ಶಿವಯೋಗಿ ಕೃಪೆಯಿಂದ, ನನ್ನ ಬಾಳಬಳ್ಳಿ, ಬಾಳಿನ ಹಂದರಕ್ಕೆ ಹಬ್ಬಿ ಹೂ ಅರಳುವ ಕಾಲ ಬಂತು. ಕಲಾವಿದನ ವಂಶವಲ್ಲರಿ ಚಿಗುರೆಡೊಡುವ ಕಂಡು, ಮಾತೃ ಹೃದಯದ ಜತ್ತಿಯವರು ನನ್ನ ಕುಟುಂಬ ಪರಿವಾರಕ್ಕೆ, ಕಲಾ ಸಂಸ್ಥೆಯ ಕಲಾವಿದರಿಗೆ, ಭೂರಿ ಭೋಜನ ಮಾಡಿಸಿ, ನನಗೂ ನನ್ನ ಪತ್ನಿಗೂ ಉಡುಗೊರೆಕೊಟ್ಟು ಸತ್ಕರಿಸಿ, ನನ್ನವಳಿಗೆ ಅಕ್ಕರೆಯ ಅಣ್ಣನಾಗಿ, ನನಗೆ ಮಮತೆಯ ಬಂಧುವಾಗಿದ್ದಾರೆ. ಸಂಭ್ರಮದ ಸೀಮಂತ ಕಾರಣ ಮಾಡಿ ನನ್ನ ಪತ್ನಿಗೆ ತವರುಮನೆಯ ಪ್ರೀತಿ ಉಣಿಸಿ ತಣಿಸಿದರು.

"ಮಾತೃ ಪುಣ್ಯೇನ ಸುಶೀಲತಾ । ಪಿತೃಪುಣ್ಯೇನ ಚತುರತಾ ।
ವಂಶ ಪುಣ್ಯೇನ ಉದಾರತಾ ॥"

ತಂದೆ-ತಾಯಿ ವಂಶದ ಪುಣ್ಯದಿಂದ ದಾನಪ್ಪ ಜತ್ತಿಯವರು ಸುಶೀಲರು, ಉದಾರಿಗಳು ಚತುರಮತಿಗಳು ಆಗಿದ್ದಾರೆ. ಬಸವ ತತ್ತ್ವ ಸಾರಿದ ವೀರಮಹಿಳೆ, ಶಿವಶರಣೆ ಗುಡ್ಡಾಪುರ ವರದಾನಿಯಮ್ಮನ ಕೃಪೆಯಿಂದ ದಾನಪ್ಪನವರು ಬಸವ ತತ್ವಕ್ಕೆ ತಮ್ಮನ್ನು ತಾವು ಸಂಪೂರ್ಣ ಅರ್ಪಿಸಿಕೊಂಡಿದ್ದಾರೆ. ಕನ್ನಡದ ಉದ್ದಾಮ

ಕವಿಗುರು. ಪೂಜ್ಯ ಜ.ಚ.ನಿ. ಯವರ ಆಶೀರ್ವಾದ, ಗುರುಲಿಂಗಜಂಗಮರ ಅನುಗ್ರಹಕ್ಕೆ ಪಾತ್ರರಾಗಿದ್ದಾರೆ. ಹಾಲು ಹೃದಯದ ದಾನಪ್ಪ ಜತ್ತಿಯವರು ಕಲಾವಿದರಿಗೆ ಕಲ್ಲು ಸಕ್ಕರಿಯಾಗಿದ್ದಾರೆ. ಅವರ ಮಾತು ಜೇನಿನ ಮಳೆ, ಹಾಲಿನ ಹೊಳೆ, ನಾಡಿಗರಿಗೆ ಸಿಹಿ ನೀರಿನ ಸೆಲೆ. ತಿಳಿದು ಬಂತು ಭಕ್ತಿಯ ಬೆಲೆ. ಸರಕಾರ ಅರಿಯಲಿ ಕಲಾವಿದನ ಕಲೆ. ಶ್ರೀ ಜತ್ತಿಯವರು ಕರ್ನಾಟಕದ ಕೀರ್ತಿ ಕಲೆಯ ಸ್ಫೂರ್ತಿ, ಬಸವಪುರಾಣದ ಶಕ್ತಿ, ಈ ಧೀಮಂತ ವ್ಯಕ್ತಿ ಗುರುಪಾದದಲಿ ಅಪಾರ ಭಕ್ತಿ. ಈ ಮೂರ್ತಿ ಬೀಚಿಯವರ ತಿಮ್ಮನನ್ನು ಓದ ಬಲ್ಲವರು, ಓದಿ ತಮಗೆ ತಾವೇ ನಕ್ಕರೆ. ಆ ನಗೆಯ ಹೊನಲು ಜನಸಾಮಾನ್ಯರ ಹೃದಯಕ್ಕೆ ತಲುಪಿಸಲು ತಿಮ್ಮನನ್ನು ತಮ್ಮ ಗೆಳೆಯನನ್ನಾಗಿ ಮಾಡಿಕೊಂಡು. ಪ್ರವಚನದಲ್ಲಿ ಕರೆತಂದ ಶ್ರೇಷ್ಠ ಪುರಾಣಿಕರು. ಡಿವಿಜಿಯವರ ಮಂಕುತಿಮ್ಮನನ್ನು ಇವರಿಗೆ ಸಹಾಯಕನಾಗಿ ಸ್ವತಂತ್ರಧೀರ, ಸಿದ್ಧೇಶ್ವರರಾಗಿ, ಕೂಡಲ ಸಂಗನ ಶರಣರ ಚರಿತಾಮೃತದ ಸುಧಾರಸ ಉಣಿಸಿ, ತಣಿಸಿ. ಜನಮನ ಸರೋವರ ತಿಳಿಯಾಗಿಸಿದ್ದಾರೆ. ಇವರಿಗೆ ೫೫ ವರುಷ ಹರುಷ ತಂದಿವೆ. ೫ ಕರ್ಮೇಂದ್ರಿಯ, ೫ ಜ್ಞಾನೇಂದ್ರಿಯ ಗೆದ್ದರು ಜತ್ತಿಯವರು. ೫೫ ವಸಂತಗಳನ್ನು ಮೆಟ್ಟಿದ ಶ್ರೀ ದಾನಪ್ಪ ಜತ್ತಿ ನೂರಾರು ವಸಂತ ಕಾಣಲಿ ಎಂದು ಗವಿಸಿದ್ಧನಲ್ಲಿ ಪ್ರಾರ್ಥಿಸುವೆ.

# ತಿಂಮನಿಂದ ತೀರ್ಥದವರೆಗೆ

## ಪ್ರೊ. ಬಿ. ಆರ್. ಪೋಲಿಸ್‌ಪಾಟೀಲ

"ಕುಂಬಾರನಿಗೆ ವರುಷ" ಎಂಬುದು ತುಂಬ ಗೂಢ. ಗುಹ್ಯ ಮತ್ತು ಅರ್ಥ ಪೂರ್ಣವಾದ ಮಾತು. ಒಬ್ಬ ಕಲಾಕಾರ ಒಂದು ಕೃತಿಯನ್ನು ಕಲಾಕೃತಿ ಯನ್ನಾಗಿಸಲು ವರ್ಷಗಳನ್ನೇ ತೆಗೆದುಕೊಂಡರೂ ಆ ಕೃತಿ ಅವನಿಗೆ ತೃಪ್ತಿ ಕೊಡದೇ ಇರಬಹುದು. ಇಂಥ ಅತೃಪ್ತಿ ಇರಬೇಕಾದದ್ದೆ. ಯಾಕೆಂದರೆ ಅತೃಪ್ತಿಯಲ್ಲೇ ಅಭಿವೃದ್ಧಿಯ ಬೇರು ಇಳಿಯುವುದು, ಸಸಿ ಮೊಳೆಯುವುದು, ಮರ ಬೆಳೆದು ಹೆಮ್ಮರವಾಗುವುದು. ಬೆಳೆವವಗೆ ಹಸಿವು ಹೆಚ್ಚಬೇಕು. ಮತ್ತೆ ಮತ್ತೆ ಉಣ್ಣು ವಂತೆನಿಸಬೇಕು. ಉಂಡದ್ದನ್ನು (ಕಂಡದ್ದನ್ನು) ಜೀರ್ಣಸಿಕೊಂಡು ರಕ್ತವಾಗಿಸಿ ಕೊಳ್ಳಬೇಕು. ಅಂದಾಗಲೆ ಶರೀರಕ್ಕೆ ಕಳೆ ಬರುವುದು, ವ್ಯಕ್ತಿತ್ವಕ್ಕೆ ಮಿಂಚು ಬರುವುದು. ಆಗಲೇ ಆ ಕಲಾಕೃತಿಯನ್ನು. ಕಲಾಕಾರನನ್ನು. ಜನ ನಿಂತು ನೋಡುವುದು ಸಾಧ್ಯವಾಗುತ್ತದೆ. ಈ ಮಾತುಗಳನ್ನು ನಾನು, ಜತ್ತಿ ಅವರು ಜತ್ತಿ ದಾನಪ್ಪನಿಂದ ಶ್ರೀ ದಾನಪ್ಪ ಜತ್ತಿ ಶಾಸ್ತ್ರಿಗಳಾಗಿ ಬೆಳೆದ ಪರಿಯ ಕುರಿತು ಹೇಳುತ್ತಿದ್ದೇನೆ. ಒಂದು ಸಾಮಾನ್ಯ ಕುಟುಂಬದಲ್ಲಿ ಜನಿಸಿ. ಅಷ್ಟೇ ಸಾಮಾನ್ಯ ಮಟ್ಟದ ಶಿಕ್ಷಣ ಪಡೆದು ಪ್ರಪಂಚ ಸಾಗರದಲ್ಲಿ ಬಿದ್ದು ಒದ್ದಾಡಿ ಇಲ್ಲಿ ಸಲ್ಲದವನೆಂದೆನ್ನಿ ಸಿದರೂ ಕೇವಲ ಹಸಿವಿನಿಂದಾಗಿ, ನಿರಂತರ ಹಸಿವಿನಿಂದಾಗಿ, ಅಧ್ಯಯನಶೀಲತೆ ಯಿಂದಾಗಿ ಎಲ್ಲ ಕಡೆಗೂ ಸಲ್ಲುವಂತಾಗಿರುವುದು ನನಗೆ ಸಣ್ಣ ಮಾತೆನ್ನಿಸುವುದಿಲ್ಲ.

ಕಳೆದ ಹತ್ತು ವರ್ಷಗಳ ಅವಧಿಯಲ್ಲಿ ನಾನು ಕೇಳಿದ ಅವರ ಎರಡು ಉಪನ್ಯಾಸಗಳಲ್ಲಿ ಕಂಡುಕೊಂಡ ವ್ಯತ್ಯಾಸ ನನ್ನ ಮಾತುಗಳಿಗೆ ಸಾಕ್ಷಿ ಒದಗಿಸುತ್ತವೆ. ಅಂದು ಮತ್ತು ಇಂದು (ಮುಂದೆ ಹೀಗಾಗಲಿಕ್ಕಿಲ್ಲ) ಜತ್ತಿಯವರ ಭಾಂಡವಲು ತಿಂಮ. ಆದರೆ ತಿಂಮನ ಜೊತೆಗೆ ಬೆಳೆದ ದಾನಪ್ಪ ಶಾಸ್ತ್ರಿಗಳ ಪರಿಶ್ರಮ ಅಗಾಧ ವೆನ್ನಿಸುವಷ್ಟು. ಆರಂಭದ ಹಂತದಲ್ಲಿ ದಾನಪ್ಪ ತಿಂಮನ ದಾಸನಾಗಿದ್ದರೆ ಈಗ ತಿಂಮ ಶಾಸ್ತ್ರಿಗಳ ಗುಲಾಮ ಎನ್ನಿಸುತ್ತಿರುವುದು ಯಾರಿಗೂ ಅಚ್ಚರಿಯನ್ನುಂಟು ಮಾಡುವಂಥದು.

ತಿಂಮ ನಮಗೆಲ್ಲ ತಿಳಿದಿರುವಂತೆ, ಬಳ್ಳಾರಿ ಬೀchiಯವರ ಮಾನಸಪುತ್ರ. ತಿಕೋಟಿಯ ದಾನಪ್ಪ ಜತ್ತಿಯವರು ಬೀchiಯವರ ಆರಾಧಕ; ತಿಂಮನ ಪ್ರಿಯ ಬಂಧು; ಶ್ರವಣ, ಅಧ್ಯಯನ, ಚಿಂತನ, ಮನನಗಳಲ್ಲಿ ಒಲವು ತೋರುತ್ತ ಬಂದ ದಾನಪ್ಪನವರು ಇಂದು ನಾಡೆಲ್ಲ ಕೊಂಡಾಡುವಂತಾದ ಕೀರ್ತನಕಾರರಾಗಿರುವುದು ಈ ಗುಣಗಳಿಂದಾಗಿಯೇ.

ಬೀchi ಯವರ ತಿಂಮ ಕೇವಲ ಅವರ ಹಾಸ್ಯ ಪ್ರವೃತ್ತಿಯ ವಾಹಕನಾಗಿರದೆ ಸಮಾಜ ಘಾತುಕರಿಗೆ, ಮನೆಮುರುಕರಿಗೆ ಚಾಟಿಯಾಗಿದ್ದಾನೆ. ಬದುಕಿನ ಗಂಭೀರತೆಯ ನಡುವೆ, ದುರ್ಭರತೆಯ ಅಡಿಗೆ, ಅವರ ಕಪಿಮುಷ್ಠಿಯ ಒಳಗೆ ಸಿಕ್ಕು ನರಳುತ್ತಿರುವ ಶ್ರೀಸಾಮಾನ್ಯನ ಚಾಕ್ಷುಷ ಸ್ವರೂಪವೇ ಆಗಿ ತಿಂಮ ಆವಿರ್ಭವಿಸಿ ಬಂದದ್ದು. "ಎಲ್ಲಿದೆ ನಗೆ ಈ ನರಕದ ಮೇಲೆ!" ಎಂದು ಎಲ್ಲರೂ ಉಚ್ಚರಿಸುತ್ತಿರುವ ಸಂದರ್ಭದಲ್ಲಿ ಬೀchi, ರಾಶಿ, ಲಾಂಗೂಲಾಚಾರ್ಯರಂತಹ ನಗೆಗಾರರು ಹಾಸ್ಯ ಸಾಹಿತ್ಯದ ಪ್ರವರ್ತಕರಾಗಿ ಶ್ರೀಸಾಮಾನ್ಯ ಅಳು ನುಂಗಿ ನಗುವಂತೆ ಮಾಡಿದರು: ಜೀವ ಜಾಡ್ಯಗಳಿಗೆ ಚಿಕಿತ್ಸೆ ಒದಗಿಸಿದರು. ಇಷ್ಟಾದರೂ ಇವರ ಈ ನಗೆ ಚಿಕಿತ್ಸೆ ಸೀಮಿತವಾಯಿತು, ಓದು ಬಲ್ಲವರ ಸ್ವತ್ತಾಯಿತು.

ಅದೇ ತಿಂಮನನ್ನು ದತ್ತು ತೆಗೆದುಕೊಂಡು ಹೊಸ ಸಂಸ್ಕಾರ ಕೊಟ್ಟು ಸಾಕ್ಷರ ನಿರಕ್ಷರಿಗಳಿಗೆ, ಪಂಡಿತ ಪಾಮರರಿಗೆಲ್ಲ ಪ್ರಿಯನಾಗುವಂತೆ ಮಾಡಿದ, ಮಾಡುತ್ತಲಿರುವ ದಾನಪ್ಪನವರ ಜಾಣ್ಮೆ, ಶೈಲಿ ಮೆಚ್ಚುವಂಥದು. ತಿಂಮನಂಥ ಎಡಬಿಡಂಗಿಯನ್ನು ಅನೇಕ ತರದ (ಭವ)ರೋಗಗಳಿಗೆ ತುತ್ತಾಗಿ ನರಳುತ್ತಿರುವ ಭ(ಜೀ)ವಿಗಳಿಗೆ ವೈದ್ಯನನ್ನಾಗಿಸಿದ ಶ್ರಮ ಸಾರ್ಥಕವೆನ್ನಿಸುವಂಥದ್ದು. ಯಾಕೆಂದರೆ ನಗೆ, ಮನೋಕ್ಲೇಶವನ್ನು ತೊಳೆದು ಹಸನುಗೊಳಿಸುವ ಸಾಧನ, ಅನೇಕ ಮನೋರೋಗಗಳಿಗೆ ಸಿದ್ಧೌಷಧ. ಇದನ್ನು ನೀಡಬೇಕಾದ ಪ್ರಮಾಣ, ರೀತಿ ದಾನಪ್ಪನಂಥವರಿಗೆ ಮಾತ್ರ ಗೊತ್ತಿರುವಂತಿದೆ.

ಶರಣರ, ದಾಸರ, ದಾರ್ಶನಿಕರ ಚರಿತ್ರೆಗಳನ್ನು ಹೇಳುವಾಗ ಹೃದ್ಯವೆನ್ನುವಂತೆ ತಿಂಮನನ್ನು ಬೆರೆಸಿ ನಕ್ಕು ನಗಿಸುತ್ತಲಿರುವ ದಾನಪ್ಪ ಜತ್ತಿ ಅವರು ಒಂದು ಕಾಲಕ್ಕೆ "ದುಡ್ಡು ರೊಕ್ಕಾ ಏನೂ ಬೇಡ, ನನ್ನ ಮಾತುಗಳನ್ನಾದರೂ ಕೇಳಿರಿ" ಎಂದು ಚಪಲ ತೋರುತ್ತಿದ್ದವರು ಇಂದು "ಕೇಳಿದಷ್ಟು ಹಣ ಕೊಡುತ್ತೇವೆ, ನಮ್ಮ ಊರಿಗೆ ಬಂದು (ಕೀರ್ತನ ಮಾಡಿರಿ) ಮಾತಾಡಿರಿ" ಎನ್ನಿಸಿಕೊಳ್ಳುವ ಹಂತಕ್ಕೆ ಬಂದಿರುವುದು ಅವರ ಮಾತು ಕೀರ್ತನವಾಗುತ್ತಿರುವುದು ನನಗಂತೂ ಅಗಾಧವೆನ್ನಿಸಿದೆ. ಅವರ ಈ 'ನುಡಿಸೇವೆ' – ಹೀಗೆಯೇ ಮುಂದುವರೆದು ಶರಣರ, ದಾಸರ, ದಾರ್ಶನಿಕರ ಧೀಮಂತ ಬದುಕಿನ ಪರಿಯನ್ನು ಅವರ ಜೀವನದ ಉದ್ದೇಶ, ಸಂದೇಶಗಳನ್ನು, ಜನನ–ಮರಣ, ಸುಖ–ದುಃಖಗಳನ್ನು ಅವರು ಸ್ವೀಕರಿಸಿದ ರೀತಿಯನ್ನು ಜನ ಸಾಮಾನ್ಯರಿಗೆ ಮುಟ್ಟಿಸುವಲ್ಲಿ ಸಾರ್ಥಕ್ಯ ಪಡೆಯಲಿ. ತಿಂಮನ ಪ್ರವೇಶ ಬರಬರುತ್ತ ಕಡಿಮೆಯಾಗಿ ದಾನಪ್ಪನವರ ದರ್ಶನವಾಗಲಿ, ಕಾಮಿಗಳ ಕಾಮ, ಲೋಭಿಗಳ ಲೋಭ, ಕ್ರೋಧಿಗಳ ಕ್ರೋಧ, ಮದ, ಮತ್ಸರ, ಮೋಹಾದಿಗಳನ್ನು ಕಡಿಮೆಗೊಳಿಸುವಲ್ಲಿ ಇವರ ಜೀವನ ಒಂದು ಮಾರ್ಗಸೂಚಿಯಾಗುವಂತಾಗಲಿ. ಭಗವಂತ ಅವರಿಗೆ ಆಯುರಾರೋಗ್ಯ ಭಾಗ್ಯ ಕರುಣಿಸಲಿ, ಅವರ 'ತಿಂಮ' ತೀರ್ಥರೂಪ ತಾಳುವಂತಾಗಲಿ ಎಂದು ಮನದುಂಬಿ ಹಾರೈಸುವೆ.

# ಕೀರ್ತನೆಯ ಗಾರುಡಿಗ

## ಬಸಯ್ಯ ನಿಂಗಯ್ಯ ಮಠಪತಿ

ನಮ್ಮ ಕನ್ನಡ ನಾಡಿನಲ್ಲಿ ಕೆಲವೇ ಕೆಲವು ಜನ ಕೀರ್ತನಕಾರರು, ಪ್ರವಚನ ಕಾರರು ಮತ್ತು ಪುರಾಣಿಕರು ಹೆಸರುವಾಸಿಯಾಗಿದ್ದಾರೆ. ಇಂಥವರಲ್ಲಿ ತಿಕೋಟಾದ ಶ್ರೀ ದಾನಪ್ಪ ಜತ್ತಿ ಅವರೂ ಒಬ್ಬರು ಎಂದರೆ ತಪ್ಪಾಗಲಿಕ್ಕಿಲ್ಲ. ಈ ಹೊತ್ತು ಅವರ ನೆನಪಿನ ಸುರುಳಿಯನ್ನು ಬಿಚ್ಚುತ್ತ ನೆನಪಿಸಿಕೊಳ್ಳುವವೇನಂದರೆ ಒಂದು ಅಪೂರ್ವ ಅನುಭವ.

ಈ ಆರೇಳು ವರ್ಷಗಳ ಹಿಂದೆ ಸಿಂದಗಿಗೆ ಊರಿನ ಹಿರೇಮಠದ ಶಿವಾನುಭವ ಮಂಟಪದಲ್ಲಿ ಕೀರ್ತನಕಾರರಾಗಿ ಬಂದಿದ್ದರು. ಅವರು ಎಲ್ಲಿಯಾದರೂ ಪುರಾಣಿಕ ರಾಗಿ ಹೋಗಲಿ, ಕೀರ್ತನಕಾರರಾಗಿ ಹೋಗಲಿ ತಮ್ಮ ಸಂಗಡ "ತಿಮ್ಮ"ನನ್ನು ಕರೆದುಕೊಂಡು ಹೋಗುವದು ಮರೆಯುವುದಿಲ್ಲ. ತಮ್ಮ ತಿಮ್ಮನಿಂದ ಶ್ರೋತೃ ಗಳನ್ನು ನಗೆಚಾಟಿಯಿಂದ ಬಡದೆಬ್ಬಿಸುತ್ತಿದ್ದರು. ಇಂಥವರನ್ನು ಹತ್ತಿರದಿಂದ ಬಲ್ಲವರ ಬಗ್ಗೆ ಬರೆಯುವುದು ಸ್ವಲ್ಪ ಕಷ್ಟವೆಂದೇ ಹೇಳಬೇಕು. ಚೆನ್ನಾಗಿ ತಿಳಿದಿರುವ ವಿಷಯುವನ್ನೇ ಬರೆದರೂ ಅರಿಯದವರಿಗೆ ಅದು ಅಸಹಜ ಅಥವಾ ಉತ್ಪ್ರೇಕ್ಷೆ ಎಂದೆನಿಸಬಹುದು. ಹಾಗೆಂದು ಇರುವ ವಿಷಯುವನ್ನು ಕುರಿತು ಬರೆಯದೇ ಇರುವುದು ಸರಿಯಾಗಲಾರದು.

ಶ್ರೀ ಜತ್ತಿಯವರು ಸಿಂದಗಿಗೆ ಬಂದಕೂಡಲೇ ಅವರನ್ನು ಭೇಟಿಯಾದ ತಕ್ಷಣ ಕಂಡುಬರುತ್ತಿರುವುದು ಆಕರ್ಷಿಸುವಂತಹ ಅವರ ಮುಖ ಲಕ್ಷಣ. ದುಂಡು ಮುಖದಲ್ಲಿ ಧಾರಾಳವಾಗಿ ಧರಿಸಿದ ಮೂರುಬೆರಳು ವಿಭೂತಿ. ಸಾಮಾನ್ಯ ಎತ್ತರ, ಹೊಳೆಯುವ ಕಣ್ಣುಗಳು. ಅವರು ಮಾತಿಗೆ ಪ್ರಾರಂಭಿಸಿದರೆ ಆಕರ್ಷಣೆ ಇನ್ನೂ ಹೆಚ್ಚುತ್ತಿತ್ತು. ಅವರ ಭೇಟಿಗೆ ಯಾರೇ ಬಂದರೂ ಆತ್ಮೀಯರಾಗಿ, ಬಿಚ್ಚು ಮನಸ್ಸಿನಿಂದ ಮಾತನಾಡುವವರು. ಇನ್ನೊಬ್ಬರ ಸದ್ಭಾವನೆಯೊಡನೆ ಸ್ಪಂದಿ ಸುವ ಅವರ ಸ್ನೇಹಶೀಲತೆಯಿಂದ ನಮ್ಮಲ್ಲಿ ಬಹುಬೇಗ ಆತ್ಮೀಯತೆ ಬೆಳೆಯಿತು.

ಶ್ರೀ ದಾನಪ್ಪ ಅಣ್ಣನವರು ತಮ್ಮ ಕೀರ್ತನೆಯಿಂದ, ಸ್ನೇಹಪೂರ್ಣ ವ್ಯಕ್ತಿತ್ವ ದಿಂದ ಅದಾಗಲೇ ಜನಜನಿತರಾಗಿದ್ದಾರೆ. ಅವರದು ಶಿಸ್ತಿನ ಹಾಗೂ ಹೃದಯ ವೈಶಾಲ್ಯದ ಜೀವನ. ಕಾರ್ಯಕ್ರಮಗಳಿಗೆ ಒಪ್ಪಿಕೊಂಡಾಗ ಸಕಾಲಕ್ಕೆ ಹಾಜರಿ, ಅಂದಿನ ವಿಷಯದ ಪ್ರಸ್ತಾವನೆ ಮಾಡಿ ನಡೆಸಿಕೊಡುವ ಪಾಂಡಿತ್ಯಪೂರ್ಣ ಕೀರ್ತನೆ, ಜೀವನದ ವಿವಿಧ ಪ್ರಕಾರಗಳಲ್ಲಿ ಪಡೆದಿರುವ ಸೂಕ್ಷ್ಮ ಅನುಭವ. ತಮ್ಮ ಕೀರ್ತನೆ

ಯಲ್ಲಿ ಸಂದರ್ಭಕ್ಕನುಸಾರವಾಗಿ ಒಳ್ಳೆಯ ಹಾವಭಾವ, ನಟನೆಯ ನೈಪುಣ್ಯತೆಯಿಂದ ಚಿಕ್ಕಮಕ್ಕಳ, ಹೆಣ್ಣುಮಕ್ಕಳ, ಮುದುಕ - ಮುದುಕಿಯರ ಹಾವಭಾವನೆಯನ್ನು ನಟಿಸಿದರೆಂದರೆ ಜನರು ಬೊಳ್ಳನೇ ನಕ್ಕುಬಿಡುತ್ತಿದ್ದರು. ಇವರ ಕೀರ್ತನೆ ಒಳ್ಳೆ ನಿರರ್ಗಳ ಗ್ರಾಮ್ಯ ಭಾಷೆಯಿಂದ ಕೂಡಿದುದು. ಅವರು ಎಷ್ಟು ತಾಸು ಕೀರ್ತನೆ ನಡೆಸಿದರೂ ವೇಳೆ ಸರಿಯುತ್ತಿದ್ದುದೇ ಗೊತ್ತಾಗುತ್ತಿರಲಿಲ್ಲ, ಆದಾಗ್ಯೂ ಕೂಡ ವೇಳೆಗೆ ಅಷ್ಟೇ ಮಹತ್ವಕೊಡುತ್ತಿದ್ದರು. ಅವರು ಕೀರ್ತನೆ ಮುಗಿಸಿದಕೂಡಲೆ. ಕೀರ್ತನವನ್ನುಂಡು ಆನಂದಭರಿತರಾದ ಜನರು ಇನ್ನು ಹೇಳಬೇಕಾಗಿತ್ತು ಎಂದು ಹೇಳುತ್ತ ಹೋಗುತ್ತಿದ್ದುದನ್ನು ನಾನು ಕಿವಿಯಾರೆ ಕೇಳಿದುದುಂಟು. ಅವರು ಕೀರ್ತನೆ ಪ್ರಾರಂಭಿಸುವ ವೇಳೆಯ ಮುನ್ನವೇ ನಾಮುಂದೆ. ನೀಮುಂದೆ ಎಂದು ಜನರು ಧಾವಿಸಿ ಬಂದು ಕುಳಿತುಕೊಳ್ಳುತ್ತಿದ್ದರು. ಜನ ಎಷ್ಟು ಹೆಚ್ಚು ಸೇರುತ್ತಿತ್ತೋ, ಅಷ್ಟು ಒಳ್ಳೇ ರೀತಿಯಿಂದ ಬಂದುನಿಂತು ತಮ್ಮ ಸೇವೆ ಮಂಡಿಸಿದರೆ ಜನರು ತಾವು ಬಂದು ಕುಳಿತಿದ್ದನ್ನೇ ಮರೆಯುತ್ತಿದ್ದರು. ಪುರಾಣ ಕಥೆಗಳು. ಸಾಮಾಜಿಕ ವಾಸ್ತವದ ಬಗ್ಗೆ ಹೇಳುತ್ತಿರುವಾಗ. ಕಷ್ಟದಿಂದ ಕೂಡಿದ ದುಃಖದ ಸನ್ನಿವೇಶಗಳನ್ನು ಹೇಳುತ್ತಿರುವಾಗ ಕೇಳುಗರು ಎಂಥ ಕಠಿಣ ಹೃದಯಿಗಳಾಗಿದ್ದರೂ ಕಣ್ಣೀರು ಸುರಿಸಿ ಲೌಕಿಕ ಮರೆಯುತ್ತಿದ್ದರು.

"ನನಗಾಗಿ ನಾನು ಬಾಳಬಾರದು. ನಾಲ್ಕಾರು ಜನರಿಗೆ ಉಪಯುಕ್ತವಾಗುವ ಹಾಗೆ ಬಾಳಬೇಕು" ಎನ್ನುವ ಈ ಮಾತನ್ನು ಜತ್ತಿಯವರು ಒತ್ತಿ ಹೇಳುತ್ತಿದ್ದರು. ಹಾಗೆ ನಡೆದುಕೊಂಡುಹೋಗುವ ನಿಟ್ಟಿನಲ್ಲಿ ಅಚ್ಚುಕಟ್ಟುತನ ರೂಢಿಸಿಕೊಂಡಿರುವ ಶ್ರೀ ಜತ್ತಿಯವರು ನೂರುಕಾಲ ಬದುಕುತ್ತಾರೆ. ಇತರರನ್ನೂ ಬದುಕಿಸುತ್ತಾರೆ.

# ದಾರಿ ಬಿಡಿ......, ನಗೆ ಮಾರಿ ಶರಣ ಬಂದ

## ಸಿದ್ಧರಾಮ ಉಪ್ಪಿನ

ಬಿಸಿಲು–ಬೆವರಿನ ಮಧ್ಯ ವಿಜಾಪುರದ ತಿಕೋಟಾಕ್ಕೆ ಎರಡು ಕಾರಣದಿಂದ ಪ್ರಸಿದ್ಧಿ ಅಂಟಿಕೊಂಡಿದೆ. ಬಾಯಾರಿಕೆ ಹಿಂಗಲು ದೂರಕೆ ಹೋಗುವ ಸಿಹಿ ಗೊಂಜಲದ ದ್ರಾಕ್ಷಿ. ಇನ್ನೋರ್ವ ನಗೆ ಮಾರಿ ಶರಣ ದಾನಪ್ಪ ಜತ್ತಿ ಎಡಬಿಡದೇ ಓಡಾಡುವ ಸುಪ್ರಸಿದ್ಧ ಪ್ರವಚನಕಾರ. ಈ ಅನುಭಾವಿ ಹುಟ್ಟು ನಗೆಗಾರ. ತೊಟ್ಟಿಲಲಿ ಕೈಕಾಲು ಆಡಿಸಿದಂತೆ ಬೆಳದಿಂಗಳಾಗಿ ನಕ್ಕ. ಅಂದರೆ ತೂಗುವ ಕೈ ಈತನ ಅಳುಬುರುಕತನ ಎಂದೂ ಕಾಣಲಿಲ್ಲವೆನ್ನಬೇಕು. ಹೀಗೆಂದರೆ ಸುಖದ ಲೀಲೆಯಲಿ ಬೆಳದಿರಬೇಕೆಂದು ತಕ್ಷಣ ಹಾಗನ್ನಿಸುವುದು ಸಹಜವಿದೆ. ಈ ರೀತಿ ಭಾವಿಸುವದು ಖಂಡಿತ ಅಲ್ಲ. ಆದರೆ...? ತನ್ನದೆಲ್ಲ ಬಡತನ ಗಟಗಟನೆ ನೀರು ಕುಡಿದಂತೆ ಕಣ್ಣಗಲಿಸಿ ತಿಕೋಟಾದ ರಾಜಬೀದಿಯಲಿ ನಡೆದ. ಎದುರು ಬರುವ ಬಸ್‌ನಿಲ್ದಾಣದ ಕೂಲಿ ಗೆಳೆಯನನ್ನು ಕಂಡ. ಅವನ ದುಃಖಕೆ ತನ್ನ ನಗೆ ಮಾರಿನಿಂದ ಮುತ್ತುಗಳು ಉದಿರಿಸಿ ನಗಿಸಿ ಮುಂದೆ ನಡೆದ. ಎದುರು ಬರುವ ಹೆಣಕೆ ಹೆಗಲು ನೀಡಿದ. ಮತ್ತೆ ಕೆಳಗಿನ ಮನೆಯ ಮದುವೆಯ ಹಂದರದಲಿ ನಗುವ ಚೆಲ್ಲಿದ. ಅಂತೆಯೇ ತಿಕೋಟಾದ ಪಂಚಾಯತ ಅಧ್ಯಕ್ಷತೆಗೆ ಎತ್ತಿ ಕೂಡ್ರಿಸಿದರು. ಅಲ್ಲಿಯೂ ನಕ್ಕ. ಮೇಲಾಗಿ ವಿಧೇಯತೆಯಿಂದ ನಡೆದ. ಮನೆಯ ಅಂಗಳದ ಈ ಮಹಾನು ಭಾವ ಗ್ರಾಮವೇ ಪಡಸಾಲಿಯನ್ನಾಗಿ ಮಾಡಿಕೊಂಡ. ಶೋಷಿತ ಕಣ್ಣೀರಿಗೆ ದಾಪುಗಾಲು ಹಾಕಲು ಹೇಳಿದ. ಹೀಗೆಯೇ ದಾನಪ್ಪ ಶರಣ. ಪ್ರವಚನಕಾರ, ವಚನಕಾರನಾದ. ಹಗಲು ತಿರುಗಿ ನೋಡಿದ. ಜೀವನಾನುಭವ ಹೃದಯಾಳದಲಿ ಸುರುಳಿಯಾಗಿಟ್ಟು ಕೊಂಡ. ಮನೆಯ ದುಃಖ ದುಮ್ಮಾನ ಹೊಟ್ಟೆಯಲಿಟ್ಟು ಕೊಂಡು ಅನುಭವ ಮಂಟಪದ ಶಿವಶರಣರ ಜೀವನ – ಬದುಕು ಅರ್ಥೈಸಿ ನಡೆದ. ಗುಂಪಿಸ ಮಧ್ಯ "ಶರಣ ತತ್ವ" ಅಚ್ಚುಕಟ್ಟಾಗಿ ಚಿತ್ರಿಸಿದ. ಮುಂದೆ, ಮುಂದೆ ಸರಿದ...... ಗ್ರಾಮದ ಚಾವಡಿ. ಮಠ ಮಾನ್ಯಗಳ ಹೊಸ್ತಿಲು ಮುಟ್ಟಿದ. ಪೂಜ್ಯರ ಪ್ರಸಾದ ಸ್ವೀಕರಿಸಿ ಹರಕೆಯ ಆ "ಶ್ರೀರಕ್ಷೆ" ತನ್ನದಾಗಿಸಿಕೊಂಡ. ನಂತರ ವಿಭೂತಿ ಧರಿಸಿಕೊಂಡು ಪಕ್ಕ ವಾದ್ಯಗಳೊಂದಿಗೆ ನೀಟಾಗಿ ಕುಳಿತು ಪ್ರವಚನ ಪ್ರಾರಂಭಿಸಿದ. ಕೇಳುವ ಜನಕೆ ಇಂಪು ತಂದ. ಮುಖ ಅತ್ತಂತೆ ಮಾಡಿ ನಕ್ಕ. ಬಹು ಬೇಗನೇ ಗೌರವಾದರಕೆ ಪಾತ್ರನಾದ. ಇದೆಲ್ಲ ಮನಸ್ಸಿನಲಿ "ಶಿವನ ಕರುಣೆ" ಎಂದು ಭಾವಿಸಿದ.

ನಮಸ್ಕಾರ... ಹೋಗಿ ಬರ್ರೀನಿರ್ರೀ... ನೀವು ಇಲ್ಲೇ ನಿಂದರ್ರಿ... ಅಂದ. ಹಂಗ ಕಡೀತನಕ ಇಲ್ಲೆ ನಿಂತೀರಿ... ಮತ್ತ... ಅಂದು ನಗಿಸಿದ. ಆ ಗ್ರಾಮ ಕಣ್ತುಂಬ ನೋಡಿದ. ಮನೆ–ಮನ ಗೆದ್ದ 'ದಾನಪ್ಪ ಶಾಸ್ತ್ರಿ ಹೊಂಟನಲ್ಲ...' ಹೆಂಗಸರು ತಲಬಾಗಿಲಕೆ ಬಂದು ನಿಂತರು. ತನ್ನ ಹೆಗಲಿನ ಶಾಲು ಸರಿಪಡಿಸಿಕೊಂಡ. ಶರಣ ಜೀವನದ ದೀಪ ಹಚ್ಚಲು ದೂರದ ಹಳ್ಳಿಗೆ ನಡೆದ. ನಾನೇ 'ದಾನಪ್ಪ' ಎಂದು ಪ್ರತ್ಯಕ್ಷನಾದ. ಸ್ಫುಟವಾದ ನುಡಿಗಳಿಂದ ಶಿವನ ತಾಂಡವ ನೃತ್ಯದಂತೆ ಪ್ರವಚನದಲ್ಲಿ ತಲ್ಲೀನನಾದ. ಎಲ್ಲರೆದುರು ಶರಣನಾಗಿ ಕಂಡ. ಮಧ್ಯದಲಿ ನಗಿಸುತ್ತ "ತಿಕೋಟಾದ ತಿಮ್ಮ"ನಾದ. ಶಾಲೆ ಹುಡುಗರು ನಕ್ಕಿದ್ದು ಕಂಡು ಮರುನಕ್ಕ. ಮತ್ತೆ ಗಾಂಭೀರ್ಯದ ಬಿಗುಮಾನ ತಂದು ತನ್ನ ಮುಂದಿನ ಉಬ್ಬಿದ ಹಲ್ಲುಗಳನ್ನು ಮುಚ್ಚಿ ಪಕ್ಕಕೆ ನೋಡಿದ. ಇನ್ನೆಂದೂ ನಗದಂತೆ ಜೀಗಿದ. ಇದೇನೆಂದು ಜನ ಪ್ರಶ್ನಾರ್ಥಕವಾಗಿ ಹುಬ್ಬೇರಿಸಿ ಒಂದೇ ಸವನೆ ನೋಡಿತು. ಮತ್ತೆ ನಗೆ ಮಾರಿ ತಂದ. ಕೂಡಲೇ ಅರಿಷಡ್ವರ್ಗಗಳು ಆನೆಯ ಕಾಲಿನಂತೆ ಒಳಗೆ ತಗೆದು ಕೊಳ್ಳಿರಿ... ಸಂಗೀತ ನಾದದ ಮಧ್ಯ ಧ್ವನಿ ತಗೆದ.

ರಾತ್ರಿ ಏಕಾಂತದಲಿ ನಗೆ ಬೆಟ್ಟದಷ್ಟು ಬಚ್ಚಿಟ್ಟಿದ್ದ. ನಾಳೆಗಾಗಿ ಯೋಚಿಸದೇ ನಿದ್ರಿಸಿದ. ಚಿಂತೆ ಆವರಿಸಬಾರದೆಂದು ಲಿಂಗನಿಷ್ಠೆ ಇಲ್ಲಿ ಅಚಲವಿದೆ. ಸುಪ್ರಭಾತ ಹಾಡುವದಕ್ಕಿಂತ ಮೊದಲೇ ಎದ್ದ. ಸೂರ್ಯೋದಯದಲಿ ನಗೆ ಕಿರಣ ಸೂಸಿದ **ಈ** ತಿಕೋಟಾದ ಶರಣ ದಾನಪ್ಪ.

ಕಿಕ್ಕಿರಿದ ಪ್ರೇಕ್ಷಕರ ಮುಂದಿನ ವೇದಿಕೆ ಮತ್ತೆ ಏರಿದ. ಕೊನೆಯ ಭಾಷಣ ಕಾರನಾಗಿ ತನ್ನ ಬಿಗು ನಿಲುವು ಸಡಿಲಿಸಿ ಯಾವುದೋ ಸನ್ನಿವೇಶ ಈಗಲೇ ನಡೆದಂತೆ ತೆರೆದಿಟ್ಟ. ಬೇಸತ್ತ ಜನ ಮತ್ತೆ ಚಕಮುಕಳಿ ಹಾಕಿ ಕುಳಿತರು. ಅವರ ಅಂತರಾಳದ ಮನದಲ್ಲಿ ಶರಣರ ಬದುಕಿನ ಫಲ ಮುದ್ರೆ ಒತ್ತಿದ. 'ಶರಣರ ಕಾಯಕ' ವಿವರವಾಗಿ ಮಂಡಿಸಿದ. ಸಭೆ ಅಚಲ ವಿಶ್ವಾಸದಿಂದ ಸ್ವೀಕರಿಸಿತು. ಅಂತಿಮ ಮಾತಿನಲಿ ನಗೆ ತೂರಿದ. ಆ ತುಂತುರ ಹನಿಗೆ ಹಲ್ಲು ತೋರಿಸಿದ ಭೂಪರು ಛಳಿ ಬಿಟ್ಟು ನಕ್ಕರು. ಮುದುಕಿಯರು ಬಚ್ಚಬಾಯಿ ತೆರೆದರು. ಹೆಂಗಸರು ಸೆರಗು ಬಿಟ್ಟು ನಕ್ಕರು. ಕಣ್ಣಂಚಿನ ಕಂಬನಿ ಒರೆಸಿಕೊಂಡರು. ಈ ಆನಂದ ನಮಗೆಂದೂ ಗೊತ್ತೇ ಇಲ್ಲವೆನ್ನುವಂತೆ ಎಲ್ಲವನ್ನು ಮರೆತರು.

* * * *

ಇಂದಿಗೆ ಹದಿನೆಂಟು ವರುಷಗಳ ಹಿಂದಿನ ಮಾತು. ಅಂದರೆ ನನ್ನ ಮದುವೆ ಆಗಿ ಒಂದು ವಸಂತ ದಾಟಿತ್ತು. ನಾನು – ನನ್ನ ಬಾಳ ಗೆಳತಿ ರೇವತಿ 'ಕವಿತೆ' ಬರೆಯುತ್ತಲೇ ಇದ್ದೆವು. ಇಬ್ಬರೂ ಕೂಡಿಯೇ "ಎರಡು – ಆತ್ಮ ಒಂದು" ಕವನ

ಸಂಕಲನ ಹೊರತರಲು ನಿರ್ಧರಿಸಿದೆವು. ಅದಕ್ಕೊಂದು ಮುನ್ನುಡಿ ಬೇಕಲ್ಲ. ಆಗ್ಗೆ ಈ ಶರಣರಾದ ದಾನಪ್ಪ ಜತ್ತಿ ಅವರ ಹೆಸರು ಕೇಳಿದ್ದೆ. ಸಂಗ್ರಹಿಸಿದ ಹಸ್ತಪ್ರತಿ ತಿಕೋಟಾಕ್ಕೆ ರವಾನಿಸಿದೆ. ಒಂದು ವಾರದಲ್ಲಿಯೇ ಮುನ್ನುಡಿ ಬರೆದು ಕಳಿಸಿದರು. "ಕಣ್ಣರಿಯದಿದ್ದರೂ ಕರುಳು ಅರಿತಿದೆ" ಎಂದು ನಮ್ಮಿರ್ವರ ಬಗ್ಗೆ ಬರೆದಿದ್ದರು.

ಮುಂದೆ ನನ್ನೂರು ಆಲಮೇಲದ ನಮ್ಮ 'ಬಸವ ಸಮಿತಿ' ಆಶ್ರಯದಲ್ಲಿ ಖ್ಯಾತ ಬರಹಗಾರರಾದ ಶಂ. ಗು. ಬಿರಾದಾರ ಮತ್ತು ಜತ್ತಿಯವರನ್ನು ಕರೆಯಿಸಿ ಈ ಪುಸ್ತಕ ಕೂಡ ಅದರಲ್ಲಿಯೇ ಬಿಡುಗಡೆ ಮಾಡಲಾಯಿತು.

ಆಗ್ಗೆಯೇ ನಾನು ದಾನಪ್ಪನವರನ್ನು ಕಂಡು... "ನೀವು ಬಿ. ಡಿ. ಜತ್ತಿಯವರಿಗೆ ಏನಾಗಬೇಕು ?" ಎಂದೆ.

"ಯಪ್ಪೋ ! (ಬಾಯಿಯ ಹತ್ತಿರ ಕೈ ಒಯ್ದು, ವಿಶಿಷ್ಟ ಭಂಗಿಯಲಿ ನಿಂತು) ಏನು ಆಗುದಿಲ್ಲ ಬಿಡ್ರಿ. ನೀವೊಂದು ತಗೀರಿ... ನಾವೇನು ಅವರಿಗೆ ಆಗಬೇಕೆಂದು" ನನ್ನ ಹೆಗಲಮೇಲೆ ಕೈಹಾಕಿ ನಡೆದರು. ಮೊದಲ ಸ್ಪರ್ಶಕೆ ಎಂತಹ ಗೌರವದ ಮನುಷ್ಯನೆನಿಸಿತು.

ಅಂದಿನ ಸಮಾರಂಭದ ಮಾತಿನ ಮಧ್ಯ ತಿಮ್ಮನ ಕತೆ ಹೇಳುತ್ತಲೇ ನಗಿಸಿದ್ದೇ ನಗಿಸಿದ್ದು. "ಎತ್ತಣ ತಿಕೋಟಾ, ಎತ್ತಣ ಆಲಮೇಲ, ಎತ್ತಣಿಂದೆತ್ತ ಸಂಬಂಧ ವಯ್ಯಾ" ಎಂದು ಪ್ರಾರಂಭಿಸಿ ಹೃದಯಸ್ಪರ್ಶಿಯಾಗಿ ಮಾತನಾಡಿದ ಈ ಅನುಭಾವಿ ಹನ್ನೆರಡನೇ ಶತಮಾನದ ವಚನಕಾರರ ಜೀವನ ಸಿದ್ಧಾಂತ ಕಣ್ಮುಂದೆ ಬಂದಂತೆ ಹೇಳುವ ಶೈಲಿ ಭಲೇ ಎನಿಸಿತ್ತು.

ಮರುದಿನ ಈರ್ವ ಅತಿಥಿಗಳನ್ನು ಬೀಳ್ಕೊಡಲು ಬಸ್ ನಿಲ್ದಾಣಕ್ಕೆ ನಮ್ಮ ಗೆಳೆಯರ ತಂಡವೇ ಹೌಹಾಯಿಸಿತು. ಬೆಳಿಗ್ಗೆ ಕುಳಿತವರು ಮಧ್ಯಾಹ್ನದವರೆಗೆ ಯಾಕೋ ಬಸ್ಸೇ ಬರಲಿಲ್ಲ. ಆಗ್ಗೆ ದಾನಪ್ಪನವರು "ಏನ್ರೀ ಸಿದ್ಧರಾಮ. ಗಾಡೀನೇ ಬಂದುವು..., ಗಾಡೀನೇ ಬರಲಿಲ್ಲಲಾ...?" ಎಂದಾಗ ಯಾರಿಗೂ ನಗೆ ತಡೆಯಲಿಲ್ಲ. ಸಾಂದರ್ಭಿಕ ಈ ತಿಳಿ ಹಾಸ್ಯ ಚುಟುಕೆನಿಸಿದರೂ ಚಾಟಿ ಏಟಿನಂತಿಲ್ಲವೇ ? ಇಂತಹ ಕಲಾತ್ಮಕ ಮಾತುಗಾರನನ್ನು ಕಳಿಸುವಾಗ ಏನೋ ಕಳೆದುಕೊಂಡಂತೆ ಭಾರವಾಗಿಯೇ ಮರಳಿದೆವು.

ಈಗ್ಗೆ ಅದೇ ಶಾಲು ಹೊದ್ದುಕೊಂಡು ಐವತ್ತೈದರ ಮೆಟ್ಟಿಲು ಏರುತ್ತಿರು ವದು ಸಹಜವೇ ಇದೆ. ಆ ದಣಿವಿನಲ್ಲೂ ನಗೆ ಏಕೆ ಮಾಸಿಲ್ಲ ? ಪ್ರಕೃತಿಯೇ ನಗು ಮೊಗದ ಸಿರಪೇಚು ಇಟ್ಟಾಗ ನಮ್ಮ ಈ ಸಿಂಗಾರ ರಂಗು-ರಂಗು ಎನಿಸುವದು.

## ಬಾಬು ನಾಯಿಕ

ತಿಕೋಟಾದ ಶ್ರೀ ದಾನಪ್ಪ ಜತ್ತಿ ಕಲಾರಂಗ, ಸಂಗೀತ, ಸಾಹಿತ್ಯ, ಧಾರ್ಮಿಕ, ಪುರಾಣ ಪ್ರವಚನ, ಸಂಕೀರ್ತನ, ಸಮಾಜ ಸೇವೆ ಮುಂತಾದ ಜನಮನದ ಹಲವು ಹತ್ತಾರು ರಂಗಗಳಲ್ಲಿ ಹೆಸರು ಗಳಿಸಿರುವ ವ್ಯಕ್ತಿ.

ನಾಡಿನ ಖ್ಯಾತ ಕವಿಗಳು, ಸಂತರು ಶ್ರೀ ದಾನಪ್ಪ ಜತ್ತಿಯವರಿಗೆ ಪ್ರೋತ್ಸಾಹ ಇತ್ತರು. ಇಳಕಲ್, ಗದಗ, ಧಾರವಾಡ, ಹುಬ್ಬಳ್ಳಿ, ಹಾನಗಲ್, ಶಿರಸಂಗಿ, ಮುರಗೋಡ, ಅರಭಾವಿ ಮುಂತಾದ ಮಠಗಳ ಮಠಾಧೀಶರು ಶ್ರೀ ದಾನಪ್ಪ ಜತ್ತಿಯವರಿಗೆ ಸಹಾಯಮಾಡಿ, ಅವರು ಸಾವಿರಾರು ಜನಮನ ಸೆಳೆಯುವ ಪ್ರವಚನಕಾರರನ್ನಾಗಿ ಮಾಡಿದರು. ವಾಗ್ದೇವಿ ಶ್ರೀ ದಾನಪ್ಪ ಜತ್ತಿ ಅವರ ನಾಲಿಗೆಯಮೇಲೆ ನೆಲಸಿದಳು. ವಿಜಾಪೂರ ಸಾಹಿತಿಗಳ ಬಳಗ ದಾನಪ್ಪ ಜತ್ತಿ ಅವರನ್ನು ಪತ್ರಿಕೆಗಳಿಗೆ ಪರಿಚಯಿಸಿ, ಸಾಹಿತ್ಯ ಲೋಕದಲ್ಲಿಯೂ ಅವರನ್ನು ಮೆರೆ ಯುವಂತೆ ಮಾಡಿದವು.

ಇದೀಗ ಅತ್ಯಂತ ಬೇಡಿಕೆಯ, ಜನಪ್ರಿಯ ಪ್ರವಚನಕಾರರಾಗಿರುವ ಒಬ್ಬ ವಿಶಿಷ್ಟ ವ್ಯಕ್ತಿ ಅವರು. ಮಿತ ಆಹಾರ, ಹಿತವಾದ ಮಾತು, ಹಸನ್ಮುಖಿ, ಸಹಜೀವನ, ಶಾಂತ ಸ್ವಭಾವ, ಶ್ರೀ ದಾನಪ್ಪ ಜತ್ತಿ ಅವರದಾಗಿದ್ದು ಅಪರೂಪದ ವ್ಯಕ್ತಿತ್ವ ಹೊಂದಿದ್ದಾರೆ. ಪ್ರತಿ ಯಶಸ್ವಿ ಪುರುಷನ ಹಿಂದೆ ಓರ್ವ ಜಾಣ ಮಹಿಳೆ ಇರುವಳೆಂಬ ಮಾತು ಶ್ರೀ ದಾನಪ್ಪ ಜತ್ತಿಯವರ ಜೀವನಕ್ಕೂ ಅಳವಡುವದು. ಅವರ ಧರ್ಮಪತ್ನಿ ಶ್ರೀಮತಿ ಶಾಂತಾದೇವಿ ನಿಜವಾಗಿಯೂ ಶಾಂತಿ ಸ್ವರೂಪಿಣಿ. ಇಡೀ ಕುಟುಂಬವನ್ನೇ ಶಾಂತಿಯ ನೆಲೆವೀಡನ್ನಾಗಿಸಿದ ಆದರ್ಶ ಗೃಹಿಣಿ. "ಗೃಹಿಣಿ ಗೃಹಂ ಉಚ್ಯತೆ" ಎಂಬಂತೆ ಶ್ರೀ ದಾನಪ್ಪ ಜತ್ತಿ ತಮ್ಮ ಸಾಧನೆಗೆ, ಸಂತೃಪ್ತಿಗೆ ತಮ್ಮ ಸಹಧರ್ಮಿಣಿ ಕಾರಣವೆಂದು ಹೇಳುತ್ತಾರೆ. ಈ ಅಪರೂಪದ ದಂಪತಿಗಳಿಗೆ ಏಕಮಾತ್ರ ಪುತ್ರನಾಗಿರುವ ಸೋಮಶೇಖರ ಕವಿ ಸಾಹಿತಿಯಾಗಿದ್ದು ತಂದೆಯ ದಾರಿಯಲ್ಲಿ ನಡೆಯುತ್ತಿದ್ದಾರೆ. ಆದರೆ ಅವರ ವೃತ್ತಿ ಮಾತ್ರ ಬೇರೆ.

ಜೀವನದ ೫೫ನೆಯ ವಸಂತಕ್ಕೆ ಕಾಲಿಡುತ್ತಿರುವ ಜತ್ತಿ ಒಬ್ಬ ವ್ಯಕ್ತಿಯಲ್ಲ ಒಂದು ಸಮಾಜದ ಶಕ್ತಿ. ಅವರಿಂದ ನಾಡಿನ ಜನಕ್ಕೆ ಜ್ಞಾನದ ಸಂಸ್ಕಾರ ಸತತ ಸಿಗುತ್ತಿರಲಿ ಎಂದು ಶುಭ ಹಾರೈಸುವೆ.

(ಪ್ರಕಟಿತ : ಹಸಿರು ಕ್ರಾಂತಿ)

# ಸಮನ್ವಯ ಕೀರ್ತನಕಾರ

## ಶ್ರೀ ಹರ್ಷ......

ಇಂದಿನ 'ಅವಸರದ ಯುಗ'ದಲ್ಲಿ ಸಾಂಸ್ಕೃತಿಕ ಹಾಗೂ ಧಾರ್ಮಿಕ ಕಾರ್ಯಕ್ರಮಗಳಿಂದ, ಕೀರ್ತನೆ, ಪುರಾಣ, ಪ್ರವಚನಗಳು ಜನತೆಯ ಮನ. ಭಾವನೆಗಳಿಂದ ದೂರ ಸರಿಯುತ್ತಿರುವಾಗ ಅವುಗಳನ್ನು ಜನಪ್ರಿಯಗೊಳಿಸಲೆಂದೇ ಟೊಂಕಕಟ್ಟಿ ನಿಂತ ವ್ಯಕ್ತಿಗಳೂ ಕೆಲವರಿದ್ದಾರೆ. ಅವರಲ್ಲಿ ಒಬ್ಬರು ಈ ತಿಕೋಟಾದ ದಾನಪ್ಪ ಜತ್ತಿ ಶಾಸ್ತ್ರಿ.

ವಿಜಾಪೂರ ಜಿಲ್ಲೆಯ ತಿಕೋಟಾ ಗ್ರಾಮದ ಜತ್ತಿ ಮನೆತನದಲ್ಲಿ ಹುಟ್ಟಿದ ದಾನಪ್ಪ ಅವರ ತಂದೆ ಸಿದ್ರಾಮಪ್ಪ ತಾಯಿ ದೊಡ್ಡವ್ವ. ತಂದೆ ಶ್ರೀಮಂತರೇ. ಆದರೆ ದಾನಪ್ಪ ಓದಿದ್ದು ಏಳನೆಯ ತರಗತಿಯವರೆಗೆ.

ಚಿಕ್ಕಂದಿನಿಂದಲೇ ನಾಟಕದ ಗೀಳು ಹಚ್ಚಿಸಿಕೊಂಡ ಅವರು ೧೯೭೨ ರಲ್ಲಿ "ಭಾರತರತ್ನ" ಕನ್ನಡ ಚಿತ್ರದಲ್ಲಿ ಅಭಿನಯಿಸಿದರು. ಇದುವರೆಗೆ ಸುಮಾರು ನೂರು ನಾಟಕಗಳಲ್ಲಿ ನಟಿಸಿದ, ನಿರ್ದೇಶಿಸಿದ, ಅನುಭವಹೊಂದಿರುವ ದಾನಪ್ಪ ಶಾಸ್ತ್ರಿಗಳು ಕೀರ್ತನಕಾರರಾಗಿ ರೂಪುಗೊಂಡಿದ್ದು ತೀರ ಅನಿರೀಕ್ಷಿತ.

ಅಮೂಲ್ಯ ಕಾಣಿಕೆ (ಕಥಾ ಸಂಕಲನ), ಭಾವ ಸೌರಭ (ಕವನ ಸಂಕಲನ), ಬಸವತತ್ತ್ವ ದರ್ಶನ (ಸಂಪಾದಿತ), ಪಂಚಾಮೃತ (ಸಂಪಾದಿತ), ಶರಣರು ಸಕ್ಕಾಗ ಹೀಗೆ ಐದು ಕೃತಿಗಳ ಕರ್ತೃ ದಾನಪ್ಪ ಜತ್ತಿ ಶಾಸ್ತ್ರಿ ಮಾನವ ಬದುಕಿನಲ್ಲಿ ಅವುಗಳು ಸಹಜ ಎನ್ನುವಂತೆ ನಾಟಕದಿಂದ ಹೊರಬಂದು ೩೦ ವರ್ಷಗಳಿಂದ ಪುರಾಣ, ಪ್ರವಚನಗಳ ಮೂಲಕ ಜನರಿಗೆ ಧರ್ಮ, ಸಂಸ್ಕೃತಿ, ಭಕ್ತಿ, ಆಧ್ಯಾತ್ಮಗಳ ಬಗ್ಗೆ ತಿಳಿಹೇಳಲು ಪ್ರಯತ್ನಿಸುತ್ತಿದ್ದಾರೆ.

ಸಮನ್ವಯ ಪ್ರಜ್ಞೆ, ಭಾವೈಕ್ಯತೆ, ರಾಷ್ಟ್ರೀಯ ಪ್ರಜ್ಞೆಯನ್ನು ತಮ್ಮ ಸಾಂಕೇತಿಕ, ನಾಮದ ಮೂಲಕ ತಮ್ಮ ಪ್ರವಚನಗಳಲ್ಲಿ ಪ್ರತಿಬಿಂಬಿಸುವ ಜತ್ತಿಯವರ ಕೀರ್ತನೆಗಳು ಕ್ಯಾಸೆಟ್ ರೂಪದಲ್ಲಿಯೂ ಹೊರಬಂದಿವೆ.

ಹುಬ್ಬಳ್ಳಿಯ ವಿಜಯಾ ರೆಕಾರ್ಡಿಂಗ್ ಸರ್ವೀಸಿಸ್ ಜತ್ತಿಯವರ ಕೋಳೂರು ಕೊಡಗೂಸು, ಶಿವನ ಆಣೆ, ನಗೆಮಾರಿ ತಂದೆ, ಸುಜ್ಞಾನಿದೇವ, ಸಂತನಾಮದೇವ ಹೀಗೆ ಐದು ಕೀರ್ತನೆಗಳ ಕ್ಯಾಸೆಟ್‌ಗಳನ್ನು ಹೊರತಂದಿದೆ.

ಜತ್ತಿಯವರು ತಮ್ಮನ್ನು ವೇದಿಕೆಯಮೇಲೆ ಕೂರಿಸಿ ಪುರಾಣ-ಪ್ರವಚನ ಮಾಡುವಂತೆ ಧೈರ್ಯ ತುಂಬಿದ ವೀರಪ್ಪ ಇಜೇರಿಯವನ್ನು ನೆನೆಯುತ್ತಾರೆ.

(ಪ್ರಕಟಿತ : ಸಂಯುಕ್ತ ಕರ್ನಾಟಕ)

# ಪ್ರವಚನ ಪ್ರವೀಣ

## ಬಾಲಶೇಖರ ಬಂದಿ

ವಿಜಾಪೂರ ಜಿಲ್ಲೆಯ ತಿಕೋಟಾ ಇಂದು ದ್ರಾಕ್ಷಿ ಬೆಳೆಗೆ ನಾಡಿನಾದ್ಯಂತ ಪ್ರಸಿದ್ಧಿ ಪಡೆದುದಲ್ಲದೆ. ಹೆಸರಾಂತ ರಾಜಕೀಯ ಮುಖಂಡರಾದ. ಸಮಾಜ ಸೇವಕರಾದ ಬಿ. ಎಮ್. ಪಾಟೀಲ ಅವರನ್ನು ನಾಡಿಗೆ ಅರ್ಪಿಸಿದ ಊರು ತಿಕೋಟಾ ಎಂದಾಗ ಮತ್ತೊಂದು ಹೆಸರು ತಟ್ಟನೆ ನೆನಪಿಗೆ ಬರುವದು. ಅದೇ ಖ್ಯಾತ ಪ್ರವಚನಕಾರ ಶ್ರೀ ದಾನಪ್ಪ ಜತ್ತಿ ಶಾಸ್ತ್ರಿ ಅವರ ಹೆಸರು.

ಶ್ರೀ ದಾನಪ್ಪ ಜತ್ತಿಯವರ ಜನನ ೩೧-೮-೧೯೩೮ರಂದು ತಿಕೋಟದಲ್ಲಿ ಆಯಿತು. ತಂದೆ ಸಿದ್ರಾಮಪ್ಪ ತಾಯಿ ದೊಡ್ಡವ್ವ ದಂಪತಿಗಳಿಗೆ ಮಗನಾಗಿ ಹುಟ್ಟಿದ ಶ್ರೀ ಜತ್ತಿಯವರು ತಂದೆಯ ಶ್ರೀಮಂತಿಕೆಗೆ ಜೋತುಬೀಳದೆ ಅವರು ಆಧ್ಯಾತ್ಮಿಕ, ಸಮಾಜ ಸೇವೆಯೇ ತಮ್ಮ ಜೀವನದ ಉಸಿರು ಮಾಡಿಕೊಂಡು ಐವತ್ನಾಲ್ಕು ವಸಂತಗಳನ್ನು ಕಳೆದಿರುವರು. ಕೇವಲ ಪ್ರಾಥಮಿಕ ಶಿಕ್ಷಣ ಪೂರೈಸುವ ದಾನಪ್ಪನವರ ವಿದ್ವತ್ತು. ಉಪನ್ಯಾಸ ಕೇಳಿದರೆ ಅವರು ಯಾವುದೇ ಶ್ರೇಷ್ಠ ವಿಶ್ವವಿದ್ಯಾನಿಲಯದ ಡಾಕ್ಟರೇಟ್ ಪದವಿ ಪಡೆದ ವ್ಯಕ್ತಿಗಿಂತ ಹೆಚ್ಚು ಎಂಬ ಭಾವನೆ ಬರುತ್ತದೆ. ಅಂತೆಯೇ ಕರ್ನಾಟಕ ವಿಶ್ವವಿದ್ಯಾನಿಲಯವು ಆಂಧ್ರಪ್ರದೇಶದ ಗುಳ್ಯ ಎಂಬಲ್ಲಿ ಆಯೋಜಿಸಿದ ಉಪನ್ಯಾಸ ಕಾರ್ಯಕ್ರಮದಲ್ಲಿ 'ಪ್ರಪಂಚವನ್ನು ಕಂಡು ನಕ್ಕವರು' ಎಂಬ ವಿಷಯದ ಮೇಲೆ ವಿಶೇಷ ಉಪನ್ಯಾಸ ನೀಡಲು ಶ್ರೀ ದಾನಪ್ಪ ಜತ್ತಿಯವರನ್ನು ನಿಯೋಜಿಸಿತ್ತು.

ದಾನಪ್ಪ ಜತ್ತಿ ಕೇವಲ ಪ್ರವಚನಕಾರರಲ್ಲ, ಒಳ್ಳೆಯ ಸಾಹಿತಿಗಳೆಂಬುವಕ್ಕೆ ಅವರಿಂದ ರಚಿತವಾದ ಅಮೂಲ್ಯ ಕಾಣಿಕೆ, ಭಾವಸೌರಭ, ಬಸವತತ್ತ್ವ ದರ್ಶನ, ವಚನಾಮೃತ ಮತ್ತು ಶರಣರು ನಕ್ಕಾಗ ಎಂಬ ಐದು ಕೃತಿಗಳು ನಾಡಿನ ಪ್ರಮುಖ ವಿವಿಧ ಪತ್ರಿಕೆಗಳಲ್ಲಿ ಅಧ್ಯಾತ್ಮಿಕಕ್ಕೆ ಸಂಬಂಧಿಸಿದ ಇವರ ಅನೇಕ ಲೇಖನಗಳು ಸಹ ಪ್ರಕಟಗೊಂಡಿದ್ದು, ಬರವಣಿಗೆಯು ಇವರ ಮುಖ್ಯ ಚಟುವಟಿಕೆಗಳಲ್ಲಿ ಒಂದಾಗಿದೆ. ಇದರ ದ್ಯೋತಕವಾಗಿ ೧೯೮೯ ರಿಂದ ೧೯೯೨ರ ವರೆಗೆ ಬಿಜಾಪೂರ ತಾಲೂಕಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೆಂದು ನೇಮಕಗೊಂಡಿದ್ದು ಆ ಅವಧಿಯಲ್ಲಿ, ತಾಲೂಕಾ ಮಟ್ಟದಲ್ಲಿ ಅನೇಕ ಸಾಹಿತ್ಯಕ ಕ್ರಿಯೆಗಳನ್ನು ತುಂಬು ಉತ್ಸಾಹದಿಂದ ನಡೆಸಿಕೊಟ್ಟರು.

ಶ್ರೀ ಜತ್ತಿಯವರಿಗೆ ಸಂಗೀತ, ನಾಟಕ, ಬಯಲಾಟ ಇವುಗಳ ಮೇಲೆ ಚಿಕ್ಕಂದಿನಿಂದಲೇ ಅಪಾರ ಆಸಕ್ತಿ. ಹೀಗಾಗಿ ಯುವಕರಾಗಿದ್ದಾಗ ಅನೇಕ ನಾಟಕ,

ಬಯಲಾಟಗಳಲ್ಲಿ ಪಾತ್ರವಹಿಸಿ ಕಲಾಸೇವೆಗೈದು ಜನಮನ ಗೆದ್ದಿದ್ದಾರೆ. ಅಲ್ಲದೆ ಕೀರ್ತನೆ, ಪ್ರವಚನ ಕಾರ್ಯಕ್ರಮಗಳು ರೇಡಿಯೋದಲ್ಲಿ ಲೆಕ್ಕವಿಲ್ಲದಷ್ಟು ಪ್ರಸಾರಗೊಂಡಿವೆ.

ಶ್ರೀ ದಾನಪ್ಪ ಜತ್ತಿಯವರು ಸಧ್ಯ ಪ್ರವಚನ ಕಾರ್ಯಕ್ರಮದಲ್ಲಿ ಬಿಡುವಿಲ್ಲದ ವ್ಯಕ್ತಿ. ಅವರ ಪ್ರವಚನದ ಶೈಲಿಯೇ ಒಂದು ವಿಶಿಷ್ಟ ಪ್ರಕಾರದ್ದು. ಕಥಾ ವಸ್ತುವಿನಲ್ಲಿ ಅಡಗಿರುವ ತಾತ್ತ್ವಿಕ ಅಂಶ. ಕಥಾ ನಿರೂಪಣೆ, ಸಂದರ್ಭೋಚಿತವಾಗಿ ಸಂಗೀತ. ಹಾಸ್ಯ, ಉಪಕಥೆ, ಸಮಕಾಲೀನ ವಿಚಾರಗಳ ಮೇಲೆ ಟೀಕೆ ಮತ್ತು ಸಂದರ್ಭಕ್ಕೆ ತಕ್ಕಂತೆ ಅಲ್ಲಲ್ಲಿ ಸಾಹಿತ್ಯ ಅಂಶದ ಉಲ್ಲೇಖನ ಮಾಡುವುದರಿಂದ ಜತ್ತಿಯವರು ತಮ್ಮ ಪ್ರವಚನದ ಮೂಲಕ ಭಕ್ತ ಪ್ರೇಕ್ಷಕರನ್ನು ಪರವಶಗೊಳಿಸುತ್ತಾರೆ.

"ಶ್ರೀ ದಾನಪ್ಪ ಜತ್ತಿಯವರು ಹಾಸ್ಯಮಯ ಶೈಲಿಯಲ್ಲಿ ತತ್ತ್ವಾನುಭವವನ್ನು ಪುರಾಣ–ಪ್ರವಚನದೊಡನೆ ವಿವರಿಸಿ ಜನಮನವನ್ನು ಆಕರ್ಷಿಸಿದ ಉತ್ತಮ ವಾಗ್ಮಿಗಳು" ಎಂದು ಶ್ರೀ ಮೂಜಗಂ ಅವರು ಜತ್ತಿಯವರ ಬೆನ್ನು ತಟ್ಟಿದ್ದು ಹೆಮ್ಮೆಯ ವಿಷಯ.

ಕುವೆಂಪು, ದ. ರಾ. ಬೇಂದ್ರೆ. ಡಿ.ವಿ.ಜಿ., ಬೀಚಿ. ಡಾ. ಎಚ್. ತಿಪ್ಪೇರುದ್ರಸ್ವಾಮಿ. ತೀ. ನಂ. ಶ್ರೀ, ಕೈಲಾಸಂ. ರಾಜರತ್ನಂ ಹೀಗೆ ಹತ್ತು ಹಲವಾರು ಸಾಹಿತಿಗಳ ಸಾಹಿತ್ಯಕ ಉಲ್ಲೇಖನವು ಶ್ರೀ ಜತ್ತಿಯವರ ಪ್ರವಚನದಲ್ಲಿ ಹೊಳಪು ಕಾಣುವುದರಿಂದ ಎಲ್ಲ ವರ್ಗದ ಕೇಳುಗರಿಗೆ ಅದು ರುಚಿಸುವುದು ಸಹಜ. ಉತ್ತರ ಕರ್ನಾಟಕದ ವಿಜಾಪೂರ, ಧಾರವಾಡ. ಬೆಳಗಾಂವಿ ಜಿಲ್ಲೆಗಳ ಅನೇಕ ಪಟ್ಟಣ. ಹಳ್ಳಿಗಳಲ್ಲಿ ಮತ್ತು ಕರ್ನಾಟಕ ರಾಜ್ಯದ ವಿವಿಧ ಮಹತ್ವದ ಧಾರ್ಮಿಕ ಸ್ಥಳಗಳಲ್ಲಿ ತಮ್ಮ ಪ್ರವಚನ. ಕೀರ್ತನೆ ನಡೆಸಿಕೊಟ್ಟು ಶ್ರೀ ಜತ್ತಿಯವರು ಮನೆ ಮಾತಾಗಿದ್ದಾರೆ. ಮಹಾರಾಷ್ಟ್ರದ ಕೆಲವು ಧಾರ್ಮಿಕ ಸ್ಥಳಗಳಲ್ಲಿ ಪ್ರವಚನ, ಕೀರ್ತನೆ ನಡೆಸಿದ್ದಾರೆ.

ಆಧುನಿಕ ಭಾರತದ ಮಹಾಪುರುಷರಾದ ಶ್ರೀ ಅರವಿಂದರು. ರವೀಂದ್ರನಾಥ ಠಾಕೂರ. ಸ್ವಾಮಿ ವಿವೇಕಾನಂದ. ಡಾ. ರಾಧಾಕೃಷ್ಣನ್ ಬರೀ ರಾಷ್ಟ್ರೀಯತೆಯನ್ನು ಮನ್ನಿಸಲಿಲ್ಲ. ಅವರು ಆಧ್ಯಾತ್ಮಿಕ ಅಂತಃಶಕ್ತಿಗೆ ಮಹತ್ವಕೊಟ್ಟಿದ್ದರು. ಇಂದಿನ ರಾಜಕೀಯ ವಿಪ್ಲವ. ಆರ್ಥಿಕ ಅವನತಿ. ಅತೃಪ್ತಿ. ಅನ್ಯಾಯ, ಅತ್ಯಾಚಾರ, ಹಣದ ವ್ಯಾಮೋಹ. ಸಾಂಸಾರಿಕ ಕಲಹ ಇವೆಲ್ಲಕ್ಕೂ ಮುಖ್ಯ ಕಾರಣ ಆಧ್ಯಾತ್ಮದ ಬಲದ ಅಭಾವ. ಹೀಗಾಗಿ ಜನಸಾಮಾನ್ಯರು ಇವಕ್ಕೆಲ್ಲಾ ಸಿಕ್ಕು ಜರ್ಜರಿತರಾಗಿದ್ದಾರೆ.

ಅವರಿಗೆ ಇಂದು ಬೇಕಾಗಿದ್ದುದು ಆಧ್ಯಾತ್ಮದ ಚೇತನ. ಪ್ರೇರಣಾಶಕ್ತಿ ಅದನ್ನು ಇಂದು ಶ್ರೀ ಜತ್ತಿಯವರು ನಾಡಿನ ಉದ್ದಗಲಕ್ಕೂ ಸಂಚರಿಸಿ ತಮ್ಮ ಪುರಾಣ ಪ್ರವಚನಗಳ ಮೂಲಕ ಸಾಧಿಸುತ್ತಿದ್ದಾರೆ. ಆಧ್ಯಾತ್ಮ ಚಿಂತನ ಜನರಲ್ಲಿ ಬೇರೂರುವಂತೆ ತಾತ್ತ್ವಿಕ ವಿಷಯಗಳನ್ನು ಸುಂದರ ಶೈಲಿಯಲ್ಲಿ ಹೇಳಿ ಜನರ ಮನಸ್ಸನ್ನು ತಿಳಿಮಾಡುವ ಇವರ ಮಹತ್ಕಾರ್ಯಕ್ಕೆ ಯಾವ ಬೆಲೆ ತೆತ್ತರೂ ಕಡಿಮೆಯೇ ಸರಿ.

(ಪ್ರಕಟಿತ : ಗೋಕಾಕ ಟಾಯಿಮ್ಸ)

# ಕಾಯಕ ನಿಷ್ಠ ಯೋಗಿ

**ಶಿವಲಿಂಗಸ್ವಾಮಿ ಹಿರೇಮಠ**

ಹರವಾದ ಹಣೆ. ತ್ರಿಪುಂಡ್ರ ಭಸ್ಮಧಾರಣ. ಕೊರಳಲ್ಲಿ ರುದ್ರಾಕ್ಷಿ ಮಾಲೆ. ಭಕ್ತಿರಸ ಉಕ್ಕಿಹರಿಯುವ ಮುಖಕಾಂತಿ. ಶುಭ್ರ ಮಲ್ಲಿಗೆಯಂಥ ಉಟ್ಟ ಧೋತರ. ಜುಳುಕು ಬಣ್ಣದ ಶರ್ಟು. ಹೆಗಲಮೇಲೆ ಕಾವಿ ಶಲ್ಲೆ, ಸದೃಢ ಕಾಯ. ತಾಳ ಮೇಳದಲಿ ನವರಸಭರಿತ ವಚನ ಸಾಹಿತ್ಯದೊಂದಿಗಿನ ಪ್ರವಚನ...... ಇದು ಮಹಾನುಭಾವ ಜತ್ತಿಯವರ ವೈಶಿಷ್ಟ್ಯ.

ಅವರ ಕೀರ್ತಿ ನಾಡಿನ ಮೂಲೆ ಮೂಲೆಗೂ ಹರಡಿದೆ. ಅವರನ್ನು ಕಂಡರಿಯದ ಶರಣರಿಲ್ಲ. ಅವರು ಸೇವೆಗೈಯದ ಮಠ-ಮಂದಿರಗಳಿಲ್ಲ. ಅವರನ್ನು ಮನದುಂಬಿ ಹರಗುರು ಚರಮೂರ್ತಿಗಳು, ಜಗದ್ಗುರುಗಳು ಹರಿಸಿದ್ದಾರೆ. ಬಸವ ಸಾಹಿತ್ಯ ಹೊತ್ತು ಗ್ರಾಮ-ಗ್ರಾಮಕ್ಕೂ ಸಂಚರಿಸುತ್ತ ಮನುಕುಲಕೆ ತತ್ತ್ವದರ್ಶನ ಮಾಡಿಸುತ್ತಿರುವ ಶರಣರವರು.

ಯಾವುದೇ ವ್ಯಕ್ತಿ ಮುಂದೇನಾಗಬಲ್ಲ ಎಂಬುದನ್ನು ಎಳೆತನದಲ್ಲಿಯೇ ಕಂಡುಕೊಳ್ಳಲು ಸಾಧ್ಯ. ಸ್ವಾಮಿ ವಿವೇಕಾನಂದರು ಐದು ವರ್ಷದ ಮಗುವಿದ್ದಾಗ ಮೈತುಂಬ ಭಸ್ಮ ಬಳಿದುಕೊಂಡು ಧ್ಯಾನದಲ್ಲಿ ಮಗ್ನರಾಗುತ್ತಿದ್ದರಂತೆ. ಅವರ ತಾಯಿ. ಯಾಕೆ ಮಗು ಎಂದು ಕೇಳಿದಾಗ "ನಾನು ಶಿವ ನಾನು ಶಿವ" ಎಂದನಂತೆ. ಮುಂದೆ ಆತನೆ ಸಿಡಿಲು ಸನ್ಯಾಸಿಯಾಗಿ ನೈಷ್ಠಿಕ ಬ್ರಹ್ಮಚಾರಿಯಾಗಿ ಜಾಗತಿಕ ಮಟ್ಟದಲ್ಲಿ ಭಾರತದ ಕೀರ್ತಿ ಪತಾಕೆಯನ್ನು ಹಾರಿಸಿದ. ಅದನ್ನೇ ಕಿರಿದರಲ್ಲಿ ಗಮನಿಸಿದರೆ ದಾನಪ್ಪ ಎಳೆತನದಲ್ಲಿಯೇ ತಂದೆ-ತಾಯಿಗಳ ಸುಸಂಸ್ಕೃತಿಯಲ್ಲಿ ಬೆಳೆದು ಗುರು-ಲಿಂಗ-ಜಂಗಮರಲ್ಲಿ ಅಪಾರ ಭಕ್ತಿ ಶ್ರದ್ಧೆ ಬೆಳೆಸಿಕೊಂಡವರು. ಇವರ ಹೆತ್ತಮ್ಮ ದೊಡ್ಡಮ್ಮ. ತಾಯಿ ಗುಡ್ಡಾಪೂರ ದಾನಮ್ಮದೇವಿಯಲ್ಲಿ ಅಪಾರ ಭಕ್ತಿಯಿಟ್ಟು ಈ ಮಗುವನ್ನು ಪಡೆದು ದಾನಪ್ಪನೆಂಬ ಹೆಸರಿಟ್ಟರು.

ಸಾತ್ವಿಕ, ಸರಳ ಸ್ವಭಾವದವರಾದ ಇವರ ಓದು ಒಕ್ಕಾಲು. ಬುದ್ಧಿ ಮುಕ್ಕಾಲು. ಓದುವ ಹವ್ಯಾಸವನ್ನು ಬಲವಾಗಿ ಬೆಳೆಸಿಕೊಂಡರು. ವಾಙ್ಮಯ ತಪಸ್ವಿಗಳಾದರು. ಕನ್ನಡ ಸಾಹಿತ್ಯ. ವಚನ ಸಾಹಿತ್ಯವನ್ನು ಅಧ್ಯಯನ ಮಾಡಿದರು. ಬೀಚಿಯವರ ಸಾಹಿತ್ಯವನ್ನು ಅರಗಿಸಿಕೊಂಡರು. ಅವರ ತಿಮ್ಮ ಇವರ ಆತ್ಮೀಯ ಗೆಳೆಯ. ತಿಮ್ಮನಿಗೂ-ದಾನಪ್ಪನವರಿಗೂ ಅವಿನಾಭಾವ ಸಂಬಂಧ. ಅಭಿನಯ ಇವರಿಗೆ ನೈಸರ್ಗಿಕ ಕಲೆ. ಆಟ, ನಾಟಕ, ರೇಡಿಯೋ ನಾಟಕಗಳಲ್ಲಿ ಇವರದು ವಿವಿಧ ಪಾತ್ರಾಭಿ

ನಯ. ಸ್ತ್ರೀ ಪಾತ್ರದಲ್ಲಿ ಪ್ರಸಿದ್ಧಿ. ನಾಟಕ-ನಟನೆ ಸ್ಥಗಿತವಾದರೂ ನಟನಾಕಲೆ ಪ್ರವಚನ, ಕೀರ್ತನ ಕಾರ್ಯಕಕ್ಕೆ ಪೋಷಕವಾಯಿತು. ಹದಿಹರೆಯದಲ್ಲಿಯೇ ಆತ್ಮ ಜಾಗೃತವಾಯಿತು. ಕ್ಷಣಿಕವಾದುದನ್ನು ಕಡೆಗಣಿಸಿದರು. ಏನಾದರಾಗು ಮೊದಲು ಮಾನವನಾಗು ಎಂಬ ವಾಕ್ಯ ಅವರನ್ನು ಎಚ್ಚರಿಸಿತು.

ದಾರ್ಶನಿಕ ಸಾಹಿತಿ ಕವಿಗುರು ಡಾ. ಜ.ಚ.ನಿ. ಸದ್ಗುರುಗಳು ಶಿಷ್ಯನನ್ನೇ ಹುಡುಕುತ್ತ ಬಂದರು. ಲಿಂಗದೀಕ್ಷೆ ಕೊಟ್ಟರು.

ನರಜನ್ಮ ತೊಡೆದು ಹರಜನ್ಮ ಕೊಟ್ಟರು. ಭವಿಯೆಂಬುದನ್ನು ತೊಡೆದು ಭಕ್ತನನ್ನಾಗಿಸಿದರು. ಭವಬಂಧನವ ಬಿಡಿಸಿ ಪರಮ ಸುಖವ ತೋರಿದರು. ಶಿರದರಮನೆಯ ಕರವಸ್ತುವನ್ನು ಕರದರಮನೆಗೆ ತಂದು ಕೊಟ್ಟರು. ನೀನೊಬ್ಬ ಜ್ಞಾನದಾಸೋಹಿಯಾಗು ಎಂದು ಹರಸಿದರು. ೧೯೭೦ರಿಂದಲೇ ಶರಣರ ಚರಿತ್ರೆಗಳ ಪ್ರವಚನ ಮಾಡಲು ಪ್ರಾರಂಭಿಸಿದರು. ಹಳ್ಳಿ, ಪಟ್ಟಣಕ್ಕೆ ಸಂಚರಿಸುತ್ತ ಪ್ರವಚನ, ಪುರಾಣ, ಕೀರ್ತನೆ ಮಾಡತೊಡಗಿದರು. ಸಂಗೀತ, ಸಾಹಿತ್ಯ, ಅಭಿನಯ, ಜಾನಪದ ಸೊಗಡು ಸಮ್ಮಿಲನಗೊಂಡ ನವರಸದಿಂದ ಕೂಡಿದ ಇವರ ಪ್ರವಚನ ಶ್ರಾವಕರನ್ನು ಮಂತ್ರಮುಗ್ಧಗೊಳಿಸುತ್ತದೆ. ಸುಂದರವಾದ ಶೈಲಿ, ನಗದವರನ್ನು ನಗಿಸುವ ಕಲೆ. ಹೃದಯವನ್ನೇ ತಟ್ಟಿ ಕರುಣೆಯ ಕಣ್ಣೀರು ಹರಿಸುವ ಇವರ ಕಲೆ ಬೆರಗುಗೊಳಿಸುವಂಥದ್ದು.

ಹಳ್ಳಿಯ ಮುಗ್ಧೆ ಮದುವೆಯಾದ ಹೊಸದರಲ್ಲಿ ಗಂಡನೊಡನೆ ಮಧುಚಂದ್ರಕ್ಕೆ ಹೋಗಿ, ಬೆಂಗಳೂರು, ಮೈಸೂರನ್ನು ನೋಡಿ ಬಂದು ತನ್ನ ಕೆಳದಿಯರಿಗೆ ಹೇಳುವ ಆ ಜಾನಪದ ಗೀತೆ ಇವರಿಂದಲೇ ಕೇಳಬೇಕು.

ಒಣಹರಟೆ ಇವರಿಗೆ ಸೇರುವದಿಲ್ಲ. ಸದಾ ಅಭ್ಯಾಸವನ್ನೇ ಮಾಡುವ ಹವ್ಯಾಸ. ಹೊಸ ಹೊಸ ವಿಷಯಗಳನ್ನು, ಕಾವ್ಯ ಸಾಹಿತ್ಯವನ್ನು ಅಭ್ಯಾಸ ಮಾಡುತ್ತ ಚಿಂತನೆ ಮಾಡುವದು, ಗೀತೆಗಳನ್ನು ಸಂಗೀತ ವಾದ್ಯಗಳಲ್ಲಿ ಮೇಳೈಸುವದು, ವಿಷಯಗಳ ಚರ್ಚೆ ಮಾಡುವದು ಅವರ ದಿನಚರಿಯಾಗಿದೆ.

ಪುರಾಣಗಳು ಹಳೆಯದಾದರೂ ಅದಕ್ಕೆ ಹೊಸತನ ತುಂಬಿ ಆಧುನಿಕ ಮೌಲ್ಯಗಳೊಡನೆ, ವೈಜ್ಞಾನಿಕ ನೆಲೆಗಟ್ಟಿನ ಮೇಲೆ ರಸತುಂಬಿ, ಪುರಾಣ ಪ್ರವಚನ ಹೇಳುವ ಆಧುನಿಕ ಹರಿಕಾರರು ಇವರೆಂದರೆ ಅತಿಶಯೋಕ್ತಿಯಾಗಲಾರದು. ಭಾರವಾದ ಪ್ರಪಂಚವನ್ನು ನಿರಾಭಾರಿಯನ್ನಾಗಿಸಿ ದಿವ್ಯದರ್ಶನ ಮಾಡಿಸುವ ತತ್ವಜ್ಞಾನಿ ಇವರು.

ಶತೇಷು ಜಾಯತೆ ಶೂರಾಃ
ಸಹಸ್ರೇಷು ಚ ಪಂಡಿತಃ
ದಶಸಹಸ್ರೇಷು ವಕ್ತಾರಃ

ಎಂಬ ಮಾತಿನಂತೆ ಅಪ್ರತಿಮ ವಾಕ್ಪಟು ದಾನಪ್ಪ ಜತ್ತಿಯವರು.

ಹಿಡಿದ ನೇಮವ ಬಿಡೆನೆಂಬ ಛಲ ಅವರದು. ಪ್ರವಚನಕ್ಕೆ ನಿರ್ದಿಷ್ಟಪಡಿಸಿದ ವೇಳೆಯಲ್ಲಿ ವೇದಿಕೆಯಮೇಲೆ ಉಪಸ್ಥಿತರಿರುತ್ತಾರೆ. ಜನ ಬರಲಿ ಬರದಿರಲಿ, ವ್ಯವಸ್ಥಾಪಕರು ಸರಿಯಾದ ವ್ಯವಸ್ಥೆ ಮಾಡಿರಲಿ ಅಥವಾ ಮಾಡದಿರಲಿ ಇವರು ಮಾತ್ರ ಸಂಯಮನಿಷ್ಠರು. ಸಮಯಾನುಸಾರ ಕಾರ್ಯಕ್ರಮವನ್ನು ಪ್ರಾರಂಭಿಸುತ್ತಾರೆ. ಅಖಂಡವಾಗಿ ಎರಡು ತಾಸುಗಳವರೆಗೆ ನಿರರ್ಗಳವಾಗಿ ಪ್ರವಚನ ಮಾಡುತ್ತಾರೆ. ಆ ಭಕ್ತಿರಸದಲ್ಲಿ ತಮ್ಮನ್ನೇ ತಾವು ಮರೆಯುತ್ತಾರೆ. ಸಭಿಕರನ್ನು ಮೈಮರೆಸುತ್ತಾರೆ. ತಾಸುಗಳು ನಿಮಿಷಗಳಾಗುತ್ತವೆ. ಇವರು ಪ್ರವಚನ ಮಾಡುವ ಗ್ರಾಮಗಳಲ್ಲಿ ಎಲ್ಲ ಜನರೂ ಮನೆಗಳಿಗೆ ಕೀಲಿಹಾಕಿ ಬರುತ್ತಾರೆ. ಅಷ್ಟೇ ಅಲ್ಲ ಸುತ್ತಲಿನ ಗ್ರಾಮಗಳಿಂದ ಜನ ತಂಡೋಪ ತಂಡವಾಗಿ ಆಗಮಿಸುತ್ತಾರೆ. ಒಮ್ಮೆ ಒಬ್ಬರು ಬಂದು ಇವರ ಪ್ರವಚನ ಕೇಳಿದರೆ ಮುಗಿಯಿತು. ಕೊನೆಯವರೆಗೂ ಆ ವ್ಯಕ್ತಿ ತಪ್ಪದೇ ಪ್ರವಚನವನ್ನಾಲಿಸಲು ಹಾಜರ ಆಗುತ್ತಾನೆ.

ಎನಗಿಂತ ಕಿರಿಯರಿಲ್ಲ ಶಿವಶರಣರಿಗಿಂತ ಹಿರಿಯರಿಲ್ಲ ಎಂಬ ವಚನದಂತೆ ಹಮ್ಮು-ಬಿಮ್ಮುಗಳಿಲ್ಲದ ಸರಳ, ಸಾಧಾರಣ ಜೀವನ ಸಾಗಿಸುವ ಮಹಾನುಭಾವ ಜತ್ತಿ. ಹೋದಲ್ಲೆಲ್ಲ ಜನಪ್ರಿಯತೆ ಸಂಪಾದಿಸುತ್ತಾರೆ. ಸಣ್ಣ ಮಕ್ಕಳೊಡನೆ ಹೊಂದಿಕೊಂಡು ಹೋಗುತ್ತಾರೆ.

೧೯೮೮ ರಲ್ಲಿ ಹಿರೇಪಡಸಲಗಿ (ಜಮಖಂಡಿ ತಾಲೂಕ) ಯ ಹಿರೇಮಠದಲ್ಲಿ ಪಟ್ಟಾಧಿಕಾರ ಕಾರ್ಯಕ್ರಮ. ಅದರಂಗವಾಗಿ ದಾನಪ್ಪ ಜತ್ತಿ ಶಾಸ್ತ್ರಿಗಳ ಪ್ರವಚನ ಎರಡು ವಾರ ನಡೆಯಿತು. ಪ್ರವಚನ ಪ್ರಾರಂಭವಾಗಿ ನಾಲ್ಕುದಿನ ಆಗಿದೆ. ದಿನ ದಿನಕ್ಕೂ ಅಧಿಕ ಸಂಖ್ಯೆಯಲ್ಲಿ ಜನಸೇರಿದೆ. ಪ್ರವಚನ ಆಲಿಸುವ ಜನಸ್ತೋಮ ಎಂದಿನಂತೆ ಅಂದೂ ಮೈಮರೆತಿದೆ. ಪ್ರವಚನ ಭರದಿಂದ ಸಾಗಿದೆ. ಅದೇ ಸಮಯಕ್ಕೆ ಅವರ ಮನೋನಿಗ್ರಹವನ್ನು ಒರೆಗೆ ಹಚ್ಚುವ ಸುದ್ದಿಯೊಂದು ಬಂದಿತು. ದಾನಪ್ಪ ಜತ್ತಿಯವರ ತಂಗಿ ಮಹಾಲಿಂಗವ್ವ ವಿಜಾಪೂರ ಆಸ್ಪತ್ರೆಯಲ್ಲಿ ನಿಧನಳಾಗಿದ್ದು ಹೋರ್ತಿಯಲ್ಲಿ ಅಂತ್ಯಸಂಸ್ಕಾರ ಎಂಬ ದಾರುಣ ವಾರ್ತೆ ವೇದಿಕೆಯ ಮೇಲಿರುವ ಶಾಸ್ತ್ರಿಗಳಿಗೆ ತಲುಪಿತು. ಪ್ರವಚನ ಮಂಗಲನಂತರ ನಿಟ್ಟುಸಿರೊಂದನ್ನು ಬಿಟ್ಟರು. ಕೂಡಲೇ ದ್ವಿಚಕ್ರವಾಹನದ ಮೇಲೆ ರಹದಾರಿಗೆ ಬಂದು ಬಸ್ಸಿನಿಂದ ರಾತ್ರಿ ಹೋರ್ತಿಗೆ ಪ್ರಯಾಣ ಮಾಡಿದರು. ತಂಗಿಯ ಆತ್ಮಕ್ಕೆ ಅಶ್ರುತರ್ಪಣ ನೀಡಿ

ಮರುದಿನ ಸಂಜೆ ೫ ಗಂಟೆಯ ಒಳಗಾಗಿ ಪ್ರವಚನಕ್ಕಾಗಿ ಹಾಜರಾದರು. ತಮ್ಮ ದುಃಖ ದುಮ್ಮಾನ ಮರೆತು ಎಂದಿನಂತೆ ರಸಭರಿತ ಪ್ರವಚನ ಮಾಡಿದರು. ಮಾನವನ ನಿತ್ಯ ಜೀವನದಲ್ಲಿ ಸಿಹಿ–ಕಹಿ ಘಟನೆಗಳು ಜರುಗುತ್ತಲೇ ಇರುತ್ತವೆ. ಸುಖ ಬಂದಾಗ ಹಿಗ್ಗದೆ. ದುಃಖ ಬಂದಾಗ ಕುಗ್ಗದೆ ಬಾಳಿನಲ್ಲಿ ಮುನ್ನಡೆಯುವುದೇ ಶರಣರ ಆದರ್ಶ. ಆ ಆದರ್ಶದ ಕಿಂಚಿತ್‌ಭಾಗ ದಾನಪ್ಪ ಜತ್ತಿಯವರ ನಡೆ-ನುಡಿಯಲ್ಲಿ ಕಾಣಬಹುದು. ಅವರ ಕಾಯಕ ನಿಷ್ಠೆ ಮೆಚ್ಚುವಂತಹದು.

ಬಾಳನ್ನು ಹಸನಾಗಿಸಿಕೊಂಡವರು. ವಚನ ಸಾಹಿತ್ಯದ ಜ್ಯೋತಿಯನ್ನು ಶರಣ ಸಂದೇಶವನ್ನು ಗ್ರಾಮ–ಗ್ರಾಮಗಳಿಗೂ, ಮನೆ–ಮನೆಗೂ ಮುಟ್ಟಿಸುವ ಮಣಿಹ ಕೈಕೊಂಡವರು. ವಿಶ್ರಾಂತಿಯನ್ನರಿಯದೆ ಸದಾ ಕಾಯಕದಲ್ಲಿ ನಿರತರಾದವರು. ಸಾಧನೆಯ ಸೋಪಾನಗಳನ್ನೇರುತ್ತ ಸದ್ಧರ್ಮ ಸಿರಿಗಿರಿಯನ್ನು ಏರಿದ ದಾನಪ್ಪ ಜತ್ತಿ ವಿಜಾಪೂರ ಜಿಲ್ಲೆಯ ಕಲಾಕುಸುಮ. ಈ ಹೂವಿನಪರಿಮಳ ನಾಡಿನ ನಾಲ್ದೆಸೆಗಳಲ್ಲಿ ಇನ್ನೂ ಹರಡಿ, ಆಯುರಾರೋಗ್ಯ ಪರಿಸರವನ್ನುಂಟುಮಾಡಲಿ ಎಂದು ಹಾರೈಸುವೆ.

# ನನ್ನೂರಿನ ಪ್ರವಚನ ಪ್ರಭಾಕರ

**ಈರಯ್ಯ ಕೆ. ಕಣಬೂರ**

'ದಾನಪ್ಪ ಜತ್ತಿ' ಕೇಳಲು, ಹೇಳಲು ಸೊಗಸಾದ ಹೆಸರು. ಉಸಿರಿನೊಂದಿಗೆ ಆ ಹೆಸರು ಸೂಸಿ ಬರುವುದರ ಜೊತೆಗೆ ಹಾಸ್ಯದ ಹೊನಲು ಹರಿದು ಮುದುಡಿದ ಜನಮನದ ಬದುಕಿಗೆ ಚೈತನ್ಯ ನೀಡುವುದು. ಈ ಕಾರಣದಿಂದಲೇ ಪುರಾಣ, ಪ್ರವಚನ ಎಂದಕೂಡಲೇ ದಾನಪ್ಪ ಜತ್ತಿ ಸ್ಮರಣೆಗೆ ಬರುವದು. ಇವರು ನನ್ನೂರಿನ ಭಾಗ್ಯದ ಸಿರಿ, ನಮ್ಮ ಕನ್ನಡ ನಾಡಿನ ಕೀರ್ತಿಯ ಗರಿ.

ಪ್ರಾಥಮಿಕ ಹಂತದ ಶಿಕ್ಷಣವನ್ನಷ್ಟೇ ಮುಗಿಸಿರುವ ದಾನಪ್ಪನವರು ಬಾಲ್ಯ ದಿಂದಲೇ ಕಲೆಯ ಗರಡಿಯತ್ತ ಮನಸ್ಸು ಹರಿಸಿ, ಅಪಾರ ಸಾಧನೆ ಮಾಡಿ ದವರು. ನಾಟಕದ ಕಲೆಯ ಗೀಳು ರಕ್ತಗತವಾಗಿ ಬಣ್ಣದೊಂದಿಗೆ ಬೆರೆತು ರಂಗ ಭೂಮಿಯಮೇಲೆ ಮೂರ್ತಗೊಂಡಿತು. ಗೆಳೆಯರ ಬಳಗದೊಡನೆ ನಾಟಕ ಸಂಘ ವೊಂದನ್ನು ಸಂಘಟಿಸಿ. ಸ್ತ್ರೀ ಪಾತ್ರಗಳಲ್ಲಿ ರಸಿಕರ ಹೃದಯಕ್ಕೆ ಲಗ್ಗೆ ಹಾಕಿ ಸೈ ಅನಿಸಿಕೊಂಡ ಅಂಜದ ಕಲಾವಿದ ಅವರು. ಇಂದಿಗೂ ಅವರ ಹೆಣ್ಣು ಪಾತ್ರಾಭಿನಯ, ಲಜ್ಜೆ ತುಂಬಿದ ಮಾತುಗಾರಿಕೆ ನಮಗೆಲ್ಲ ಜೀವಂತ ಪ್ರತೀಕಗಳಾಗಿ ಗೋಚರಿಸುತ್ತವೆ.

ನಾಟಕದ ಅಭಿನಯದೊಂದಿಗೆ ಸಾಹಿತ್ಯದ ಕ್ರಿಯೆಯಲ್ಲಿ ತಮ್ಮನ್ನು ತೊಡಗಿಸಿ ಕೊಂಡ ದಾನಪ್ಪ ಒಳ್ಳೆಯ ಕೃತಿಗಳನ್ನು ಸಾರಸ್ವತ ಪ್ರಪಂಚಕ್ಕೆ ನೀಡಿ ಸಹೃದಯರಿಗೆ ಬೆರಗುಮೂಡಿಸಿದ್ದಾರೆ. ಕಲೆ, ವ್ಯಾಪಾರ, ನಟನೆ, ಸಾಹಿತ್ಯ ರಚನೆಯ ಬದುಕು ೧೯೭೨ರಲ್ಲಿ ಸ್ಥಿತ್ಯಂತರಗೊಂಡು ದಿಗ್ಗಜರಾದ ಸೂರ್ಯ ಸಿಂಹಾಸನಾಧೀಶ್ವರ ಡಾ. ಜ.ಚ.ನಿ. ಯವರ ಕೃಪೆಯಿಂದ ದೀಕ್ಷಾಬದ್ಧರಾಗಿ ಪುರಾಣ, ಪ್ರವಚನ, ಕೀರ್ತನೆಯ ವಿಶಿಷ್ಟ ಕಲೆಯ ಹಾದಿ ಹಿಡಿದು ಯಶಸ್ಸು ಪಡೆಯುವಲ್ಲಿ ದಾನಪ್ಪ ಮೇಲುಗೈ ಸಾಧಿಸಿದರು.

ಈ ಸಾಧನೆಯೊಂದಿಗೆ ಸಾಮಾಜಿಕ ರಂಗದಲ್ಲೂ ದಾನಪ್ಪ ಮಿಂಚಿದರು. ಪಂಚಾಯಿತಿಯ ಚೇರಮನ್ನರಾಗಿ ಸಾರ್ವಜನಿಕರ ಹಿತಕ್ಕಾಗಿ ನಿಷ್ಕಾಮವಾದ ರೀತಿ ಯಲ್ಲಿ ದುಡಿದರು. ಗ್ರಂಥಾಲಯವೊಂದನ್ನು ಸ್ಥಾಪಿಸಿ, ಊರ ಜನತೆಗೆ ವಾಚನಾಭಿ ರುಚಿಯನ್ನು ಬೆಳೆಸಿದರು.

ಮೊಟ್ಟಮೊದಲಿಗೆ ಇವರ ಪ್ರವಚನ ೧೯೭೧ರಲ್ಲಿ ಬಾಬಾನಗರದಿಂದ ಪ್ರಾರಂಭ ವಾದರೂ ಅದು ಇಂದು ಕರ್ನಾಟಕವನ್ನಷ್ಟೇ ಅಲ್ಲ ಆಂಧ್ರ, ಮಹಾರಾಷ್ಟ್ರ ರಾಜ್ಯ

ಗಳನ್ನೆಲ್ಲ ವ್ಯಾಪಿಸಿ ನಿಂತಿದೆ. ಇದು ಅಲ್ಲದೆ ಪ್ರವಚನ ಕಾರಣಕ್ಕಾಗಿ ದಾನಪ್ಪ ಇಂದು ಅವಿಶ್ರಾಂತವಾಗಿ ಪರಿಶ್ರಮಿಸುವ ವ್ಯಕ್ತಿಯಾಗಿದ್ದಾರೆ. ಅವರನ್ನು ಯಾರೇ ಪುರಾಣ ಹೇಳಲು ಕೇಳಿಕೊಳ್ಳುವುದಾದರೆ ನಾಲ್ಕೈದು ತಿಂಗಳು ಮೊದಲೇ ವೀಳ್ಯ ಕೊಟ್ಟು ಕಾರ್ಯಕ್ರಮಕ್ಕೆ ಒಪ್ಪಿಕೊಳ್ಳುವಂತೆ ಮಾಡುವದನ್ನು ಕಂಡಾಗ ನನಗಂತೂ ಅಚ್ಚರಿ ಯೊಂದಿಗೆ ತುಂಬಾ ಸಂತೋಷವೂ ಆಗುತ್ತದೆ.

ಕಥೆಯೊಂದಿಗೆ ಉಪಕಥೆ, ಬೇಸರ ತೊಲಗಿಸುವ ಶುದ್ಧ ಹಾಸ್ಯ, ಶೃತಿಗೊಂಡ ಸಂಗೀತದೊಂದಿಗೆ ಭಾವ ತುಂಬಿದ ಹಾಡುಗಾರಿಕೆ, ಆಕರ್ಷಕ ಅಭಿನಯ, ಗಡುಚಾದ ವಿಷಯವನ್ನು ನಿರೂಪಿಸುವ ಸರಳತೆ ಎಂಥವರನ್ನು ಮಂತ್ರಮುಗ್ಧರನ್ನಾಗಿಸುತ್ತದೆ. ವರ್ಷದ ೮–೧೦ ತಿಂಗಳು ದಾನಪ್ಪ ಹೊರಗೆ ಇರುವ ಇವರನ್ನು ತಿಕೋಟಿದಲ್ಲಿ ಕಾಣುವುದು ನನಗಂತೂ ಅಪರೂಪದ ವಿಷಯವೇ.

ದಾನಪ್ಪನವರು ರೇಡಿಯೋ ಕೀರ್ತನೆಗಳ ಮೂಲಕ ಇಂದು ಅತ್ಯಂತ ಜನ ಪ್ರಿಯರಾಗಿದ್ದಾರೆ. ಶಿವಯೋಗಿ ಸಿದ್ಧರಾಮ, ಭಕ್ತ ಮಾರ್ಕಂಡೇಯ, ಮೇದಾರ ಚೆನ್ನಯ್ಯ, ತಿರುನೀಲಕಂಠ, ದೇವರದಾಸಿಮಯ್ಯ, ನಾಲತ್ವಾಡದ ವೀರೇಶ್ವರ, ಮೋಳಿಗೆಯ ಮಾರಯ್ಯ, ಅಕ್ಕಮಹಾದೇವಿ, ಸುಲಿಯ ಚಂದಯ್ಯ – ಹೀಗೆ ಅನೇಕ ಶಿವಶರಣರ ಬಗ್ಗೆ ರೇಡಿಯೋದಲ್ಲಿ ಕೀರ್ತನೆ ಮಾಡಿ, ಕರ್ನಾಟಕದ ಮೂಲೆ ಮೂಲೆಗೂ ದಾನಪ್ಪ ಜತ್ತಿ ತಮ್ಮ ಪ್ರತಿಭೆಯನ್ನು ಹರಡಿ ನಿಂತಿದ್ದಾರೆ. ಇಂದಿನ ಸ್ಪುಟ್ನಿಕ್ ಯುಗದಲ್ಲೂ ಜತ್ತಿಯವರ ಧಾರ್ಮಿಕ ಪ್ರವೃತ್ತಿ ಜನತೆಯನ್ನು ಸ್ಪಂದಿಸುತ್ತಿರು ವುದು ಅಭಿಮಾನದ ಸಂಗತಿ ಕೂಡ. ಶಿಶಿರ ವಸಂತ ಅವರ ಬದುಕಿನಲ್ಲಿ ಬಣ್ಣ ದುಂಬಿ, ಗಂಧ ತೀಡಲೆಂದೇ ನಾನು ಹಾರೈಸುವೆ.

# ನಾನು ಕಂಡ ದಾನಪ್ಪನವರು

---

**ಸಿದ್ದಣ್ಣ ವಡಿಗೇರಿ**

ಕನ್ನಡನಾಡಿನ ಧಾರ್ಮಿಕ ಪರಂಪರೆ ಅನಂತವಾದುದು, ಶ್ರೀಮಂತವಾದುದು. ಇದನ್ನು ಉಳಿಸಿ ಬೆಳೆಸಿಕೊಂಡು ಬದುಕಿನೊಂದಿಗೆ ನಡೆಯಿಸಿಕೊಂಡು ಬರುತ್ತಿರುವ ಕೀರ್ತಿ ಶಿವಶರಣರಿಗೆ ಸಲ್ಲುವುದು. ಈ ಶರಣರ ಜೀವನವನ್ನು ಸಂಪೂರ್ಣವಾಗಿ ಅರ್ಥೈಸಿಕೊಂಡು ತಮ್ಮ ಆಚಾರ ವಿಚಾರಗಳೊಂದಿಗೆ ಜನತೆಯ ಹೃದಯ ಪೀಠದಲ್ಲಿ ಶಾಶ್ವತವಾದ ಪ್ರೀತಿಯ ಸಂಕೇತವಾಗಿ ನೆಲಿಸಿ ಧಾರ್ಮಿಕ ಜಾಗೃತಿಯನ್ನುಂಟು ಮಾಡುವ ಕಾಯಕದಲ್ಲಿ ನಿಷ್ಠೆಯನ್ನು ನೆಲಿಸಿ ಹೆಸರುವಾಸಿಯಾಗಿರುವ ಶ್ರೇಷ್ಠ ಪ್ರವಚನಪಟು ದಾನಪ್ಪ ಜತ್ತಿ ನಮ್ಮ ನಡುವೆ ನಂದಾದೀಪವಾಗಿ ಬೆಳಗುತ್ತಿದ್ದಾರೆ.

ಮನೆತನದ ವೃತ್ತಿಯೊಂದಿಗೆ ರಾಜಿಮಾಡಿಕೊಳ್ಳದೇ. ರಕ್ತಗತವಾದ ಕಲೆಯೊಂದಿಗೆ ತಮ್ಮನ್ನು ಶ್ರೀಗಂಧದ ಕೊರಡಿನಂತೆ ತೇಯ್ದುಕೊಂಡು ಇದೀಗ ಒಂದು ಹಂತ ತಲುಪಿರುವ ದಾನಪ್ಪ ಜತ್ತಿಯವರು ಭಕ್ತಿಯೊಂದಿಗೆ, ಸಂಗೀತದೊಂದಿಗೆ. ಮಾನವೀಯ ಭಾವದೊಂದಿಗೆ. ಹಾಸ್ಯದೊಂದಿಗೆ. ಮಹಾತ್ಮರ ವಿಚಾರದೊಂದಿಗೆ. ಶಿವಶರಣರ ಆಚಾರದೊಂದಿಗೆ ಮಿಳಿತಗೊಂಡು ಧರ್ಮ. ದೇವರು. ಭಕ್ತಿ. ಶ್ರದ್ಧೆ ಎಂದರೆ ಮೂಗು ಮುರಿಯುತ್ತಿರುವ. ಬದುಕನ್ನು ಕಷ್ಟಕ್ಕೆ ಈಡುಮಾಡಿಕೊಂಡು ತತ್ತರಿಸುತ್ತಿರುವ ಜನತೆಯನ್ನು ಮೋಡಿ ಮಾತಿನಿಂದ, ಚಾಕಚಕ್ಯತೆಯಿಂದ ತಮ್ಮತ್ತ ಆಕರ್ಷಿಸಿಕೊಂಡು ಅವರಿಗೆ ಕೋಮಲ ಮಾತಿನಲ್ಲಿ ಜ್ಞಾನದಾಸೋಹ ಏರ್ಪಡಿಸುವಲ್ಲಿ ಯಶಸ್ವಿಯಾಗುತ್ತಿದ್ದಾರೆ.

ಯಾವ ವಿಶ್ವವಿದ್ಯಾಲಯದ ಪದವಿ ಪಡೆದಿರದ ದಾನಪ್ಪ ಸ್ವತಃ ಒಂದು ಜ್ಞಾನದೇಗುಲವೇ ಆಗಿದ್ದಾರೆ. ಲೋಕದನುಭವವನ್ನು ತಮ್ಮದನ್ನಾಗಿಸಿಕೊಂಡು ಅದರೊಳಗೆ ಮಾತು ಬೆರೆಸಿ. ರಾಗ ಸಂಯೋಜಿಸಿ. ಹಾವಭಾವದ ರಸ ಉಣಿಸಿ, ನಿಜವಾದ ಮನುಷ್ಯ ಯಾರು ? ಅವನ ವ್ಯಕ್ತಿತ್ವ ಹೇಗಿರಬೇಕು ? ಶರಣರ ಬದುಕು ಸಾರ್ಥಕಗೊಂಡ ರೀತಿ, ಅದನ್ನು ಅನುಸರಿಸಿ ನಡೆಯುವ ರಿವಾಜುಗಳನ್ನು ಉದಾಹರಿಸಿ. ಜನರ ಮನಸ್ಸಿನ ಕತ್ತಲೆಯನ್ನು ಕಳೆಯುತ್ತ, ಪ್ರೀತಿ ವಿನಯದೊಂದಿಗೆ ಅವರನ್ನು ಬೆಳಕಿನ ದಾರಿಯತ್ತ ಒಯ್ಯುವ ಪುಣ್ಯದ ಕಾರ್ಯದಲ್ಲಿ ನಿರತರಾಗಿರುವ ದಾನಪ್ಪ, ನಿಜವಾಗಿ ನಮ್ಮ ಸೌಭಾಗ್ಯವೆಂದರೆ ಅತಿಶಯೋಕ್ತಿ ಎನಿಸಲಾರದೇನೋ ?

ಬಿಟ್ಟೂ ಬಿಡದೆ ಹನ್ನೆರಡು ಮಾಸಗಳು ಪುರಾಣ–ಕೀರ್ತನೆ–ಪ್ರವಚನಗಳ ಕಾರ್ಯಕ್ರಮಗಳಿದ್ದರೂ ದಾನಪ್ಪನವರ ಮುಖದಲ್ಲಿನ ನಗೆ ಮಾಸುವದಿಲ್ಲ. ರೂಢಿಸಿಕೊಂಡುಬಂದ ಅಚ್ಚುಕಟ್ಟುತನ ಅಳಿದುಹೋಗುವುದಿಲ್ಲ. ಮಗುವಿನ ಹೂಮನಸ್ಸು

ಬತ್ತುವುದು ಇಲ್ಲ. ಒಡನಾಡಿಗಳ ಸಂಬಂಧದಲ್ಲಿನ ಪ್ರೀತಿ, ವಿಶ್ವಾಸ ಕಮ್ಮಿಯಾಗುವುದಿಲ್ಲ. ಇದು ಅವರ ಜೀವನದ ವೈಶಿಷ್ಟ್ಯ. ಹೀಗಾಗಿ ದಾನಪ್ಪ ಎಂದರೆ ಎಲ್ಲರಿಗೂ ಪ್ರೀತಿ, ಗೌರವ. ಅವರ 'ಬಸವಪುರಾಣ', 'ಶರಣ ಚರಿತಾಮೃತ', 'ವೀರೇಶ್ವರ ಚರಿತೆ' ಇತ್ಯಾದಿ ಪ್ರವಚನ–ಪುರಾಣ ವಸ್ತುಗಳು ಜನತೆಯ ಹೃದಯದಲ್ಲಿ ಹುಯಿಲೆಬ್ಬಿಸುತ್ತವೆ. ಭಕ್ತಿಯ ಅಲೆಯೆಬ್ಬಿಸುತ್ತವೆ. ಅಂತಃಕರಣದಲ್ಲಿ ಮಾನವೀಯ ಭಾವಗಳನ್ನು ಮೂಡಿಸುತ್ತವೆ.

ಅಭಿನಯ, ಸುಶ್ರಾವ್ಯ ಹಾಡುಗಾರಿಕೆ, ಸಾಹಿತ್ಯ ರಚನೆ, ನಗೆಮುಖದ ಮಾತು, ಆಡಂಬರವಿಲ್ಲದ ಪ್ರೀತಿ ತಮ್ಮ ಕಲೆಯಲ್ಲಿ ಮೇಳವಿಸಿಕೊಂಡಿರುವ ಜತ್ತಿ, ನಮ್ಮ ನೆಲದ ಸಂಸ್ಕೃತಿ ಪರಂಪರೆಯ ಪ್ರತೀಕವಾಗಿ ನಿಲ್ಲುತ್ತಾರೆ. ಭಾವೈಕ್ಯ ಗುಣ, ಜಾತ್ಯಾತೀತ ಧೋರಣೆ, ಬಸವತತ್ವ ನಿರೂಪಣೆಯ ವ್ರತ ಕೈಕೊಂಡು ಒಳ್ಳೆಯ ಫಲವನ್ನು ಸಮಾಜಕ್ಕೆ ನೀಡಿರುವ ದಾನಪ್ಪನವರನ್ನು ಈಗ ಸಮಾಜ, ಸರಕಾರ ಗುರುತಿಸಿ, ಗೌರವಿಸಬೇಕಾದುದು ಅದರ ಕರ್ತವ್ಯವಾಗಿದೆ. ೫೫ರ ಗಡಿಗೆ ತಲುಪಿರುವ ಅವರಿಂದ ಸಮಾಜಕ್ಕೆ ಇನ್ನೂ ಹೆಚ್ಚಿನ ಫಲ ಸಿಕ್ಕುವಂತಾಗಲಿ ಎಂದು ಹಾರೈಸುವೆ. ನಾಲತ್ವಾಡದ ವೀರೇಶ್ವರರು ಜತ್ತಿಯವರ ಬಾಳಿನಲ್ಲಿ ಆರೋಗ್ಯ, ನೆಮ್ಮದಿ, ಸಂತೋಷ, ಸೌಭಾಗ್ಯ ನೀಡುತ್ತ ಅವರನ್ನು ಅನವರತ ಈ ಪುಣ್ಯ ಸೇವೆಯಲ್ಲಿ ನಿರತಗೊಳಿಸುತ್ತಿರಲಿ ಎಂದು ಅಂತಃಕರಣಪೂರ್ವಕವಾಗಿ ಪ್ರಾರ್ಥಿಸುವೆ.

# ದಾನಪ್ಪ : ಸಾರ್ಥಕ ಬದುಕಿನ ಸಂಕೇತ

## ಕಾ. ಹು. ಬಿಜಾಪೂರ

ಬಾಲ್ಯದಲ್ಲಿಯೇ ಸಕಲರಿಗೂ ಲೇಸನ್ನೇ ಬಯಸುವ ಸದಭಿರುಚಿಯ ಹವ್ಯಾಸಗಳನ್ನಿರಿಸಿಕೊಂಡ ಚಿಂತನಶೀಲ ಕ್ರಿಯಾಶೀಲ ವ್ಯಕ್ತಿಯೊಬ್ಬ ಮನಸ್ಸು ಮಾಡಿದರೆ ಏನೆಲ್ಲ ಸಾಧಿಸಬಹುದು ಎಂಬುದಕ್ಕೆ ಪ್ರತ್ಯಕ್ಷ ನಿದರ್ಶನ ದಾನಪ್ಪ ಜತ್ತಿ ಅವರ ಬದುಕು ಮತ್ತು ಬರಹ. ನಟ, ಓದುವ ಯೋಗಿ, ಕತೆಗಾರ, ಕವಿ, ಸಂಪಾದಕ, ಸರಪಂಚ, ಸಂಘಟಕ, ನಿರ್ದೇಶಕ, ಗಾಯಕ, ವಾಗ್ಮಿ, ಅನುಭಾವಿ, ಕೀರ್ತನಕಾರ ಹೀಗೆ ಹಲವು ಹತ್ತು ಪ್ರತಿಭೆಗಳ ಸಂಗಮ ದಾನಪ್ಪ ಜತ್ತಿ ಅವರ ಅರ್ಥಪೂರ್ಣ ಜೀವನ. ಅದುವೇ ಧೀಮಂತ ಶಕ್ತಿಯ ಅದಮ್ಯ ಚೇತನ.

"ಸರಿಸಮಾನ ಗುಣವುಳ್ಳವರಲ್ಲಿ ಗೆಳೆತನವು ಶೋಭಿಸುತ್ತದೆ" ಎಂಬ ಮಹಾತ್ಮಾ ಗಾಂಧೀಜಿಯವರ ಅನುಭವ ವಾಣಿ ನಿತ್ಯ ಸತ್ಯವಾದುದು. ನಡೆನುಡಿಯಲ್ಲಿ, ಬದುಕು-ಬರಹದಲ್ಲಿ, ಸಾಧನೆ ಸಿದ್ಧಿಯಲ್ಲಿ ಹೀಗೆ ನನ್ನ ಮತ್ತು ದಾನಪ್ಪ ಅಣ್ಣನವರ ಅಂತರಂಗ ಬಹಿರಂಗದಲ್ಲಿ ಸಾಮ್ಯವಿರುವುದನ್ನು ಸ್ಮರಿಸಿಕೊಂಡಾಗ ಗುಣಕ್ಕೆ ಕಟ್ಟಿದ ನಮ್ಮಿಬ್ಬರ ಗೆಳೆತನದ ಶುಚಿ ರುಚಿಯ ಅರಿವಾಗಿ ಆನಂದದಿಂದ ಹೃದಯ ಹಿಗ್ಗಿ ಹಿರೇಕಾಯಿ ಆಗುತ್ತದೆ. ದ. ರಾ. ಬೇಂದ್ರೆಯವರು ಗೆಳೆಯ ಮಧುರಚೆನ್ನರ ಬಗ್ಗೆ ಬರೆದ ಕವಿತೆಯ ಸಾಲುಗಳು ನೆನಪಾಗುತ್ತವೆ.

> "ಇಂದಿನೀ ಗೆಳೆತನವು ಹಿಂದಿನಿಂದಲೆ ಬಂತು
> ಮುಂದೆ ಜನಾಂತರದಿ ಸಾಗಿ ಸಾಗಿ
> ಹೊಂದಿರುವ ಪಕಳೆಗಳ ಹಿಂದೆ ಕೇಸರದಿಂದ–
> ನೇಕ ಬೀಜದ ಏಕ ಫಲವು ಆಗಿ"

ನಮ್ಮೂರ ದೇವಾಂಗ ಸಮಾಜದವರು ನನ್ನಿಂದ ಮೂರಂಕಿನ ಸಾಮಾಜಿಕ, ರಾಷ್ಟ್ರೀಯ ಐತಿಹಾಸಿಕ ನಾಟಕಗಳನ್ನು ಬರೆಯಿಸಿ ತಮ್ಮ ಶ್ರೀ ಲಕ್ಷ್ಮೀ ವಿಲಾಸ ನಾಟ್ಯ ಸಂಘ, ಶ್ರೀ ಭವಾನಿ ನಾಟ್ಯ ಸಂಘಗಳ ಮುಖಾಂತರ ರಂಗಭೂಮಿಯ ಮೇಲೆ ಪ್ರಯೋಗಿಸಿ ನನ್ನಲ್ಲಿ ಸುಪ್ತಾವಸ್ಥೆಯಲ್ಲಿದ್ದ ನಾಟಕಕಾರನನ್ನು ಜಾಗೃತಗೊಳಿಸಿದರು. ಈ ಸಮಯದಲ್ಲಿಯೇ ನನ್ನ ಸಮಕಾಲೀನರಾದ ದಾನಪ್ಪ ಜತ್ತಿ ಅವರು ಹುಟ್ಟೂರಾದ ತಿಕೋಟಾದಲ್ಲಿ ಗೆಳೆಯರ ಬಳಗದಿಂದ 'ಅರುಣೋದಯ ನಾಟ್ಯ ಸಂಘ'ವನ್ನು ಕಟ್ಟಿ ನಟರಾಗಿ, ನಿರ್ದೇಶಕರಾಗಿ ಕನ್ನಡ ರಂಗಭೂಮಿಯ ಕಲಾಜ್ಯೋತಿ ಜಾಜ್ವಲ್ಯಮಾನವಾಗಿ ಬೆಳಗಿಸುವಲ್ಲಿ ಮನಮುಟ್ಟಿ ದುಡಿದರು.

ನಾಟಕದಲ್ಲಿ ಸ್ತ್ರೀಪಾತ್ರಧಾರಿಯಾದಾಗ ಥೇಟ ಹೆಣ್ಣಿನಂತೆ ಕಾಣುತ್ತಿದ್ದರು. ಹೆಣ್ಣಿನಲ್ಲಿರ ಬೇಕಾದ ನಯ ನಾಜೂಕು. ಒನಪು ವೈಯ್ಯಾರ. ಸುಮಧುರ ಕಂಠ ಜತ್ತಿ ಅವರಿಗೆ ಶ್ರೇಷ್ಠ ನಟಿಯರ ಸಾಲಿನಲ್ಲಿ ನಿಲ್ಲಿಸಿತ್ತು. ಪಾರಿಜಾತದಲ್ಲಿಯ ಅವರ ಗೊಲ್ಲತಿಯ ಪಾತ್ರ ಪ್ರೇಕ್ಷಕರ ಚಿತ್ತಭಿತ್ತಿಯ ಮೇಲೆ ಅಚ್ಚಳಿಯದೇ ನಿಂತಿದೆ.

ನನ್ನ "ಹೆಂಡತಿಯ ಕೈಗೊಂಬೆ" ನಾಟಕದ ತಿದ್ದುಪಡೆಗಾಗಿ ಶಿಕ್ಷಕ ಸಾಹಿತಿ ಶಂ. ಗು. ಬಿರಾದಾರ ಅವರಲ್ಲಿಗೆ ಹೋದಾಗ ಅವರು ದಾನಪ್ಪ ಜತ್ತಿ ಅವರ ಪರಿಚಯ ಮಾಡಿಕೊಟ್ಟರು. ನನ್ನ ನಾಟಕಗಳ ಪ್ರಪ್ರಥಮ ಪ್ರಯೋಗಗಳಿಗೆ 'ಶಿಶು' ಸಂಗಮೇಶ. ಶಂ. ಗು. ಬಿರಾದಾರ ಅವರ ಜೊತೆಗೆ ದಾನಪ್ಪ ಜತ್ತಿ ಅವರು ಬಂದು ನನ್ನ ಬರಹಕ್ಕೆ ಪ್ರೋತ್ಸಾಹಿಸಿದ್ದನ್ನು, ಸಲಹೆ ಸೂಚನೆ ನೀಡಿ ಸಹಕರಿಸಿದ್ದನ್ನು ನಾನೆಂದಿಗೂ ಮರೆಯಲಾರೆ. ಸಮಾನ ವಯಸ್ಕರರಾದ. ಸಮಾನ ಅಭಿರುಚಿವುಳ್ಳ ನಮ್ಮಿಬ್ಬರ ಪರಿಚಯ ಪ್ರೀತಿ ವಿಶ್ವಾಸಗಳಲ್ಲಿ ಪರ್ಯವಸಾನ ಹೊಂದಿ. ಅದು ಗಾಢ ಮೈತ್ರಿಯಾಗಿ ಬೆಳೆಯಿತು. "ಗೆಳೆತನ ಕಟ್ಟಿದರ ಗೆಜ್ಜಿ ಘೋಣಿಸಿದ್ಹಾಂಗ" ಎಂಬ ಜಾನಪದ ವಾಣಿಯಂತೆ ಲಕಲಕ ಹೊಳೆಯಿತು.

ನಾನು ಅಂಜುಮನ್-ಏ-ಇಸ್ಲಾಂ ಸಮಾಜದ ಸಹಯೋಗದಿಂದ ಗೊಳಸಂಗಿಯಲ್ಲಿ ಬಹು ಭಾಷಾಕವಿ ಸಮ್ಮೇಳನ ಹಾಗೂ ದೇವಾಂಗ ಸಮಾಜದ ಸಹಕಾರದಿಂದ ಕುಟುಂಬ ಯೋಜನಾ ಕವಿ ಸಮ್ಮೇಳನ ಹಮ್ಮಿಕೊಂಡಿದ್ದೆ. ಆಗ ದಾನಪ್ಪ ಜತ್ತಿ ಅವರಿಗೂ ಭಾಗವಹಿಸಲು ಆಮಂತ್ರಿಸಿದ್ದೆ. ಅವರು ಎರಡು ಕವಿ ಸಮ್ಮೇಳನಗಳಲ್ಲಿ ಪಾಲ್ಗೊಂಡು ಸುಶ್ರಾವ್ಯ ಕಂಠದಿಂದ ಕವಿತಾ ವಾಚನ ಮಾಡಿ. ಸಮಾರಂಭಕ್ಕೆ ಶೋಭೆ ತಂದಿದ್ದನ್ನು ಮರೆಯಲೇ ನಾನು ? ೧೯೭೧ನೇ ಇಸ್ವಿಯಲ್ಲಿ ನೂರು ತುಂಬಿದ ನಮ್ಮ ಹೆಮ್ಮೆಯ ಕನ್ನಡ ಶಾಲೆಯ ಶತಮಾನೋತ್ಸವವನ್ನು ವೈಭವದಿಂದ ಆಚರಿಸಿದೆವು. ಆಗ ಹೊರಟ ಸ್ಮರಣ ಸಂಚಿಕೆಯ ಪ್ರಧಾನ ಸಂಪಾದಕನಾಗಿ ನಾನು ಶ್ರದ್ಧೆಯಿಂದ ಕಾರ್ಯ ನಿರ್ವಹಿಸಿದೆ. ಶತಮಾನೋತ್ಸವದ ಸ್ಮರಣ ಸಂಚಿಕೆಯ "ಸಾಹಿತ್ಯ ಸುಧಾ" ವಿಭಾಗದಲ್ಲಿ ದಾನಪ್ಪ ಜತ್ತಿ ಅವರಿಂದ "ನಿನ್ನಲ್ಲಿಯೇ ಚಿನ್ಮಯನು" ಕವನ ತರಿಸಿ ಪ್ರಕಟಿಸುವುದನ್ನು ನಾನು ಮರೆಯಲಿಲ್ಲ. ಆ ಕವಿತೆ ನನಗೆ ತುಂಬಾ ಹಿಡಿಸಿತು. ಅದರ ಕೊನೆಯ ಪದ್ಯ ಹೀಗಿದೆ:

"ರಾಮ ರಾವಣ ನೀನೆ ಧರ್ಮ ದುರ್ಯೋಧನ
ಭೀಮಾರ್ಜುನ ನೀನೆ ಭೀಷ್ಮ ಕರ್ಣನೂ ನೀನೆ
ದುಷ್ಟ ಶಿಷ್ಟನೂ ನೀನೆ ಜೀವ ದೇವನೂ ನೀನೆ
ನಿನ್ನಲ್ಲಿಯೇ ಚಿನ್ಮಯನು ತನ್ಮಯದಿ ನೋಡು"

ಕರ್ನಾಟಕ ಸರ್ಕಾರದ ಸಮಗ್ರ ಗ್ರಾಮೀಣ ಅಭಿವೃದ್ಧಿಗಾಗಿ ಹಮ್ಮಿಕೊಂಡ ಇಪ್ಪತ್ತು ಅಂಶ ಕಾರ್ಯಕ್ರಮಗಳ ಸಂದೇಶವನ್ನು ಕೀರ್ತನೆ ಮತ್ತು ಉಪನ್ಯಾಸದ ಮೂಲಕ ಜನಮನಕ್ಕೆ ಮುಟ್ಟಿಸಲು ದಾನಪ್ಪ ಜತ್ತಿಯವರ ಕಾರ್ಯಕ್ರಮವೊಂದನ್ನು ಗೊಳಸಂಗಿಯಲ್ಲಿ ಹಮ್ಮಿಕೊಳ್ಳಲಾಗಿತ್ತು. ಅಂದಿನ ಅವರ ಸುಮಧುರ ಗಾಯನ, ಮಾತಿಗೆ ತಕ್ಕಂಥ ಹಾವಭಾವ, ಮನಮುಟ್ಟಿ ಮುದ ನೀಡುವ ಬಳಕೆಯ ಮಾತುಗಳ ಸೊಗಡು, ಹಾಸ್ಯ ಚಟಾಕಿ, ಎಳ್ಳು ಹುರಿದಂತೆ ಮಾತನಾಡುವ ವಾಕ್‌ಚಾತುರ್ಯ ಇದನ್ನೆಲ್ಲಾ ನೋಡಿ ನಮ್ಮೂರ ನಾಗರಿಕರಿಗೆ ಇನ್ನೊಮ್ಮೆ, ಮತ್ತೊಮ್ಮೆ ಕೀರ್ತನ ಕೇಳಬೇಕೆಂಬ ಲವಲವಿಕೆ ಉತ್ಕಟವಾಯಿತು. ಹಿರಿಯರಾದ ಸಿ. ಸಿ. ಹೆಬ್ಬಾಳ ಮತ್ತು ಎಸ್. ಜಿ. ಪಾರ್ವತಿಮಠ ಅವರು "ಕಾಸೀಮಸಾಬ ಈಸಲ ಬಸವ ಜಯಂತಿಗೆ ನಿನ್ನ ಗೆಳೆಯರಾದ ದಾನಪ್ಪ ಜತ್ತಿ ಅವರನ್ನು ಜರೂರ ಕರೆಯಿಸಲೇ ಬೇಕು" ಎಂದು ಆತ್ಮೀಯವಾಗಿ ಆದೇಶ ನೀಡಿದರು. ಆಗ ಅವರ ವಾಸ್ತವ್ಯ ಮನಗೂಳಿಯಲ್ಲಿತ್ತು. ನಾನು ಅಲ್ಲಿಗೆ ಹೋಗಿ ಆಮಂತ್ರಣ ಕೊಟ್ಟು ಬಂದೆ.

ಬಸವ ಜಯಂತಿಯಲ್ಲಿ ನಾಲ್ಕು ದಿನ "ಶರಣ ಚರಿತಾಮೃತ" ಕುರಿತು ಕೀರ್ತನೆ ಮಾಡಿ ಇಡೀ ಗೊಳಸಂಗಿ ಗ್ರಾಮದ ನಾಗರಿಕರನ್ನು ಸಂತುಷ್ಟಗೊಳಿಸಿದರು. ಕಾರ್ಯಕ್ರಮ ನಿರ್ವಹಣೆಯ ಭಾರವನ್ನು ಬಣಜಿಗರ ಸಮಾಜದವರು ನನ್ನ ಮೇಲೆಯೇ ಹೊರಸಿದ್ದರು. ಸಂಭಾವನೆಯನ್ನು ಎಷ್ಟು ಕೊಡಬೇಕೆಂದು ನಾನು ಜತ್ತಿ ಅವರನ್ನು ವಿಚಾರಿಸಿದಾಗ "ಕಾಸೀಮಸಾಬ, ಕೊಟ್ಟರೂ ಸರಿ. ಬಿಟ್ಟರೂ ಸರಿ. ನಾನು ನಿನಗಾಗಿ ಒಮ್ಮೆ ಗೊಳಸಂಗಿಗೆ ಬರಬೇಕಾಗಿತ್ತು ಬಂದೆ. ನಿನ್ನ ಒಡನಾಟದಿಂದ ನನಗೆ ತೃಪ್ತಿ ಆಯಿತು" ಎಂದು ದಾನಪ್ಪ ಅಣ್ಣನವರು ಹೃದಯತುಂಬಿ ಹೇಳಿದರು. ಆಗ ನನಗೆ ಕವಿ ಚನ್ನವೀರ ಕಣವಿ ಅವರ ಕವಿತೆಯ ಸಾಲುಗಳು ನೆನಪಾಗದೇ ಇರಲಿಲ್ಲ.

"ತಾಯಿಗಿಂತ ಬಂಧುವಿಲ್ಲ
ಉಪ್ಪಿಗಿಂತ ರುಚಿಯಿಲ್ಲ
ಎಂಬ ಗಾದೆಯ ಮಾತು ಕೇಳಿರುವೆನು
ಗೆಳೆತನದ ಶುಚಿ ರುಚಿಯು
ಇದಕು ಮಿಗಿಲಾಗಿಹುದು
ಎಂಬ ಸಾಹಸ ಮಾಡೆ ದೋಷವೇನು
ಕಂಡ ಕಂಡವರೇನು ಬಲ್ಲರಿದನು
ಉಂಡವನು ಕಂಡಿಹನು ಇದರ ಹದನು."

ನಾನು ಹಿರಿಯರೆಲ್ಲರಿಗೆ ಹೋಗಿ ಸಂಭಾವನೆಯ ಕುರಿತು ವಿಚಾರಿಸಿದೆ. ನಾನು ಕೇಳಿದುದಕ್ಕಿಂತ ಇನ್ನೂರು ರೂಪಾಯಿಗಳನ್ನು ಹೆಚ್ಚಿಗೆ ಕೊಟ್ಟು ತಮ್ಮ ಹೃದಯ ಶ್ರೀಮಂತಿಕೆಯನ್ನು ವ್ಯಕ್ತಪಡಿಸಿದರು.

ಗೊಳಸಂಗಿಯ ವಾಸ್ತವ್ಯದಲ್ಲಿ ಅವರ ೬೦ ನಿಮಿಷದ ಕೀರ್ತನವೊಂದನ್ನು ಟೇಪರಿಕಾರ್ಡ ಮಾಡಿಕೊಂಡೆ. ಈಗಲೂ ಅದನ್ನು ನನ್ನ ತಾಯಿ, ಹೆಂಡತಿ, ಮಕ್ಕಳು ವಾರಕ್ಕೊಮ್ಮೆಯಾದರೂ ಹಚ್ಚಿ ಕೇಳಿ ಆನಂದಿಸುತ್ತಾರೆ. ದಾನಪ್ಪ ಜತ್ತಿ ಅವರನ್ನು ಸಂತೃಪ್ತಿಯಿಂದ ಸ್ಮರಿಸುತ್ತಾರೆ. ಅವರು ನಮ್ಮ ಮನೆಗೆ ಬಂದಾಗ ನನ್ನ ತಾಯಿಯು ಕಾಲಿಗೆ ಬಿದ್ದು ನಮಸ್ಕರಿಸಿ, ಆಶೀರ್ವಾದ ಮಾಡಿಯಮ್ಮ ಎಂದು ಬೇಡಿಕೊಂಡದ್ದನ್ನು ಮಾತೋಶ್ರೀಯವರು ಪದೇ ಪದೇ ಸ್ಮರಿಸಿ, ಆಯುರಾರೋಗ್ಯದಿಂದ ಬಾಳಲಿ ಎಂದು ಹಾರೈಸುತ್ತಾರೆ. "ಹೊಟ್ಟೆಯಿಂದ ಹುಟ್ಟಿದ ಮಕ್ಕಳು ಹೊಳ್ಳಿ ನೋಡೂದಿಲ್ಲ. ನನ್ನಪ್ಪ ಹಡದಪ್ಪ. ದೊಡ್ಡ ಮನಷ್ಯಾ ನನ್ಗ ನಮಸ್ಕಾರ ಮಾಡಿದನಲ್ಲ" ಎಂದು ನೆನಪಿಸಿಕೊಂಡು ಟೇಪ ಹಚ್ಚಲು ಹೇಳುತ್ತಾಳೆ. ತದೇಕ ಚಿತ್ತದಿಂದ ಕೇಳುತ್ತಾಳೆ. ಹೀಗೆ ದಾನಪ್ಪ ಜತ್ತಿ ಅವರು ನಮ್ಮ ಕುಟುಂಬದ ಸದಸ್ಯರಲ್ಲಿ ಒಬ್ಬರಾಗಿದ್ದಾರೆ.

"ನಮ್ಮ ಕುಲ ಎರಡಾದರೂ ಮನವೊಂದು<br>
ಭಾಷೆ ಎರಡಾದರೂ ಭಾವ ಒಂದು<br>
ದೇಹ ಎರಡಾದರೂ ಧ್ಯೇಯ ಒಂದು"



ನಾವು ಪರಸ್ಪರರು "ತನ್ನಂಗ ನೋಡಿದರ ಭಿನ್ನಿಲ್ಲ ಭೇದಿಲ್ಲ" ಎಂಬ ಹಿತ ವಚನವನ್ನು ಅಕ್ಷರಶಃ ಪಾಲಿಸಿಕೊಂಡು ಬಂದಿದ್ದೇವೆ. ಅಂತೆಯೇ ಶ್ರೀಯುತರು ಸರ್ವಧರ್ಮ ಸಮನ್ವಯದ ಸಂಕೇತವಾಗಿದ್ದಾರೆ.

ಸಾಮಾನ್ಯವಾಗಿ ಮಠ–ಮಂದಿರಗಳಲ್ಲಿರುವ ಸ್ವಾಮೀಜಿಯವರೇ ಪುರಾಣ, ಪ್ರವಚನ, ಕೀರ್ತನ ಹೇಳುವ ಸಂಪ್ರದಾಯ ಅನೂಚಾನವಾಗಿ ನಡೆದುಬಂದಿದೆ. ಶಿವಯೋಗಮಂದಿರದಲ್ಲಿ ವಟು (ವಟು) ಆಗಿ ಕಲಿಯದೇ, ಕಾಶಿಯಲ್ಲಿ ಕಲಿತು ಸಂಸ್ಕೃತ ಪಂಡಿತರಾಗದೇ, ಒಂದು ಮಠದ ಪೀಠಾಧಿಪತಿಗಳಾಗದೇ, ಸರ್ವಜ್ಞನಂತೆ ಸರ್ವರೊಳು ಒಂದೊಂದು ನುಡಿಗಲಿತು ವಿಶ್ವದ ವಿಶ್ವವಿದ್ಯಾಲಯದಲ್ಲಿ ಜೀವನಾನುಭವದಿಂದ ಜ್ಞಾನ ಸಂಪಾದಿಸಿ, ಜನತೆಯ ಹೃದಯ ಸಿಂಹಾಸನದಲ್ಲಿ ವಿರಾಜಮಾನರಾಗಿದ್ದಾರೆ. ದಾನಪ್ಪ ಜತ್ತಿಯವರು ಶಾಸ್ತ್ರಿ, ಕೀರ್ತನ ಕೇಸರಿ, ವಚನ ರಚನಾ ಚತುರ, ಮಾದರಿ ಮಾನವ, ಪ್ರವಚನ ಕಲಾ ಪ್ರವೀಣ ಮೊದಲಾದ ಬಿರುದು, ಪ್ರಶಸ್ತಿಗಳನ್ನು ಸಂಪಾದಿಸಿದ ಕೀರ್ತಿಗೆ ಭಾಜನರಾದ ದಾನಪ್ಪ ಜತ್ತಿಯವರ ಸಫಲ

ಜೀವನ ಪಿಎಚ್.ಡಿ.ಗೆ ವಿಷಯವಾಗುವಷ್ಟು ವೈಶಿಷ್ಟ್ಯಪೂರ್ಣವಾಗಿದೆ, ವೈವಿಧ್ಯಮಯವಾಗಿದೆ, ಶ್ರೀಮಂತವಾಗಿದೆ.

ಮಾತನಾಡಲೆಂದು ಉಸಿರೆತ್ತಿ ಶಬ್ದಗಳನ್ನು ಎಳೆದೆಳೆದು ಕೂಡಿಸುವ ಪ್ರವಚನಕಾರರಲ್ಲ. ಶಬ್ದಗಳೇ ಹೊನಲಾಗಿ ಹರಿಯುತ್ತಿರಲು ಅವರ ಬಿನ್ನಾಣವಲ್ಲಿ ? ಅಂಥ ಬಿನ್ನಾಣಗಾರ ದಾನಪ್ಪ ಜತ್ತಿ ಅವರ ವಾಕ್‌ಝರಿ ಓತೋಪ್ರೋತವಾಗಿ ಹರಿಯುತ್ತದೆ. ಅವರಿಗಿರುವ ಅಗಾಧವಾದ ಸ್ಮರಣ ಶಕ್ತಿಯನ್ನು ನೆನಪಿಸಿಕೊಂಡರೆ ಅಭಿಮಾನವೆನಿಸುತ್ತದೆ. ಕೀರ್ತನೆಯ ಮುಖ್ಯ ಕಥಾವಸ್ತುವಿಗೆ ಚ್ಯುತಿ ಬರದಂತೆ ನಡುನಡುವೆ ವಚನ, ತ್ರಿಪದಿ, ದಾಸರ ಹಾಡು, ನೀತಿ ಕಥೆ, ಹಳಗನ್ನಡ, ನಡುಗನ್ನಡ, ಹೊಸಗನ್ನಡ ಕಾವ್ಯ – ಹೀಗೆ ಸಂದರ್ಭೋಚಿತವಾಗಿ ಬಳಸಿಕೊಳ್ಳುವ ಅವರ ಜಾಣ್ಮೆಯನ್ನು ಮೆಚ್ಚಿ ತಲೆದೂಗಬೇಕಾಗುತ್ತದೆ. ಅವರ ಉಪಕಥೆ, ವಿಡಂಬನೆ, ಹಾಸ್ಯಗಳಲ್ಲಿ ಪ್ರಚಲಿತ ಸಮಸ್ಯೆಗಳಿಗೆ ಪರಿಹಾರ ಇರುತ್ತದೆ. ಅವರ ನೆಚ್ಚಿನ ನೇಹಿಗನಾದ 'ತಿಮ್ಮ' ಕೀರ್ತನೆಯ ಉದ್ದಕ್ಕೂ ಕಾಣಿಸಿಕೊಂಡು ಜನತೆಗೆ ಹೊಟ್ಟೆ ಹುಣ್ಣಾಗುವಂತೆ ನಗಿಸಿ, ಬುದ್ಧಿ ಹಣ್ಣಾಗುವಂತೆ ಬಲಿಸಿ ನಲಿಸುತ್ತಾನೆ. ಜತ್ತಿಯವರ ಕೀರ್ತಿಗೆ ಕಾರಣೀಭೂತನಾಗಿದ್ದಾನೆ. ತಿಮ್ಮನನ್ನು ಬಿಟ್ಟು ಅವರು ಬದುಕಲಾರರು ಎಂಬಷ್ಟರ ಮಟ್ಟಿಗೆ ಅವರಿಬ್ಬರ ಸ್ನೇಹ ಅನ್ಯೋನ್ಯವಾಗಿದೆ; ಅಮೂಲ್ಯವಾಗಿದೆ.

ಜತ್ತಿಯವರ ತಿಳಿಯಾದ ಹಾಸ್ಯದಲ್ಲಿ ದ್ವಂದ್ವಾರ್ಥಗಳಿದ್ದರೂ ಅಲ್ಲಿ ಅಶ್ಲೀಲತೆಗೆ ಅವಕಾಶವಿಲ್ಲ. ಪ್ರವಚನದ ಉದ್ದಕ್ಕೂ ಬರುವ ಗುರು–ಶಿಷ್ಯ, ತಂದೆ–ತಾಯಿ, ಅತ್ತೆ–ಸೊಸೆ, ಗಂಡ–ಹೆಂಡತಿ, ಪ್ರಜೆ–ಪೋಲಿಸ್, ತಮ –ತಿಮ್ಮ ಹೀಗೆ ಎಲ್ಲ ಪಾತ್ರಗಳನ್ನು ದಾನಪ್ಪ ಜತ್ತಿ ಅವರು ಒಬ್ಬರೇ ಅವರವರ ಸ್ವಭಾವ, ಭಾಷೆ, ಹಾವಭಾವ ತದ್ರೂಪ ಅವರಂತೆ ಏಕಪಾತ್ರಾಭಿನಯದಿಂದ ಮಾಡಿ ತೋರಿಸುವ ಅವರ ಕಲಾ ಕೌಶಲ್ಯ ಸಭಿಕರನ್ನು ಮಂತ್ರಮುಗ್ಧರನ್ನಾಗಿಸುತ್ತದೆ.

ದಾನಪ್ಪ ಜತ್ತಿಯವರ ಕಾರ್ಯಕ್ಷೇತ್ರ ವಿಶಾಲವಾಗಿದೆ. ಬೆಳಗಾವಿ, ಕಾರವಾರ, ಧಾರವಾಡ, ವಿಜಾಪೂರ, ರಾಯಚೂರು, ಬಳ್ಳಾರಿ, ಜಿಲ್ಲೆಗಳಲ್ಲಿ ಜತ್ತಿ, ಅಕ್ಕಲಕೋಟ ತಾಲೂಕುಗಳಲ್ಲಿ ಪ್ರವಚನಕಾರರಾಗಿ ಸಂಚರಿಸುತ್ತ ಬಿಡುವಿಲ್ಲದ ಕಾರ್ಯಕ್ರಮ ನೀಡುತ್ತಿದ್ದಾರೆ. ಹಿರಿಯರೊಂದಿಗೆ ಹಿರಿಯರಾಗಿ, ಕಿರಿಯರೊಂದಿಗೆ ಕಿರಿಯರಾಗಿ ಬೆರೆತು ಬಾಳುವ ಕಲೆ ಸಿದ್ಧಿಸಿದೆ. ಇವರ ಶ್ರೇಯಸ್ಸಿಗೆ ತಂದೆ ಸಿದ್ರಾಮಪ್ಪ, ತಾಯಿ ದೊಡ್ಡವ್ವ ಹೇಗೆ ಕಾರಣಕರ್ತರೋ ಹಾಗೆಯೇ ಧರ್ಮಪತ್ನಿ ಶಾಂತಾದೇವಿ, ಮಗ ಸೋಮಶೇಖರನೂ ಜತ್ತಿಯವರ ಜನಪ್ರೀತಿಯಲ್ಲಿ ಪಾಲುಗಾರರಾಗುತ್ತಾರೆ.

ಧರ್ಮ. ಸಂಸ್ಕೃತಿ. ಭಕ್ತಿ, ಭಾವೈಕ್ಯತೆ, ಆಧ್ಯಾತ್ಮಿಕತೆಗಳನ್ನು ವೈಜ್ಞಾನಿಕ ನೆಲಗಟ್ಟಿನ ಮೇಲೆ ತಿಳಿ ಹೇಳುವ ಜತ್ತಿಯವರ ಮನೋಜ್ಞ ಶೈಲಿಗೆ ಮರುಳಾಗದವರಾರು ?

"ಖರೆ ಹೇಳಬೇಕಂದ್ರ ಸಾಲ್ಯಾಗ ನಾ ಹಸೀ ದಡ್ಡರಿ" ಎಂದು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುವ ದಾನಪ್ಪ ಜತ್ತಿಯವರು "ಏನೋ ಇದ್ದೆ ಮತ್ತೇನೋ ಆಗೀನಿ. ಇದೆಲ್ಲಕ್ಕೂ ಗುರು ಹಿರಿಯರ ಕೃಪಾಶೀರ್ವಾದವೇ ಕಾರಣ. ಈಗ ಮಾನಸಿಕ ನೆಮ್ಮದಿ ಲಭಿಸಿದೆ. ಆರ್ಥಿಕ ಸ್ಥಿತಿ ಸುಧಾರಿಸಿದೆ. ಕೌಟುಂಬಿಕ ತೃಪ್ತಿ ಸಿಕ್ಕಿದೆ. ಜಗದ್ಗುರುಗಳ. ಸಾಹಿತಿಗಳ. ಸಂಗೀತಗಾರರ. ಕಲಾವಿದರ – ಹೀಗೆ ಅಪಾರ ಜನರ ಪರಿಚಯವಾಗಿದೆ. ಅವರ ಪ್ರೀತಿಯ ಮಹಾಪೂರದಲ್ಲಿ ಮಿಂದು ಮಡಿಯಾಗಿದ್ದೇನೆ. ಇದಕ್ಕಿಂತ ಹೆಚ್ಚಿನದೇನಿದೆ ಮಣ್ಣು ಆ ಸ್ವರ್ಗದಲ್ಲಿ ? ಎಂದು ಆನಂದದಿಂದ ನುಡಿಯುತ್ತಾರೆ.

ಸೌಜನ್ಯ ಸಂಸ್ಕೃತಿಯ ಸಾಕಾರಮೂರ್ತಿಗಳಾದ ದಾನಪ್ಪ ಜತ್ತಿಯವರ ಸಾರ್ಥಕ ಜೀವನಕ್ಕೆ ಸಜೀವ ಸಾಕ್ಷಿಯಾಗಿ ನಿಂತಿದೆ ಜನಪದ ಗರತಿಯ ಈ ಹಾಡು :

ಆಚಾರಕ್ಕರಸಾಗು ನೀತಿಗೆ ಪ್ರಭುವಾಗು
ಮಾತಿನಲಿ ನೀ ಚೂಡಾಮಣಿಯಾಗು । ಕಂದಯ್ಯ
ಜ್ಯೋತಿಯೇ ಆಗು ಜಗಕ್ಕೆಲ್ಲ.

# ಶರಣ ಸಂಸ್ಕೃತಿಯ ಸೌರಭ

## ಬ. ವೀ. ಹಂಪನಗೌಡ್ರು

ಜೇನುನೊಣವು ವಿವಿಧ ಪುಷ್ಪಗಳಲ್ಲಿಯ ಮಕರಂದವನ್ನು ಹೀರಿ ಜೇಂಗೊಡ ತಯಾರಿಸುವಂತೆ, ಮಾಲೆಗಾರನು ವಿವಿಧ ಬಣ್ಣದ ಸುಗಂಧ ಪುಷ್ಪಗಳಿಂದ ಪುಷ್ಪಹಾರ ಕಟ್ಟುವಂತೆ, ಚಿತ್ರಕಾರನು ಹಲವು ಬಣ್ಣಗಳಿಂದ ಸುಂದರ ಚಿತ್ರ ಬರೆಯುವಂತೆ ವಿವಿಧ ಶಾಸ್ತ್ರಾಗಮ. ಪ್ರಮಾಣ. ದೃಷ್ಟಾಂತ. ತಿಮ್ಮಾಸ ಕಥೆ ಇವುಗಳ ದೃಷ್ಟಿಕೋನ ದಿಂದ ಪ್ರವಚನಾಮೃತ ನೀಡಿ. ಶ್ರೋತೃಗಳ ಮನದಣಿಯುವಂತೆ ಮಾಡುವ ಮೋಡಿಗಾರ ಯಾರಿವನು ? ಎಂಬ ಪ್ರಶ್ನೆ ಕೇಳುವ ಪ್ರಮೇಯ ನನಗಾಗಿತ್ತು. ಒಂದರ್ಧ ಕಿಲೋಮೀಟರದವರೆಗೆ ನಿಂತೋ–ಕುಂತೋ ಪ್ರವಚನ ಕೇಳುವ ಜನಸ್ತೋಮವನ್ನು ಮಂತ್ರಮುಗ್ಧರನ್ನಾಗಿ ಮಾಡಿದ ದೃಶ್ಯವನ್ನು ನೋಡಿ ನನಗಂತೂ ಒಂದು ಬಗೆಯ ಸಂತೋಷ, ಇನ್ನೊಂದು ಬಗೆಯ ಆಶ್ಚರ್ಯ.

ಶರಣ ಬಸವನ ಜಿಲ್ಲೆಯಾದ ಕಲಬುರ್ಗಿಯಲ್ಲಿ ಶಿಕ್ಷಕನಾಗಿ, ಶಿಕ್ಷಣಾಧಿಕಾರಿಯಾಗಿ ಕೆಲಸ ನಿರ್ವಹಿಸಿ. ಅದೇ ತಾನೇ ಕನ್ನಡ ಸಂಸ್ಕೃತಿಯ ಇಲಾಖೆಯ ಸಹಾಯಕ ನಿರ್ದೇಶಕನಾಗಿ ವಿಜಾಪೂರಕ್ಕೆ ಆಗಮಿಸಿದ್ದೆ. ಕನ್ನಡ ಸಂಸ್ಕೃತಿ ಇಲಾಖೆ ನನ್ನಿಂದಲೇ ಪ್ರಾರಂಭಗೊಂಡ ಸಮಯದಲ್ಲಿ ಶರಣ ಸಂಸ್ಕೃತಿ ಸೌರಭವನ್ನು ಪ್ರಚಾರಪಡಿಸುವ ಸಾಥೀ ನನಗೊಬ್ಬ ಬೇಕಾಗಿದ್ದ. ಅರಸುವ ಸಮಯದಲ್ಲಿ ಕಚೇರಿಗೆ ಬಂದು "ಸರ್, ನಾನು ಒಳಗೆ ಬರಲೇ" ಎಂದು ಕೇಳುತ್ತ ಮುಗಿದ ಕೈ, ಬಾಗಿದ ತಲೆಯ ಈ ಶರಣನನ್ನು ಕಂಡು ಕುಳಿತುಕೊಳ್ಳಲು ಹೇಳಿದೆ. ಸರದಾರ ಡಾ. ಬಸವರಾಜ ನಾಗೂರರ ಪರಿಚಯದೊಂದಿಗೆ, ಭಾರತ ರತ್ನ ಚಲನಚಿತ್ರದಲ್ಲಿ ಪಾತ್ರವಹಿಸಿದ್ದನ್ನು ನೆನೆಪು ಮಾಡಿಕೊಟ್ಟರು. ಶಾಸ್ತ್ರ, ಕೀರ್ತನ, ಪ್ರವಚನ ಕೆಲವರಿಗೆ ಮೀಸಲಿಟ್ಟ ಕಾಲವೊಂದಿತ್ತು. ಕಾಲ ಬದಲಾವಣೆಯಾಗಿದೆ. ಲಿಂಗವಂತ, ಬಣಜಿಗರು ವ್ಯಾಪಾರ ಮಾಡುವುದನ್ನು ಬಿಟ್ಟು ಪುರಾಣ–ಪ್ರವಚನ ಮಾಡುತ್ತಿರುವುದು ಸೋಜಿಗವಾದರೂ ದಾಸಪ್ಪ ಶೆಟ್ಟರನ್ನು ಕಂಡಾಗ, ಅವರ ಈ ವೃತ್ತಿಬಗ್ಗೆ ಕೇಳಿದಾಗ ಕುತೂಹಲವಾಯಿತು.

ತಮ್ಮ ಜೀವನ ವೃತ್ತಾಂತದ ಮೇಲೆ ಬೆಳಕು ಬೀರುವ ಈ ವಚನವನ್ನು ಉದಾಹರಿಸಿದರು ದಾಸಪ್ಪ :

ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನ್ನಿಕ್ಕಿ
ಹರವ ಕುಳ್ಳಿರ್ದ ನಮ್ಮ ಮಹದೇವಶೆಟ್ಟಿ
ಒಮ್ಮನವಾದಡೆ ಒಡನೆ ನುಡಿವನು

ಇಮ್ಮನವಾದಡೆ ನುಡಿಯನು
ಕಾಣಿಯ ಸೋಲ ಅರ್ಧಗಾಣಿಯ ಗೆಲ್ಲ
ಜಾಣ ನೋಡವ್ವ ನಮ್ಮ ಕೂಡಲ ಸಂಗಮದೇವ

ತಂದೆಯ ಕಾಲದಲ್ಲಿದ್ದ ಅಂಗಡಿ ವ್ಯವಹಾರ ಈ ಮಹಾದೇವ ಶೆಟ್ಟಿಯ ಕಾಲದಲ್ಲಿ ಖೋತಾ ಹೊಡೆಯಿತು. ತಂದೆ ತೀರಿಕೊಂಡ ಮೇಲೆ ಉದ್ರಿ ತೆಗೆದುಕೊಂಡ ಮಹಾಶಯರು ಹಣ ಕೊಡಲೇ ಇಲ್ಲ. ಕಳ್ಳ ವ್ಯವಹಾರ ಮಾಡಬಾರದೆಂದು ಮೊದಲೇ ಪ್ರತಿಜ್ಞೆ ಮಾಡಿದ್ದೆ. ನ್ಯಾಯ ನಿಷ್ಠುರಿ, ದಾಕ್ಷಿಣ್ಯಪರನಾನಲ್ಲ. ಧರ್ಮದ ತಕ್ಕಡಿ ಹಿಡಿದು ಹೊಂಟೆ. ಕಡೆಗೆ ಮಾನವತೆ ಒಪ್ಪದ ವ್ಯವಹಾರವನ್ನು ಬಿಟ್ಟು ಬಿಟ್ಟೆ. ಶರಣರು ಬಾಳಿಹೋದಂತೆ ಬಾಳಬೇಕೆನ್ನುವ ಛಲ ನನ್ನದಾಯಿತು. ಬಸವಾದಿ ಪ್ರಮಥರು ವಚನಗಳಲ್ಲಿ ತುಂಬಿಟ್ಟುಹೋದ ಸಾಹಿತ್ಯದತ್ತ ಮನವಿಳಿಸಿ ಸಾರ್ಥಕ ಜೀವನವನ್ನು ಬದುಕಲು ಪ್ರಯತ್ನಿಸುತ್ತಿರುವೆ. ತಾನು, ತನ್ನ ಮಗ, ಪತ್ನಿ, ಮಮತೆಯ ತಾಯಿ ಇವರೆಲ್ಲರ ಉದರಪೋಷಣೆ ದೊಡ್ಡದೆಂದುಕೊಳ್ಳದೆ, ಕಲೆಗೇನೇ ಜೀವನವನ್ನು ಮುಡಿಪಾಗಿಟ್ಟಿರುವೆ ಎಂದು ತಮ್ಮ ಕಥೆಯ ವ್ಯಥೆಯನ್ನು ಸಾದ್ಯಂತವಾಗಿ ವಿವರಿಸಿದರು.

ತುಂಬಿದ ಕೊಡ ತುಳುಕದೆಂಬಂತೆ ಸಂಗೀತಗಾರ ತಾನಾಗಿದ್ದರೂ ಜಗವಣ್ಣ ಬಸವಣ್ಣ ಹೇಳಿದ ವಚನ ಹಾಡಿ ಮನತಣಿಸಿದರು. ಮತ್ತೊಮ್ಮೆ ಜೈನ ಯೋಗಾಶ್ರಮದ ಪ್ರಶಾಂತ ಸ್ಥಳದಲ್ಲಿ ಅವರು ಹಾಡಿದ ಹಾಡಿನ ಕ್ಯಾಸೆಟ್ಟು ತಯಾರಿಸಲಾಯಿತು.

ತಾಳಮಾನ ಸರಿಸಮನರಿಯೆ । ಓಜೆ ಬಜಾರವ ಲೆಕ್ಕವನರಿಯೆ ।
ಅಮೃತಗಣ ದೇವಗಣನರಿಯೆ । ಕೂಡಲ ಸಂಗಮದೇವ
ನಿನಗೆ ಕೇಡಿಲ್ಲನಾಗಿ । ನಾನು ಒಲಿದಂತೆ ಹಾಡುವೆ

ಇಂಥ ಅನೇಕ ಹಾಡುಗಳಲ್ಲಿದ್ದ ವಿನೀತಭಾವವನ್ನು ಪ್ರದರ್ಶಿಸಿದ ದಾನಶ್ರೀಗೆ ಅನೇಕ ಕಾರ್ಯಕ್ರಮಗಳನ್ನು ಕನ್ನಡ ಸಂಸ್ಕೃತಿ ಇಲಾಖೆಯ ಪರವಾಗಿ ನೀಡಿದೆ. ನಾಲತ್ವಾಡದಲ್ಲಿ ಪ್ರಾರಂಭಿಸಿದ ವೀರೇಶ್ವರ ಪುಣ್ಯತಿಥಿಗಳಿಗೆ ಆಗಮಿಸಿ, ಅವರನ್ನು ಕುರಿತು ಪುರಾಣ–ಪ್ರವಚನಗಳನ್ನು ದಾನಪ್ಪನವರು ಪ್ರಾರಂಭಿಸಿದರು.

ಸಿದ್ಧಯ್ಯ ಪುರಾಣಿಕರು ಬರೆದ "ಶರಣ ಚರಿತಾಮೃತ" ಆಧಾರದಮೇಲೆ ನಾಡಿನ ತುಂಬೆಲ್ಲ ಪ್ರವಚನಗಳ ಸುರಿಮಳೆಗರೆದವರು. ಅವರ ಜೊತೆ ಹೋಗಿ ನೋಡಿದಾಗಲೆಲ್ಲ ಅವರ ಪ್ರವಚನಗಳನ್ನು ಕೇಳಲು ಜನಜಾತ್ರೆಯಾಗಿ ಕೂಡುತ್ತಿದ್ದಾರೆ ಎಂಬುದನ್ನು ಪ್ರತ್ಯಕ್ಷವಾಗಿ ಕಂಡೆ. ಕೆಲವೊಮ್ಮೆ ಜನ ಕುಳಿತುಕೊಳ್ಳಲು ಸ್ಥಳವಿಲ್ಲದೆ ತಾಸೆರಡು ತಾಸು ನಿಂತುಕೊಂಡೇ ಕೇಳಬೇಕಾಗುತ್ತಿದ್ದುದನ್ನು ಕಣ್ಣಾರೆ ಕಂಡೆ.

ವಿಜಾಪೂರ ಜಿಲ್ಲೆಯ ತಿಕೋಟಾದಲ್ಲಿ ಜನ್ಮತಳೆದ ದಾನಪ್ಪ ಜತ್ತಿ ಶಾಸ್ತ್ರಿಗಳು ಪ್ರವಚನ ಕಾರ್ಯದಲ್ಲಿ ನಿರತರಾಗಿ, ನಿಷ್ಠರಾಗಿ, ನಿರಪೇಕ್ಷ ನಿಲುವಿನಲ್ಲಿ ನಿಂದು ಅನುಭಾವದ ಆಸರೆಯಲ್ಲಿ ತಮ್ಮನ್ನೇ ತಾವು ಮರೆತು, ವಚನಕಾರರಾಗಿ, ಸಕಲ ಜೀವಾತ್ಮರಿಗೆ ಲೇಸನೇ ಬಯಸುತ್ತ ಶರಣ ಜೀವನ ಸಾಗಿಸುತ್ತಿದ್ದಾರೆ. ಸರಳ ಸ್ವಭಾವದ ಭಾವಜೀವಿಗಳಾಗಿದ್ದಾರೆ. ಸತ್ಯಶುದ್ಧ ಪ್ರವಚನ ಕಾರ್ಯ ಕೈಕೊಂಡಿದ್ದಾರೆ. ಅವರನ್ನು ನೆನೆಯುವಾಗ ನನಗೆ "ತನುವಿನಲಿ ನಿರ್ಮೋಹ। ಮನದಲಿ ನಿರಹಂಕಾರ। ಪ್ರಾಣದಲಿ ನಿರ್ಭಯ। ಚಿತ್ತದಲಿ ನಿರಪೇಕ್ಷೆ" ಎಂಬ ಶರಣರ ವಚನವೊಂದು ನೆನಪಿಗೆ ಬರುತ್ತದೆ.

ನಮ್ಮ ಸಮಕಾಲೀನ ಜೀವನದಲ್ಲಿ ಕಲೆಗಾಗಿ ಜೀವನ ಮುಡುಪಿಟ್ಟವರನ್ನು ನಾನೆಷ್ಟೋ ಜನರನ್ನು ಕಂಡಿದ್ದೇನೆ. ದುರ್ವ್ಯಸನಿ, ದುರಾಚಾರಿಗಳಾಗಿ ಹೇಳ ಹೆಸರಿಲ್ಲದೆ ನಾಶವಾಗಿದ್ದನ್ನು ಕೇಳಿದ್ದೇನೆ. ಆದರೆ ಉನ್ನತದ ಸಾರ್ಥಕ ಬದುಕನ್ನು ಬಾಳುತ್ತಿರುವ ದಾನಪ್ಪ "ದುರ್ವ್ಯಸನಿ, ದುರಾಚಾರಿ ಎಂದೆನಿಸದಿರಯ್ಯ। ಎನ್ನ ಲಿಂಗವ್ಯಸನಿ, ಜಂಗಮಪ್ರೇಮಿ ಎಂದೆನಿಸಯ್ಯ" ಎಂಬ ಅಣ್ಣನ ವಾಣಿಯ ವೀಣೆಯ ಶೃತಿ ಹಿಡಿದು ಜೀವನ ಸಾಗಿಸುತ್ತಿದ್ದಾರೆ. ಪ್ರವಚನದ ಮೂಲಕ ನಿತ್ಯ ನೂತನವಾದ ಬಸವಧರ್ಮ ತತ್ತ್ವಗಳನ್ನು ತಮ್ಮ ವೀರವಾಣಿಯ ಮೂಲಕ, ಬೆಳಕಿನ ಮಾತುಗಳ ಮೂಲಕ ಕೋಮಲವಾಗಿ ಬಿತ್ತರಿಸುತ್ತಿದ್ದಾರೆ.

ಅವರ ಮಾತುಗಾರಿಕೆಗೆ ಮರುಳಾಗದವರಿಲ್ಲ. ನಡುನಡುವೆ ಶರಣರ, ದಾರ್ಶನಿಕರ, ಸಂತರ ನುಡಿ ಉದಾಹರಿಸಿ ಕೇಳುಗರ ಅಂತಃಕರಣ ಅರಳಿಸುತ್ತಾರೆ. ನುಡಿ ಮುತ್ತಿನಹಾರ, ಲಿಂಗಮೆಚ್ಚಿ ಹೌದೆನ್ನುವ ಹಾಗೆ.

> "ಕೆರೆಭಾವಿ ಹಳ್ಳಗಳು ಮೈದೆಗೆದರೆ
> ಗುಳ್ಳೆ, ಗೊರಜೆ, ಚಿಪ್ಪುಗಳು ಕಾಣಬಹುದು
> ವಾರಿಧಿ ಮೈದೆಗೆದರೆ ರತ್ನಂಗಳು ಕಾಣಬಹುದು
> ಕೂಡಲ ಸಂಗನ ಶರಣರು ಮನದೆರದು
> ಮಾತಾಡಿದರೆ ಲಿಂಗವೇ ಕಾಣಬಹುದು"

ಎಂಬ ವಚನದ ಅನುಭಾವ ದಾನಪ್ಪನವರ ಮಾತು ಕೇಳಿದಾಗ ನಮಗಾಗುವುದು.

ದಾನಪ್ಪನವರು ಡಾ. ಜಚನಿ ಅವರ ಕಾರುಣ್ಯ ಪಡೆದವರಾದರೂ ಧರ್ಮಗುರು ಬಸವಣ್ಣನವರನ್ನು ಎದುರಿಗಿಟ್ಟುಕೊಂಡೇ ನಡೆಯುತ್ತಿದ್ದಾರೆ. ಶಿವಶರಣರ ವಚನಗಳನ್ನು ಅರಗಿಸಿಕೊಂಡ ಅವರು ಜೀವನವನ್ನು ಸರಿಯಾಗಿ ತಿಳಿದಿದ್ದಾರೆ. ಬೇಕು ಬೇಡೆಂಬುದಿಲ್ಲ, ಆಗು-ಹೋಗೆಂಬುದಿಲ್ಲ, ಆಧಾರಕ್ಕೆ ಏನೋ ಕಾರಣ ಹಚ್ಚಿ ತೃಪ್ತಿ ಪಡುವದಿಲ್ಲ. ಎಲ್ಲಕ್ಕೂ ಶಿವನೇ ಕಾರಣ ಎಂಬ ಹೇಡಿ ಮನೋಭಾವವೂ ಇಲ್ಲ.

ಬಂದುದನ್ನು ಧೀರವೃತ್ತಿಯಿಂದ ಅನುಭವಿಸಿ ನಡೆನುಡಿಯ ಪಾವಿತ್ರ್ಯದಿಂದ ಸುತ್ತಮುತ್ತ ಬೆಳಗುವ ಜೀವನ ಅವರದಾಗಿದೆ.

"ಸುಖ ಬಂದರೆ ಪುಣ್ಯದ ಫಲವೆನ್ನೆನು
ದುಃಖ ಬಂದರೆ ಪಾಪದ ಫಲವೆನ್ನೆನು
ನೀ ಮಾಡಿದೊಡಾಯಿತ್ತೆಂದೆನ್ನೆನು
ಕರ್ಮಕ್ಕೆ ಕರ್ತೃಗೆ ಕಡೆಯೆಂದೆನ್ನೆನು
ಉದಾಶೀ ನುಡಿದು ಶರಣೆನ್ನೆನು
ಕೂಡಲ ಸಂಗಮದೇವ ನೀ ಮಾಡಿದುಪದೇಶ ಎನಗೀ ಪರಿಯು
............................"

ಈ ವಚನ ದಾನಪ್ಪನವರ ಜೀವನವನ್ನು ಪಡಿಮೂಡಿಸುತ್ತದೆ. ಕಾಯಕದ ತತ್ತ್ವಗಳ ಕುರಿತು ಪ್ರವಚನ ಮಾಡುತ್ತ ತನ್ನ ತನುಮನಗಳನ್ನು ಸುಟ್ಟು ಲೋಕಕ್ಕೆ ಬೆಳಕುಕೊಡುವ ದೀಪದ ಬತ್ತಿಯಂತಿರುವ ದಾನಪ್ಪನವರನ್ನು ಸರಕಾರ, ಜನತೆ ಗುರುತಿಸಿ ಅವರ ಸಾರ್ಥಕ ಬದುಕಿಗೆ ಗೌರವಾದರದ ಚಿನ್ನದ ಕಿರೀಟ ತೊಡಿಸಲು ಮನಸ್ಸು ಮಾಡಬೇಕೆಂದು ಬಯಸುವುದರೊಂದಿಗೆ, ದಾನಪ್ಪನವರ ಭಾವಪೂರ್ಣ ಜೀವನ ಬಂಗಾರವಾಗಲಿ ಎಂದು ಹಾರೈಸುವೆ.

# ಗ್ರಂಥಾಲಯದ ಕಾರಣಪುರುಷ

## ವ್ಹಿ. ಪಿ. ಡೋಣಿ

ಆತ್ಮೀಯರಾದ ದಾನಪ್ಪ ಜತ್ತಿಯವರು ಮೊದಲಿನಿಂದಲೂ ಸಾಹಿತ್ಯ, ಸಂಗೀತ ಕಲೆಯಲ್ಲಿ ಹೆಚ್ಚಿನ ಆಸಕ್ತಿ ತೋರಿಸುತ್ತಲೇ ಬಂದವರು. ಈಗಂತೂ ಪೂರ್ಣ ಪ್ರಮಾಣದಲ್ಲಿ ಕೀರ್ತನೆ – ಪುರಾಣ – ಪ್ರವಚನ ಕಲೆಯಲ್ಲಿ ತಮ್ಮನ್ನು ತೊಡಗಿಸಿಕೊಂಡವರು.

ಒಂದಾನೊಂದು ಸಮಯದಲ್ಲಿ ಕಷ್ಟಗಳ ಕಹಿಯನ್ನು ಮೆಲ್ಲುತ್ತಿದ್ದರೂ ಜ್ಞಾನಾಸಕ್ತಿಯನ್ನು ಉಪೇಕ್ಷಿಸದೆ ಅದರಲ್ಲಿಯೇ ತಮ್ಮ ಉಸಿರನ್ನು ಬೆರೆಸಿದವರು. ನಾಟಕ ಕಲೆಯಿಂದ ಬರುವ ಸಂತಸವನ್ನು ತುಸು ಬಾಡಿಸಿಕೊಂಡರೂ, ದಿಕ್ಕೆಟ್ಟು ಹೋಗದ ನಾಡಿನ ಹೆಸರಾಂತ ಸಾಹಿತಿಗಳ ಪ್ರತಿಭಾನ್ವಿತ ಕೃತಿಗಳನ್ನು ಅಧ್ಯಯನ ಮಾಡುವ ಕಲೆಯನ್ನು ರೂಢಿಸಿಕೊಂಡಿದ್ದು ಅಭಿಮಾನದ ಸಂಗತಿ. ತಮ್ಮ ಜ್ಞಾನ ಭಂಡಾರವನ್ನು ಹೆಚ್ಚಿಸಿಕೊಳ್ಳುವ ಸಲುವಾಗಿ ಉಪಯುಕ್ತ ಗ್ರಂಥಗಳ ಸಂಗ್ರಹದ ಹವ್ಯಾಸವನ್ನು ಬೆಳೆಸಿಕೊಂಡುಬಂದರು. ಓದು ಮತ್ತು ಪುಸ್ತಕ ಸಂಗ್ರಹ ಅವರ ಬದುಕಿನ ಉಸಿರಾಗುವುದರ ಜೊತೆಗೆ ಗ್ರಾಮದ ಜನರಿಗೂ ಓದುವ ಹವ್ಯಾಸವನ್ನು ಬೆಳೆಸುವ ನಿಟ್ಟಿನಲ್ಲಿ ಕಾರ್ಯಪ್ರವೃತ್ತರಾದದ್ದು ಶ್ಲಾಘನೀಯ ಕಾರ್ಯವೆನಿಸಿತು.

ತಿಕೋಟಾ ಗ್ರಾಮಪಂಚಾಯತಿಯ ಚೇರಮನ್ ಗದ್ದುಗೆ ಅಲಂಕರಿಸಿದಾಗ ಅಧಿಕಾರದ ಹಮ್ಮು–ಬಿಮ್ಮಿನಲ್ಲಿ ಮೆರೆದಾಡದೆ ಜನತೆಗೆ, ಊರಿಗೆ ಹಿತವಾಗುವ ಕಾರ್ಯಗಳನ್ನು ಅವರು ಹಮ್ಮಿಕೊಂಡು ಯಶಸ್ವಿಯಾದದ್ದು ಅವರ ಕಾರ್ಯ ಕುಶಲತೆಗೊಂದು ಕನ್ನಡಿ. ಜನರಲ್ಲಿ ಓದುವ ಹವ್ಯಾಸವನ್ನು ಬೆಳೆಸುವ ವಿಚಾರದಲ್ಲಿ ಅವರು ತೀವ್ರ ಆಸಕ್ತರಾಗಿ ಒಂದು ಗ್ರಂಥಾಲಯವನ್ನು ಸ್ವಯಂ ಸ್ಫೂರ್ತಿಯಿಂದ ಜನತೆಯ ಸಹಾಯ ಸಹಕಾರದಿಂದ ನಡೆಸಿಕೊಂಡುಬಂದರು. ಮುಂದೆ ಪ್ರವಚನ ಕಾರ್ಯದಲ್ಲಿ ಬಿಡುವು ಸಿಗದಂತಾದಾಗ, ಆ ಬಾಲಚಂದ್ರ ಗ್ರಂಥಾಲಯವನ್ನು ೧೯೭೮ ರಲ್ಲಿ ಸರಕಾರದ ಸಾರ್ವಜನಿಕ ಗ್ರಂಥಾಲಯಕ್ಕೆ ಹಸ್ತಾಂತರಿಸಿ ಹೆಚ್ಚಿನ ಬೆಳವಣಿಗೆಗೆ ಕಾರಣರಾದರು.

ನಿಜವಾಗಿ ಜನರನ್ನು ಅಧ್ಯಯನಶೀಲರನ್ನಾಗಿ, ಜ್ಞಾನವಂತರನ್ನಾಗಿ ಮಾಡುವ ನಿಟ್ಟಿನಲ್ಲಿ ಜತ್ತಿಯವರು ಶ್ರದ್ಧಾಪೂರ್ಣವಾಗಿ ಶ್ರಮಿಸಿ ಗ್ರಂಥಾಲಯದ ಸ್ಥಾಪನೆಗೆ ಕಾರಣಪುರುಷರಾದರು. ಇಂದಿಗೂ ತಿಕೋಟಾದ ಜನರಿಗಷ್ಟೇ ಅಲ್ಲ ಸುತ್ತು ಮುತ್ತಲಿನ ಗ್ರಾಮಗಳ ಜನತೆಗೂ ಈ ಗ್ರಂಥಾಲಯ ಜ್ಞಾನಕೇಂದ್ರವಾಗಿ, ದಾನಪ್ಪ

ನವರ ಸಾರ್ಥಕ ಶ್ರಮದ ಸಂಕೇತವಾಗಿ ನಿಂತಿರುವುದು. ಇಂಥವೇ ಜನೋಪ ಯೋಗಿ ಕಾರ್ಯಗಳನ್ನು ಮಾಡುವಲ್ಲಿ ದಾನಪ್ಪನವರು ಹೆಸರುವಾಸಿಯಾಗಿದ್ದಾರೆ. ಇಂದಿಗೂ ಜನತೆಯ ಸೌಖ್ಯಕ್ಕಾಗಿ, ಧರ್ಮದ ಉಳಿವಿಗಾಗಿ ಹೆಣಗುತ್ತಿರುವ ಜತ್ತಿ ಯವರು ಜನತೆಯ ಒಂದು ಭಾಗ್ಯವೆಂದು ಹೇಳಿದರೆ ಅದು ಹೊಗಳಿಕೆಯ ಹೊನ್ನ ಶೂಲವಾಗದೇನೋ.

# ನನ್ನ ಬಾಂಧವ್ಯದ ಬಳ್ಳಿ

## ರಾಚಯ್ಯ ಹಿರೇಮಠ

ಬಹಳ ದಿನಗಳ ಹಿಂದೆ ಅಂದರೆ ೧೯೬೧ರಲ್ಲಿ ನಾನು ತಿಕೋಟಾಕ್ಕೆ "ಶ್ರೀಕೃಷ್ಣ ಪಾರಿಜಾತ" ಬೈಲಾಟದವರಿಗೆ ಮಾರ್ಗದರ್ಶನ ಮಾಡಲು ಹೋಗಿದ್ದ ಸಮಯ. ಕಲಾಸಕ್ತರಾದ ಶ್ರೀ ದಾನಪ್ಪ ಜತ್ತಿಯವರನ್ನು ನಾನು ಸಮಕ್ಷಮ ಕಂಡೆ.

ನನ್ನ ಬಿಡುವಿನ ವೇಳೆಯಲ್ಲಿ ದಾನಪ್ಪನವರ ಜೊತೆಗಿದ್ದು ಅವರ ಕಲಾವಂತ ಹೃದಯದ ಸವಿಯುಣ್ಣುತ್ತಲೇ ಹತ್ತಿರವಾದೆ. ಅಂದಿನಿಂದ ಅವರ–ನನ್ನ ನಡುವೆ ಬಾಂಧವ್ಯದ ಬಳ್ಳಿ ಚಿಗುರಿತು. ಅದು ಇಂದಿಗೂ ಹಚ್ಚ ಹಸಿರಾಗಿ ಕಂಗೊಳಿಸು ತ್ತಿರುವುದಕ್ಕೆ ದಾನಪ್ಪನವರ ವೈಶಾಲ್ಯ ಹೃದಯವೇ ಕಾರಣವೆನ್ನಬೇಕು.

ಹೃದಯ ಸಿರಿವಂತಿಕೆಯ, ಜಂಗಮಪ್ರೇಮಿಗಳಾದ ತಾಯಿ–ತಂದೆಗಳ ಸಂಸ್ಕಾರ ದಲ್ಲಿ ಬೆಳೆದುಬಂದ ದಾನಪ್ಪ ತುಂಬು ಹೃದಯದ ಸುಸಂಸ್ಕೃತ ವ್ಯಕ್ತಿ. ಯಾವ ವಿಶ್ವವಿದ್ಯಾಲಯದ ಪದವೀಧರರಲ್ಲದ ಅವರು ಅಭಿನಯ, ಸಂಗೀತ, ಸಾಹಿತ್ಯ ಇತ್ಯಾದಿ ಕಲೆಗಳಲ್ಲಿ ಸಾಧಿಸಿದ ಪ್ರಗತಿ, ಗಳಿಸಿದ ಕೀರ್ತಿ ಯಾವ ಪದವಿಗಿಂತಲೂ ಉನ್ನತವಾದುದು.

ಅವರು ನಾಟಕದಭಿನಯದಲ್ಲಿ ಸ್ತ್ರೀ ಪಾತ್ರಗಳಿಗೆ ಹೆಚ್ಚಿನ ಕಳೆ ತರುವುದರ ಜೊತೆಗೆ ಪ್ರೇಕ್ಷಕರ ಹೃದಯದಲ್ಲಿ ಗಟ್ಟಿಯಾಗಿ ಪ್ರತಿಷ್ಠಾಪಿತಗೊಳ್ಳುತ್ತಿದ್ದರು. ನನಗಂತೂ ಅವರು ಅಭಿನಯಿಸಿದ 'ಮಲಮಗಳು' ನಾಟಕದ ತಾಯಿ ಪಾತ್ರ, 'ದಸರಾ' ನಾಟಕದ ಸುಶೀಲಾ. 'ದೀಪಾವಳಿ' ನಾಟಕದ ನೀಲಾ, 'ಕಾರಸ್ಥಾನ'ದ ಕಮಲಾಳ ಪಾತ್ರಗಳು ಇನ್ನೂ ಮನಸ್ಸಿನಲ್ಲಿ ಹಚ್ಚ ಹಸಿರಾಗಿವೆ. ಕರುಣೆಯ ರಸ ಅವರ ಹೃದಯದಲ್ಲಿ ಹೆಪ್ಪುಗಟ್ಟಿತ್ತು. ಜನರನ್ನು ದುಃಖದ ಕಡಲಲ್ಲಿ ಮುಳುಗಿಸುವ ತಾಕತ್ತು ಪಡೆದಿತ್ತು. ಅವರದು ಕಲಿತ ಕಲೆಯಲ್ಲ; ದೈವಿ ಕಲೆ.

ಎಂಥ ಸವಾಲುಗಳನ್ನು ಸ್ವೀಕರಿಸುವ ದಿಟ್ಟತನ ಅವರ ಅಭಿನಯದ ಸೊತ್ತಾ ಗಿತ್ತು. ಇದಕ್ಕೆ ಉದಾಹರಣೆ ಎನ್ನುವಂತೆ, ಸಾಮಾಜಿಕ ನಾಟಕಗಳಲ್ಲಿ ಅಭಿನಯಿಸು ತ್ತಿದ್ದ ಅವರು ಪಾರಿಜಾತ ಬಯಲಾಟದಲ್ಲಿ 'ಗೊಲ್ಲತಿ'ಯ ಪಾತ್ರದಲ್ಲಿ ಅಭಿನಯಿಸಿ ಜನರನ್ನು ದಂಗುಬಡಿಸಿದರು. ಅದೂ ಒಂದು ತಿಂಗಳಲ್ಲಿ ಆ ಪಾತ್ರಕ್ಕೆ ಜೀವಂತಿಕೆ ತುಂಬಿದ್ದರವರು.

ನಂತರದ ದಿನಗಳಲ್ಲಿ ಆಕಾಶವಾಣಿ ನಾಟಕಗಳಲ್ಲಿ ಪಾತ್ರಗಳನ್ನು ಪೂರೈಸುತ್ತ, ಭಾರತರತ್ನ ಚಿತ್ರದ ಮೂಲಕ ಬೆಳ್ಳಿ ತೆರೆಯಲ್ಲೂ ಮಿಂಚಿದರು. ಕೆಲವು ಸಮಯ

ಅವರ ಹೃದಯ ಕಲಾವಂತಿಕೆ ಸಾಹಿತ್ಯದ ಮೂಲಕವೂ ಪ್ರವಹಿಸಿ ಒಳ್ಳೆಯ ಕೃತಿಗಳನ್ನು ಸಹೃದಯರಿಗೆ ನೀಡಿತು.

ಮುಂದೆ ತಮ್ಮ ಕಲಾಪ್ರತಿಭೆಯನ್ನು ಪಾರಮಾರ್ಥದ ತತ್ವದೊಂದಿಗೆ ಬೆರೆಸಿ ವಿಶೇಷ ಅಧ್ಯಯನದ ಮೂಲಕ. ಮಾನವ ಬದುಕಿನ ಸತ್ಯವನ್ನು ಸಾರುವ. ಧರ್ಮದ ತಿರುಳನ್ನು ತಿಳಿಸಿಕೊಡುವ ವಿಶಿಷ್ಟವಾದ ಕೀರ್ತನೆ. ಪುರಾಣ. ಪ್ರವಚನ ಕಲೆಯನ್ನು ಜೀರ್ಣಿಸಿಕೊಂಡು ಈಗ ಅದ್ವಿತೀಯರಾಗಿ ಬೆಳೆದುನಿಂತಿದ್ದಾರೆ. ಪಾರಮಾರ್ಥ ಜೀವನದಲ್ಲಿ ಸಂತೃಪ್ತಿಯನ್ನು ಪಡೆದಿದ್ದಾರೆ.

ನಾನು ಜಾನಪದ ರಂಗದಿಂದ ನಿವೃತ್ತನಾದ ನಂತರ ಕಳೆದ ಐದು ವರ್ಷಗಳಿಂದ ಅವರ ಪುರಾಣ – ಪ್ರವಚನಕ್ಕೆ ಸಂಗೀತ ಸಾಥಿಯಾಗಿ ಸೇವೆ ಮಾಡುತ್ತಿದ್ದೇನೆ. ನಮ್ಮಂಥ ಕಲಾವಿದರನ್ನು ಕಂಡರೆ ದಾನಪ್ಪನವರಿಗೆ ವಿಶೇಷ ಮಮತೆ. ಅವರ ಆದರ. ಅನುಕಂಪ ಸ್ಮರಣಾರ್ಹ. ಅವರು ಬದುಕಿನುದ್ದಕ್ಕೂ ರೂಢಿಸಿಕೊಂಡು ಬಂದ ಶಿಸ್ತು. ಅಚ್ಚುಕಟ್ಟುತನ. ಸಮಯಪ್ರಜ್ಞೆ ಮೆಚ್ಚುವಂತಹ ವಿಶೇಷ ಗುಣ. ಅವರಂತೆ ಕಾಯಕನಿಷ್ಠೆ ಕೂಡ ಸ್ವರ್ಗ ಸದೃಶವಾದುದು. ಇಂದು ಅವರಿಗೆ ಕೀರ್ತಿ ಬಂದಿದೆ ಆದರೆ ಅಹಂಕಾರವಿಲ್ಲ. ಮಗುವಿನ ಮನಸ್ಸಿನ ದಾನಪ್ಪ ಎಲ್ಲರ ಪ್ರೀತಿ ಪಾತ್ರರಾಗಿ ಕಂಗೊಳಿಸುತ್ತಿದ್ದಾರೆ. ಅವರೊಂದಿಗೆ ಕೆಲಸಮಾಡುತ್ತಿರುವ ನಾನು ಧನ್ಯನಲ್ಲದೆ ಮತ್ತೇನು ?

# ಮಾದರಿ ಮಾನವ

## ರಾಮಣ್ಣ ಭೀ. ಗೊರವರ

ಪ್ರವಚನ ಪ್ರಪಂಚದ ದಾನಪ್ಪ ಜತ್ತಿ ಬದುಕಿನ ಉದ್ದಕ್ಕೂ ಹಲವಾರು ಕ್ಷೇತ್ರಗಳಲ್ಲಿ ತಮ್ಮ ವ್ಯಕ್ತಿತ್ವದ ಛಾಪು ಒತ್ತಿದವರು. ಆ ಮೂಲಕ ಹೆಸರು ಮಾಡಿದವರು. ಆದರೆ ಅಹಂಕಾರದಿಂದ ಮಾತ್ರ ದೂರಾಗಿ ಎಲ್ಲರ ಪ್ರೀತಿಯ ಪ್ರತೀಕವಾಗಿ ಕಂಗೊಳಿಸುತ್ತಿರುವ ಅವರು ನಿಜವಾಗಿಯೂ "ಮಾದರಿ ಮಾನವ"ರೇ ಸರಿ. ಹೀಗೆಂದು ಹೇಳುವುದು ಉತ್ಪ್ರೇಕ್ಷೆ ಅಲ್ಲ–ಸತ್ಯಸಹಜವಾದ ಮಾತು. ಇದಕ್ಕೆ ನಿದರ್ಶನವೆನ್ನುವಂತೆ ನಮ್ಮ ಹೊಸವಾಡ ಗ್ರಾಮಕ್ಕೆ ಅವರು ಮಾಡಿದ ಮಹದುಪಕಾರ.

ಅಂದು ನಮ್ಮೂರ ಯುವಕ ಸಂಘದಲ್ಲಿ ಒಡಕು ಉಂಟಾಗಿತ್ತು. ಅದು ದಿನೇ ದಿನೇ ಬೆಳೆಯತೊಡಗಿತ್ತು. ಕಿಚ್ಚನ್ನು ಒಳಗಿಟ್ಟುಕೊಂಡು ಕುದಿಯತೊಡಗಿತ್ತು. ಗೆಳೆಯರಲ್ಲಿ ಹುಟ್ಟಿದ ಜಗಳ ಗೆಳೆಯರಿಂದಲೇ ಬಗೆಹರಿಯಬಹುದೆಂದು ಗ್ರಹಿಸಿ ಶ್ರೀ ದಾನಪ್ಪ ಜತ್ತಿಯವರಿಗೆ ಈ ದಿಶೆಯಲ್ಲಿ ಮಾರ್ಗದರ್ಶನ ಮಾಡಲು ಸೂಚನೆ ಕಳಿಸಿದೆವು.

ದಾನಪ್ಪನವರು ಕೂಡಲೇ ಹೊಸವಾಡಕ್ಕೆ ಬಂದು ಎಲ್ಲರನ್ನು ಕಲೆಹಾಕಿ ತಪ್ಪು ಕಲ್ಪನೆಗಳನ್ನು ದೂರಮಾಡಿದರು. ಅಷ್ಟಕ್ಕೆ ಬಿಡದೆ ಈ ವಿಷದ ಬೀಜವನ್ನು ಕಿತ್ತೆಸೆದು ಬಿಡಬೇಕೆಂದು ಒಂದು ನಾಟಕ ಪ್ರಾರಂಭಿಸಿದರು. ತಾವೇ ಪಾತ್ರಗಳನ್ನು ಹಂಚಿಕೊಟ್ಟರು. ದಿನಾಲು ಸಂಜೆಯಾಗುತ್ತಲೇ ಹೊಸವಾಡಕ್ಕೆ ಬಂದು, ರಾತ್ರಿಕಾಲ ಅಭ್ಯಾಸ ಮಾಡಿಸಿ. ಬೆಳಗಿನ ಜಾವ ತಿಕೋಟಾಕ್ಕೆ ಪಯಣಿಸುತ್ತ ಒಂದು ತಿಂಗಳು ಕಳೆದರು.

ನಮ್ಮ ಗ್ರಾಮದ ಶ್ರೀ ಬನಶಂಕರಿದೇವಿ ಜಾತ್ರೆಯಲ್ಲಿ ನಾಟಕ ಪ್ರಯೋಗಿಸಿ ತೋರಿಸಿದರು. ನಾಟಕವು ಊರ ಜನರ ಮೆಚ್ಚುಗೆಯನ್ನು ಪಡೆಯಿತು. ಇಷ್ಟರಲ್ಲಿ ಯುವಕರ ಭಿನ್ನಾಭಿಪ್ರಾಯ ದೂರಾಗಿತ್ತು. ನಾವೆಲ್ಲರೂ ಒಂದೇ ಮನೆಯವರೆಂಬ ಭಾವನೆ ಮೂಡಿತ್ತು. ಅವರೆಲ್ಲರೂ ಈಗ ದಾನಪ್ಪನವರ ಅಭಿಮಾನಿಗಳಾಗಿದ್ದಾರೆ. ಸಂಘ ಕಟ್ಟಿದ್ದಾರೆ. ಸೌಖ್ಯ ಸಂಭ್ರಮದಿಂದ ಬದುಕುತ್ತಿದ್ದಾರೆ. ಅವರಲ್ಲಿ ಈ ತೆರನಾದ ಸ್ನೇಹದ ಬಾಂಧವ್ಯ ಬೆಸೆದ ದಾನಪ್ಪನವರ ಬುದ್ಧಿವಂತಿಕೆ ನಿಜವಾಗಿ ಔಚಿತ್ಯಪೂರ್ಣವಾದ ಕಲೆಯೆಂದೇ ಹೇಳಬಹುದು.

ಈಗ ಅವರು ಪೂರ್ಣ ಪ್ರಮಾಣದಲ್ಲಿ ಕೀರ್ತನೆ–ಪುರಾಣ–ಪ್ರವಚನ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡು ಧರ್ಮಜಾಗೃತಿಯ ಜೊತೆಗೆ ಮಾನವ ಕಲ್ಯಾಣ

ವನ್ನು ಮಾಡುತ್ತಿದ್ದಾರೆ. ಮನುಷ್ಯ–ಮನುಷ್ಯರಲ್ಲಿ ಪ್ರೀತಿಯ, ಸ್ನೇಹದ, ಮಾನವೀಯತೆಯ ಶ್ರೀಗಂಧ ತೀಡುತ್ತಿರುವ ಅವರು 'ಮಾದರಿ ಮಾನವ' ಬಿರುದಿಗೆ ಸಾರ್ಥಕತೆಯನ್ನು ತಂದುಕೊಟ್ಟಿದ್ದಾರೆ. ಅವರೀಗ ೫೫ ೬ ವಸಂತಕ್ಕೆ ಕಾಲಿರಿಸಿದ್ದಾರೆ. ಅವರ ಬದುಕಿಗೆ ಸೌಖ್ಯವನ್ನು, ಆರೋಗ್ಯವನ್ನು ಹಾರೈಸುವುದರೊಂದಿಗೆ ಮನುಕುಲಕ್ಕೆ ಅವರಿಂದ ಅಗಾಧ ಉಪಕಾರ ಸಲ್ಲಲಿ ಎಂದು ಬಯಸುವೆ.

# ಕಲಾರಂಗದ ಸಿರಿ

## **ಡಾ. ಅಶೋಕ ಸಮಗಂಡಿ**

೧೯೮೫ರ ಶ್ರಾವಣಮಾಸದ ಒಂದು ದಿನ. ಗುಳೇದಗುಡ್ಡದ ಶ್ರೀ ಸಾಲೇಶ್ವರ ಕಲ್ಯಾಣ ಮಂಟಪದಲ್ಲಿ ಸಾಯಂಕಾಲವಾಗುತ್ತಿದ್ದಂತೆ ಹೇಳಲಾಗದಷ್ಟು ಜನಸಂದಣಿ. ಮಂಟಪದ ಆವರಣ ವಿಶಾಲವಿದ್ದರೂ ಬಂದ ಜನರಿಗೆ ಕಾಲಿಡಲು ಜಾಗವಿಲ್ಲ. ಹೀಗಿದ್ದಾಗ್ಯೂ ಜನ ಇನ್ನೂ ಬರುತ್ತಲೇ ಇದ್ದರು. ಅಲಂಕೃತಗೊಂಡ ವೇದಿಕೆಯ ಮೇಲಿದ್ದ ಪ್ರಸನ್ನ ಮೂರ್ತಿಯೊಂದು ಧಾರಾಕಾರವಾಗಿ ಮಾತಿನ ಮಳೆ ಸುರಿಸುತ್ತಿತ್ತು. ಬಂದ ಜನ ಮೈಯೆಲ್ಲ ಕಿವಿಯಾಗಿಸಿ. ಮಾತಿನ ಮಳೆಯಲ್ಲಿ ಮೀಯುತ್ತಿತ್ತು. ಯಾರಿಗೂ ಸಮಯದ ಪರಿವೇಯಿಲ್ಲ. ಆ ಪ್ರಸನ್ನಮೂರ್ತಿ ಬೇರಾರೂ ಅಲ್ಲ: ದಾನಪ್ಪ ಜತ್ತಿ.

ಹೌದು. ದಾನಪ್ಪ ಜತ್ತಿ ಪ್ರವಚನ. ಕೀರ್ತನ ಹೇಳಲು ತೊಡಗಿದರೆ ಸಣ್ಣ ಹುಡುಗರೂ ಕಿವಿ ಹಿಗ್ಗಿಸುತ್ತಾರೆ. ಮುದುಕರಂತೂ ಮೈಮರೆಯುತ್ತಾರೆ. ಇಂದಿನ ಫ್ಯಾಷನ್, ವೈಜ್ಞಾನಿಕ ಯುಗದಲ್ಲಿಯೂ ಗಟ್ಟಿಯಾದ ಹೆಸರು. ಕಲೆಗಾಗಿ ಜೀವನ. ಜೀವನಕ್ಕಾಗಿ ಕಲೆ ಎಂಬ ಮಾತೊಂದಿದೆ. ಕೆಲವರದು ಕಲೆಗಾಗಿ ಜೀವನವಿದ್ದರೆ ಇನ್ನೂ ಕೆಲವರದು ಜೀವನಕ್ಕಾಗಿ ಕಲೆ ಇರುತ್ತದೆ. ಜತ್ತಿಯವರಿಗೆ ಕಲೆಯೇ ಜೀವ !

ವಿಜಾಪೂರ ಜಿಲ್ಲೆಯ ತಿಕೋಟಾದ ಸಿದ್ರಾಮಪ್ಪ ಹಾಗೂ ದೊಡ್ಡಮ್ಮ ದಂಪತಿಗಳಿಗೆ ಜನಿಸಿದ ದಾನಪ್ಪ. ವಿಶಾಲ ವಿಶ್ವವನ್ನೇ ಪಾಠಶಾಲೆಯನ್ನಾಗಿ ಬಳಸಿಕೊಂಡು ಬೆಳೆಯತೊಡಗಿದ. ಬಾಲ್ಯದಲ್ಲಿಯೇ ಕಲೆ. ಸಾಹಿತ್ಯ. ಆಧ್ಯಾತ್ಮ ಸಾಧನೆಗೆ ಬದುಕನ್ನು ಮೀಸಲಾಗಿರಿಸಿ ಬೆಳೆಯುವ ಸಿರಿ ಮೊಳಕೆಯಲ್ಲಿಯೇ ಕಾಣು ಎನ್ನುವುದಕ್ಕೆ ದಾನಪ್ಪ ಉದಾಹರಣೆಯಾದ. ಮುಂದೆ ಗೆಳೆಯರನ್ನು ಕಲೆಹಾಕಿ 'ಅರುಣೋದಯ ನಾಟ್ಯ ಸಂಘ' ಕಟ್ಟಿ ನಾಟಕ ಜೊತೆಗೆ ನಿರ್ದೇಶನ. ಮುಂದೆ ತಿಕೋಟಾದಲ್ಲಿಯ ಗ್ರಂಥಾಲಯವನ್ನು ಕೇಂದ್ರ ಗ್ರಂಥಾಲಯವಾಗುವಂತೆ ಹೋರಾಟ. ಇಲ್ಲಿಯ ಟೌನ ಪಂಚಾಯತಿ ಕಮೀಟಿ ಚೇರಮನ್ನರಾಗಿ ಏಳುವರ್ಷ ಸೇವೆ. ಹೀಗೆ ಎಡೆಬಿಡದೆ ಕಾರ್ಯ ಚಟುವಟಿಕೆಗಳಲ್ಲಿ ತೊಡಗಿ ಸಾಧನೆಯ ಶ್ರೀಗಿರಿಯತ್ತ ಸಾಗಿದವರು ದಾನಪ್ಪ ಜತ್ತಿಯವರು.

ದಾನಪ್ಪ ಜತ್ತಿಯವರ ಅಭಿನಯಕ್ಕೆ ಸೋಲದ ಮನಸ್ಸು ಯಾರಿಗಿದೆ ? ನಯ. ನಾಜೂಕು, ಕಂಠ ಮಾಧುರ್ಯದಲ್ಲಿ ಬ್ರಹ್ಮ ನಿರ್ಮಿಸಿದ ಸ್ತ್ರೀಯನ್ನು ಸಹ ಮೀರಿಸುವ ಅಭಿನಯ ಇವರೊಂದಿಗೆ ಮೈಗೂಡಿ ರಕ್ತದೊಂದಿಗೆ ರಕ್ತವಾಗಿದೆ. ರಂಗಭೂಮಿಯ ಮೇಲೆ ಸ್ತ್ರೀವೇಷದಲ್ಲಿ ಬಂದಾಗ ಎಷ್ಟೋ ಅಪರಿಚಿತ ವ್ಯಕ್ತಿಗಳು

'ಹೋ' ಎಂದು ಸಿಳ್ಳೆಹಾಕಿ ಬಾಯಿ ಚಪ್ಪರಿಸಿ 'ಒನ್ಸಮೋರ್' ಅಂದದ್ದೂ ಉಂಟು. ಹತ್ತು ವರ್ಷಗಳವರೆಗೆ ಆಕಾಶವಾಣಿ ಧಾರವಾಡ ಕೇಂದ್ರದಲ್ಲಿ ನಾಟಕ ವಿಭಾಗದಲ್ಲಿ ನಟರಾಗಿ ಕಾರ್ಯ ನಿರ್ವಹಣೆ ಹಾಗೂ ೧೯೭೨ರಲ್ಲಿ ತೆರೆಕಂಡ 'ಭಾರತ ರತ್ನ' ಕನ್ನಡ ಚಲನಚಿತ್ರವಲ್ಲಿಯೂ ಪಾತ್ರ ನಿರ್ವಹಣೆ ಹೆಗ್ಗಳಿಕೆಗೆ ಕಾರಣವಾಗಿದೆ.

ಮಾನವನ ಬದುಕಿನಲ್ಲಿ ತಿರುವುಗಳು ಸಹಜ, ಅಷ್ಟೇ ಅನಿವಾರ್ಯ. ಇದಕ್ಕೆ ಜತ್ತಿ ಹೊರತಾಗಲಿಲ್ಲ. ನಾಟಕ ನಟನೆಗೆ ಶರಣುಹೊಡೆದು ಪುರಾಣ, ಪ್ರವಚನ, ಕೀರ್ತನದತ್ತ ಇವರ ಬದುಕು ವಾಲಿತು. ಈಗ ಮೂವತ್ತು ವರ್ಷಗಳಿಂದ ಕನ್ನಡ ನಾಡಿನ ತುಂಬೆಲ್ಲ ಪುರಾಣ, ಪ್ರವಚನ, ಕೀರ್ತನಗಳ ಮೂಲಕ ಧರ್ಮ, ಸಂಸ್ಕೃತಿ, ಭಕ್ತಿ, ಅಧ್ಯಾತ್ಮಗಳನ್ನು ತಿಳಿಹೇಳುವುದರೊಂದಿಗೆ ಸರ್ವಧರ್ಮ ಸಮನ್ವಯ, ಭಾವೈಕ್ಯತೆ, ರಾಷ್ಟ್ರೀಯಪ್ರಜ್ಞೆ ಬಿಂಬಿಸಲೂ ಯತ್ನಿಸುತ್ತಿದ್ದಾರೆ. ಪುರಾಣ ಹೇಳುವಾಗ ಇವರ ಬಾಯಿಂದ ಹೊಮ್ಮಿಬರುವ ಹಳಗನ್ನಡ, ನಡುಗನ್ನಡ, ಹೊಸಗನ್ನಡ ಕಾವ್ಯಗಳನ್ನು ಕೇಳಿದರೆ ಮೈ ಜುಮ್ಮೆನ್ನುತ್ತದೆ. ಹೈಸ್ಕೂಲ್ ಕಟ್ಟೆ ಯನ್ನೂ ತುಳಿಯದ ದಾನಪ್ಪ ಜತ್ತಿ, ಹಳಗನ್ನಡ ಕಾವ್ಯಗಳನ್ನು ಲೀಲಾಜಾಲವಾಗಿ, ನಿರಿಳಿತದ ಧ್ವನಿಯಲ್ಲಿ ಬಾಯಿಪಾಠದಿಂದ ಜನರೆದುರಿಗೆ ಹೇಳುವುದನ್ನು ನೋಡಿದರೆ ವಿಶ್ವವಿದ್ಯಾಲಯ ಕಂಡು, ಕಲಿತು ಬಂದವರಿಗೂ ಇಷ್ಟು ಜ್ಞಾನವಿರುವುದೇ ? ಎಂಬ ಸಂಶಯ ಸುಳಿಯುತ್ತದೆ ಅಂತಹ ನಿಪುಣರಿವರು. ಇವರು ಆಕಾಶವಾಣಿ ಕಲಾ ವಿದರಾಗಿದ್ದು, ಸಾಕಷ್ಟು ಕೀರ್ತನೆಗಳು ಆಕಾಶವಾಣಿಯಲ್ಲಿ ಪ್ರಸಾರಗೊಂಡಿದ್ದು. ಈಗಲೂ ಪ್ರಸಾರಗೊಳ್ಳುತ್ತಲಿವೆ. ಇವರ ನಿಪುಣತೆಗೆ ವಚನರಚನಾ ಚತುರ, ಪ್ರವಚನ ಕಲಾಪ್ರವೀಣ, ಮಾದರಿ ಮಾನವ, ಕೀರ್ತನ ಕೇಸರಿ ಮೊದಲಾದ ಬಿರುದು ಗಳೊಂದಿಗೆ ಲೆಕ್ಕವಿಲ್ಲದಷ್ಟು ಪ್ರಶಸ್ತಿಗಳನ್ನು ತಮ್ಮ ಬುಟ್ಟಿಗೆ ಹಾಕಿಕೊಂಡಿದ್ದಾರೆ.

ಪ್ರವಚನಕ್ಕೆಂದು ಜತ್ತಿಯವರು ಹೋದಲ್ಲೆಲ್ಲ ಜೊತೆಗಾರರಾದ ಹಾರ್ಮೋ ನಿಯಂ ಹಾಗೂ ತಬಲಾ ಸಾಥ ಕಲಾವಿದರು ತಾವು ಅವರೊಂದಿಗೆ ಹೋಗಿ, ಅವರಿಗೆ ಸಾಥ ನೀಡಿ, ಅವರ ಕಲೆಗೆ ಮೆರಗು ನೀಡುವುದರ ಜೊತೆಗೆ ತಮ್ಮ ಕಲೆಯನ್ನು ಇಮ್ಮಡಿ ಗೊಳಿಸುತ್ತಾ ಬಂದಿದ್ದಾರೆ.

'ತಿಮ್ಮ' ದಾನಪ್ಪ ಜತ್ತಿಯವರ ಆತ್ಮೀಯ ಸ್ನೇಹಿತ. ಜತ್ತಿಯವರೊಂದಿಗೆ ಲೀನವಾಗಿರುವ 'ತಿಮ್ಮ' ಇವರ ಪ್ರಸಿದ್ಧಿಗೆ, ಪ್ರತಿಭೆಗೆ ಕಾರಣವಾಗಿದ್ದಾನೆ. ಕೀರ್ತನ ಹೇಳುವ ಸಂದರ್ಭದಲ್ಲಿ ನಡು – ನಡುವೆ ವಚನ, ತ್ರಿಪದಿ ಹಾಡುಗಳ ಜೊತೆಗೆ ತಿಮ್ಮನೂ ಆಗಾಗ ಕಾಣಿಸಿಕೊಳ್ಳುತ್ತಾನೆ. ಕೀರ್ತನ ಕೇಳುವ ಜನರ ಮನಸ್ಸನ್ನು ಚೆನ್ನಾಗಿ ಅರಿತುಕೊಳ್ಳುವ ದಾನಪ್ಪ ಜತ್ತಿ, ಜನರಿಗೆ ಬೇಸರವಾಗಿದೆ ಎಂದಾಗಲೆಲ್ಲ ಹಾಗೂ ಸಂದರ್ಭಕ್ಕೆ ಅನುಸಾರವಾಗಿ ತಿಮ್ಮನನ್ನು ನಾಯಕನನ್ನಾಗಿಸಿಕೊಂಡು ನೀತಿ ಲೇಪಿತ ಚುಟುಕು (ನಗೆಹನಿ) ಹೇಳಿ, ಜನರ ಹೊಟ್ಟೆ ಹುಣ್ಣಾಗಿಸುತ್ತಾರೆ. ಕೋಳೂರು

ಕೊಡಗೂಸು, ಶಿವನ ಆಣೆ, ನಗೆಮಾರಿ ತಂದೆ, ಸುಜ್ಞಾನಿ ದೇವ, ಸಂತ ನಾಮದೇವ ಎಂಬ ಕೀರ್ತನೆಗಳನ್ನು ಕ್ಯಾಸೆಟ್ ಪ್ರಪಂಚಕ್ಕೆ ನೀಡಿದ ಜತ್ತಿಯವರು ಸಾಹಿತ್ಯ ಕ್ಷೇತ್ರಕ್ಕೂ ಕಾಲಿಟ್ಟು ಸಾಕಷ್ಟು ಕೃಷಿ ಮಾಡಿದ್ದಾರೆ. ಅಮೂಲ್ಯ ಕಾಣಿಕೆ, ಭಾವ ಸೌರಭ, ಬಸವ ತತ್ತ್ವದರ್ಶನ, ವಚನಾಮೃತ, ಶರಣರು ನಕ್ಕಾಗ ಮೊದಲಾದ ಕೃತಿಗಳನ್ನು ನೀಡಿದ ಹೆಮ್ಮೆ ಇವರದು.

"ಆಗಿನ ಜನತೆ ಪುರಾಣ ಪ್ರವಚನ ಆಲಿಸುವದರಿಂದ ಆಧ್ಯಾತ್ಮ ತತ್ತ್ವಜ್ಞಾನದತ್ತ ಅವರ ಒಲವಿತ್ತು. ಆಗ ಪುರಾಣ ಪ್ರವಚನಕ್ಕೆ ಬಹು ಬೆಲೆ ಇತ್ತು. ಅಷ್ಟೇ ಅಲ್ಲ, ಪುರಾಣ ಪ್ರವಚನ ಹೇಳುವವರೂ ಆಧ್ಯಾತ್ಮ ಸಾಧಕರಾಗಿ, ನೈತಿಕವಾಗಿ. ಮೌಲಿಕ ಬದುಕನ್ನು ಹೊಂದಿ ಪುರಾಣ. ಪ್ರವಚನ ಹೇಳುತ್ತಿದ್ದರು. ಕೇಳುವವರ, ಹೇಳುವವರ ನಡೆ–ನುಡಿಯಲ್ಲಿ ಸಾಮ್ಯತೆ ಇತ್ತು. ಹೀಗಾಗಿ ಆಗ ಪುರಾಣ ಪ್ರವಚನಕ್ಕೆ ಅಧಿಕ ಬೆಲೆಯಿತ್ತು. ಆದರೆ ಇವನ್ನು ಇದೀಗ ಆ ಬೆಲೆಯಲ್ಲಿ ಕಾಣದಾಗಿದೆ. ಇತ್ತ ಕಡೆ ಜನತೆಯ ಒಲವು ಕಡಿಮೆಗೊಳ್ಳಲು ನಾಟಕ, ಸಿನೇಮಾ, ರೇಡಿಯೋ ವಿಶೇಷವಾಗಿ ಟಿ.ವ್ಹಿ.ಗಳು ಕಾರಣಗಳಾಗಿವೆ. ಇವು ಜನತೆಯ ಮನಸ್ಸನ್ನು ತಮ್ಮತ್ತ ಸೆಳೆದುಕೊಂಡಿವೆ. ಆದರೂ ಪ್ರಚಲಿತ ಜನಮನಕ್ಕೆ ಸ್ಪಂದಿಸಿ ಪುರಾಣ – ಪ್ರವಚನ ಹೇಳಿದರೆ ಜನತೆ ಆಸಕ್ತಿಯಿಂದ ಅಧಿಕ ಸಂಖ್ಯೆಯಲ್ಲಿ ಆಲಿಸುತ್ತಾರೆ......" ಎನ್ನುವ ದಾನಪ್ಪ ಜತ್ತಿಯವರ ಮಾತುಗಳನ್ನು ನ್ಯಾಯದ ತಕ್ಕಡಿಯಲ್ಲಿಟ್ಟು ತೂಗಿ ನೋಡಿದರೆ ನಿಜವೆನಿಸುತ್ತದೆ.

ಸುಮಾರು ನಲವತ್ತು ವರ್ಷಗಳಿಂದಲೂ ಅಭಿನಯ, ಸಂಗೀತ, ಸಾಹಿತ್ಯ, ಧಾರ್ಮಿಕ, ಸಾಮಾಜಿಕ ಸೇವೆ, ಪುರಾಣ–ಪ್ರವಚನ–ಕೀರ್ತನೆ...... ಹೀಗೆ ಬದುಕಿನ ಹಲವು ಹತ್ತಾರು ರಂಗಗಳಲ್ಲಿ ತಮ್ಮನ್ನು ತಾವು ಸಮರ್ಪಿಸಿಕೊಂಡು ಕಲೆಯನ್ನೇ ಉಸಿರನ್ನಾಗಿಸಿಕೊಂಡು ಬದುಕು ನೂಕುತ್ತಿರುವ ಪ್ರತಿಭಾನ್ವಿತ ದಾನಪ್ಪ ಜತ್ತಿಯವರಿಗೆ ಕರ್ನಾಟಕ ರಾಜ್ಯ ಸಂಗೀತ, ನೃತ್ಯ ಅಕಾಡೆಮಿಯಿಂದ ವಿಜಾಪೂರ ಜಿಲ್ಲೆಯಿಂದ ಸದಸ್ಯತ್ವ, ರಾಜ್ಯ ಪ್ರಶಸ್ತಿ ಹಾಗೂ ಗೌರವ ಮಾಶಾಸನಗಳು ಇನ್ನೂ ದೊರಕದೇ ಇದ್ದದ್ದು ಅವರ ಸಹಸ್ರಾರು ಅಭಿಮಾನಿಗಳಿಗೆ ಕೊರಗು ತಂದಿದೆ. ಸಂಬಂಧಿಸಿದ ಇಲಾಖೆಗಳು ದಾನಪ್ಪ ಜತ್ತಿಯವರ ಪ್ರತಿಭೆಯನ್ನು ಗಮನಿಸಿ ಸದಸ್ಯತ್ವ, ರಾಜ್ಯ ಪ್ರಶಸ್ತಿ, ಮಾಶಾಸನಗಳನ್ನು ನೀಡಬೇಕಾದುದು ತೀರಾ ಅಗತ್ಯವಾಗಿದೆ. ಈ ಎಲ್ಲವುಗಳನ್ನು ಇಲಾಖೆಗಳು ನೀಡಿದರೆ ಪ್ರತಿಭಾವಂತರನ್ನು ಗೌರವಿಸಿದಂತಾಗುವುದರ ಜೊತೆಗೆ ತಮ್ಮನ್ನು ತಾವು ಗೌರವಿಸಿಕೊಂಡಂತಾಗುವದು. ಇದಕ್ಕೂ ಹೆಚ್ಚಿನದಾಗಿ ಜತ್ತಿಯವರ ಸಹಸ್ರಾರು ಅಭಿಮಾನಿಗಳ ಕೊರಗನ್ನು ನೀಗಿಸಿದಂತಾಗುತ್ತದೆ.

(ಪ್ರಕಟಿತ : ಸಂಯುಕ್ತ ಕರ್ನಾಟಕ)

# ಜತ್ತಿಯವರ ಕಥೆಗಳಲ್ಲಿ ಮಾನವೀಯ ಮೌಲ್ಯಗಳು

## ಅಬ್ಬಾಸ ಮೇಲಿನಮನಿ

ಇತ್ತೀಚಿನ ದಶಕಗಳಲ್ಲಿ ಪ್ರವಚನ ಪ್ರಪಂಚದಲ್ಲಿ ಅತ್ಯಂತ ಗಟ್ಟಿಯಾದ ಹೆಸರು ಮಾಡಿರುವ ದಾನಪ್ಪ ಜತ್ತಿ ಅವರ ಸಣ್ಣಕಥಾ ಸಂಕಲನ 'ಅಮೂಲ್ಯ ಕಾಣಿಕೆ' ಪ್ರಕಟವಾದದ್ದು ೧೯೬೪ ರಲ್ಲಿ. ಸಾಹಿತ್ಯದ ಸಂವೇದನೆಗಳೊಂದಿಗೆ ಸ್ಪಂದಿಸುವ ಸಮಯದಲ್ಲಿ ರಚಿತವಾದ ಈ ಸಂಕಲನ ತನ್ನ ಅಂತರಂಗದ ಸೊಬಗನ್ನು, ಸುವಾಸನೆಯನ್ನು ಕಳೆದುಕೊಂಡಿಲ್ಲ. ಭಾರತೀಯ ಸಂಸ್ಕೃತಿಯ ಮೂಲ ಬೇರುಗಳಾದ ಮಾನವೀಯ ಮೌಲ್ಯಗಳನ್ನು ತಮ್ಮ ಕಥಾವಸ್ತುವಿಗೆ ಬಳಸಿಕೊಂಡಿರುವ ಜತ್ತಿಯವರು ಮಾನವೀಯ ತುಡಿತವಿರುವ ಎಲ್ಲರನ್ನು ತೀವ್ರವಾಗಿ ಸೆಳೆಯುತ್ತಾರೆ. ಪ್ರೀತಿ, ತ್ಯಾಗ, ಕರುಣೆ, ಮಮತೆ, ಔದಾರ್ಯ, ಅನುಕಂಪ, ಸಹಾನುಭೂತಿ, ದಯೆ, ಪ್ರಾಮಾಣಿಕತೆ ಇತ್ಯಾದಿ ಮೌಲ್ಯಗಳು ನಶಿಸುತ್ತಿರುವ ಇಂದಿನ ಸಂದರ್ಭದಲ್ಲಿ, ಅವುಗಳಿಲ್ಲದೆ ಬದುಕಿಗೆ ಅಸ್ತಿತ್ವವಿಲ್ಲ; ಮನುಷ್ಯನಿಗೆ ನೆಲೆಯಿಲ್ಲ ಎಂಬ ಸತ್ಯವನ್ನು ತಮ್ಮ ಕಥೆಗಳ ಮೂಲಕ ಬಿಡಿಸಿ ಹೇಳುವಲ್ಲಿ ಜತ್ತಿಯವರು ಯಶಸ್ವಿಯಾಗಿದ್ದಾರೆ.

ಸಂಕಲನದ ಹತ್ತು ಕಥೆಗಳಲ್ಲಿ ಒಂದೆರಡನ್ನು ಬಿಟ್ಟರೆ ಉಳಿದ ಕಥೆಗಳ ವಸ್ತುಗಳು ಸಮಂಜಸ ಮತ್ತು ಅರ್ಥಪೂರ್ಣವಾಗಿಯೇ ಇವೆ. ಚಿರಂತನ ಮೌಲ್ಯಗಳನ್ನು ನಿರೂಪಿಸುವ ನಿಟ್ಟಿನಲ್ಲೂ ಸರಳತೆ ಮತ್ತು ಸಭ್ಯತೆ ತನ್ನ ಮಿತಿ ಮೀರದಿರುವುದು ಜತ್ತಿಯವರ ಕಥೆಗಳ ಒಂದು ವೈಶಿಷ್ಟ್ಯ.

'ಅಮೂಲ್ಯ ಕಾಣಿಕೆ' ಸಂಕಲನದ ಮೊದಲ ಕಥೆ. ದೈವಕ್ಕೆ ಮಗುವನ್ನು, ದೇಶಕ್ಕೆ ಪತಿಯನ್ನು ಬಲಿಕೊಟ್ಟು ರಕ್ಷಣಾ ನಿಧಿಗೆ ತನ್ನ ಸರ್ವಸ್ವವೇ ಆದ ಮಾಂಗಲ್ಯವನ್ನು ಅರ್ಪಿಸಿದ ಗಂಗೂತಾಯಿಯ ತ್ಯಾಗ ಭಾವನೆ ಇಲ್ಲಿ ಶ್ರೀಗಂಧವಾಗಿ ಸುಳಿಯುತ್ತದೆ. "ನನ್ನ ಮುದ್ದು ಕುಮಾರ, ಏಕೈಕ ಪುತ್ರರತ್ನ ಅವನಿಂದು ಸಿದ್ಧರಾಮನಿಗೆ ಅರ್ಪಿತನಾದ. ನನ್ನ ಪೂಜ್ಯ ಪತಿದೇವ ದೇಶ ರಕ್ಷಣೆಗಾಗಿ ವೈರಿಗಳೊಡನೆ ಹೋರಾಡಿ ರಣರಂಗದಲ್ಲಿ ಮಡಿದು ವೀರಸ್ವರ್ಗವನ್ನೇರಿದ. ಅಂಥ ಮಗುವಿನ ತಾಯಿ ನಾನು. ದೇಶರಕ್ಷಣೆಗಾಗಿ ವೀರ ಮರಣವನ್ನಪ್ಪಿ ಕೀರ್ತಿಕಾಯರಾದಂಥವರ ಸತಿ ನಾನು. ಅಂದಮೇಲೆ ನಾನು ಧನ್ಯಳಲ್ಲವೇ ?" ಎಂದು ಕಥೆಗಾರರು ತ್ಯಾಗದ ಮಹೋನ್ನತಿಯನ್ನು ಆ ಹೆಣ್ಣಿನ ನೋವಿನ ದನಿಯಲ್ಲಿ ಹೊರಡಿಸಿದ್ದು, ಮನುಷ್ಯನಿಗೆ ತುರ್ತು ಸುಖ ನೀಡುವ ಭೋಗಕ್ಕಿಂತ, ಸಾತ್ವಿಕ ಸುಖ ನೀಡುವ ತ್ಯಾಗವೇ ಬದುಕಿಗೆ ಅಮೂಲ್ಯವಾದದ್ದೆನ್ನುವ ಅಂಶವನ್ನು ಸ್ಪಷ್ಟಗೊಳಿಸುವುದು.

ಸಂಕಲನದ ಎರಡನೆಯ ಕಥೆ 'ಸ್ನೇಹ ಸೇತುವೆ'. ಸರೋಜಾ-ಲಲಿತಾ ಇಬ್ಬರೂ ಇಲ್ಲಿ ಬಾಲ್ಯಸ್ನೇಹಿತೆಯರು. ಕೂಡಿ ಆಡಿದವರು, ಕಲಿತವರು, ಜೊತೆಗೆ ಬೆಳೆದವರು. ಹಾಲುಸಕ್ಕರೆಯಂಥ ಅವರ ಸ್ನೇಹ ಮಧುರ ಮತ್ತು ಚಿರಂತನ. ಸರೋಜಾ ಶ್ರೀಮಂತ ಹುಡುಗಿ, ಆದರೆ ಲಲಿತಾ ಬಡತನದ ಕಹಿ ಮೆದ್ದವಳು. ಅದೇ ಸ್ಥಿತಿಯಲ್ಲಿ ಮದುವೆ ಕೂಡ ಆಗಿದ್ದವಳು. ಆದರೆ ಹೆಣ್ಣಿನ ಜೀವನವನ್ನು ಆಪೋಶಿಸುವ 'ವರದಕ್ಷಿಣೆ'ಯ ನಂಜು ಲಲಿತಳನ್ನು ಬಿಡಲಿಲ್ಲ. ಪ್ರಸ್ತುದ ವೇಳೆಗೆ ಹಣ ಬರದ ಕಾರಣ ರಾಕ್ಷಸಿ ಬೀಗರು ಲಲಿತಳನ್ನು ಮನೆ ಸೇರಿಸಿಕೊಳ್ಳಲಿಲ್ಲ. ವಿಚಾರ ತಿಳಿದ ಸರೋಜ ನಲುಗಿದಳು. ದಯಾರ್ದ್ರಭಾವದ ಆಕೆಯ ಒಡಲು ಸ್ನೇಹಿತೆಗಾಗಿ ಕನಲಿತು. ಸ್ನೇಹದಲ್ಲಿ ನಂಬುಗೆ, ವಿಶ್ವಾಸವಿಟ್ಟ ಹುಡುಗಿ ಸರೋಜಾ, ಲಲಿತೆಯ ಬದುಕಿನ ಕಪ್ಪು ಕಳೆಯಲು ಮುಂದಾಗಿ ತನ್ನ ಕೊರಳಲ್ಲಿದ್ದ ಚಿನ್ನದ ಸರಗಳನ್ನೆಲ್ಲ ತೆಗೆದು ಕೊಟ್ಟು "ಸಾವಿರಾರು ರೂಪಾಯಿ ಬೆಲೆಬಾಳುವ ಚಿನ್ನದಾಭರಣಗಳಿವೆ. ಗೆಳತಿ ಲಲಿತೆಯ ಪ್ರೇಮಕ್ಕಿಂತಲೂ ಈ ಆಭರಣಗಳು ಅಷ್ಟೇ ಏಕೆ ನನ್ನ ಜೀವನದಲ್ಲಿ ಯಾವುದೂ ಹೆಚ್ಚಿನದಲ್ಲ..." ಎಂದು ಔದಾರ್ಯ ಪ್ರದರ್ಶಿಸಿ, ಲಲಿತೆಯನ್ನು ಗಂಡನ ಮನೆಗೆ ಕಳಿಸಿ, ಅವಳಿಗೆ ಹೊಸ ಬದುಕಿನ ಆಯಾಮ ನೀಡಿದ್ದು ಪ್ರಶಂಸನೀಯ ಸಂಗತಿಯೇ ನಿಜ, ಪರಸ್ಪರ ಹೃದಯಗಳಲ್ಲಿ ಹೆಪ್ಪುಗಟ್ಟಿ ನಿಂತ ನೈಜಸ್ನೇಹ ಸಂಕುಚಿತ ಪರಿಧಿಯಿಂದ ದೂರಾಗುಳಿದು ವೈಶಾಲ್ಯತೆಯ ಮೌಲ್ಯವಾಗಿ ಅಮರವಾಗಿ ಉಳಿಯ ಬಲ್ಲದೆಂಬುದಕ್ಕೆ ಈ ಕಥೆ ನಿದರ್ಶನವಾಗುವುದು.

ಒಬ್ಬ ವ್ಯಕ್ತಿ ತನ್ನಷ್ಟಕ್ಕೆ ಮಾತ್ರ ಬದುಕಿದರೆ ಸಾಲದು. ತಾನು ಬದುಕುವುದ ರೊಂದಿಗೆ ಇತರರನ್ನು ಬದುಕಿಸುವ ಕ್ರಿಯೆಯಲ್ಲಿ ವ್ಯಕ್ತಿಯ ಸಂತೋಷ ಅಡಗಿದೆ ಎನ್ನುವ ಆಶಯ ಹೊಂದಿದ ಕಥೆ 'ರಕ್ತದಾನ'. ಈ ಕಥೆಯಲ್ಲಿ ಒಬ್ಬ ಡಾಕ್ಟರ್ ರಾಜನ್ ಇದ್ದಾರೆ. ಇಂದಿನ ದಿನಗಳಲ್ಲಿ ಹಣಕ್ಕಾಗಿ ರಾಕ್ಷಸರಾಗುತ್ತಿರುವ ಡಾಕ್ಟರುಗಳ ಮಧ್ಯದಲ್ಲಿ ಡಾ. ರಾಜನ್ ಮಾನವೀಯ ಹೃದಯದ ಪರಿಶುದ್ಧತೆಯ ಸಂಕೇತವಾಗಿ ನಮಗೆ ಕಾಣಿಸುತ್ತಾರೆ. ರೋಗಿಗಳೆಂದರೆ, ಅವರ ನೋವು ಎಂದರೆ ಅವರ ಹೃದಯ ಮಿಡಿಯುತ್ತದೆ. ಅವರ ಹೆಂಡತಿ ಕುಸುಮ ಕೂಡ ಸಾತ್ವಿಕ, ಅನುಕಂಪ ಹೃದಯಿ. ಹೆರಿಗೆ ಸಮಯದಲ್ಲಿ ನಿಶ್ಶಕ್ತಿಯಿಂದ ಪ್ರಜ್ಞೆ ತಪ್ಪಿದ ಪಾರ್ವತಿಗೆ ಅವಳ ಸಂಬಂಧಿಗಳು ನಾಲ್ಕು ಹನಿ ರಕ್ತ ಕೊಡಲು ಹಿಂಜರಿದ ಸಂದಿಗ್ಧ ಸ್ಥಿತಿಯಲ್ಲಿ ಕುಸುಮ "ನನ್ನ ರಕ್ತದಿಂದ ಓರ್ವ ಭಗಿನಿಯ ಜೀವ ಉಳಿದರೆ ನನ್ನ ಬದುಕು ಸಾರ್ಥಕ" ಎಂದು ರಕ್ತಕೊಟ್ಟು ಸಾಯುವ ಒಂದು ಜೀವವನ್ನು ಬದುಕಿಸಿಕೊಡುತ್ತಾಳೆ. ತಮ್ಮ ಸ್ವಾರ್ಥಕ್ಕಾಗಿ ಇನ್ನೊಬ್ಬರ ಜೀವವನ್ನು ಆಪೋಷಿಸುವವರ ಮಧ್ಯೆ ಕುಸುಮ ಸಂಜೀವಿನಿಯಾಗಿ ಇಲ್ಲಿ ಕಂಡುಬರುವುದು ಕಥೆಗಾರನ ಮಾನವೀಯ ಮೌಲ್ಯದ ಕಾರಣದಿಂದಲೇ ಎನ್ನಬಹುದು.

ಸಂಕಲನದ ಇನ್ನೊಂದು ಕಥೆ 'ಬಂಧು ಪ್ರೇಮ' ನಂಬಿದ ಮೌಲ್ಯಗಳಿಂದ ದೂರಾಗದ ವಸ್ತುವನ್ನೇ ಹೊಂದಿದೆ. ಬಡ ಸ್ನೇಹಿತನಿಗೆ ಸಹಾಯ-ಸಹಕಾರ ನೀಡು ವುದರ ಜೊತೆಗೆ ರಕ್ತ ಸಂಬಂಧವನ್ನು ಹೊಂದಲು ಅಪೇಕ್ಷಿಸಿ ತನ್ನ ತಂಗಿಯನ್ನೇ ಧಾರೆಯೆರೆಯಲು ಪ್ರಯತ್ನಿಸುತ್ತಾನೆ ಶೇಖರ. ಇದು ರಮೇಶನಿಗೆ ಅಚ್ಚರಿಯೆನಿ ಸಿದರೂ ಸ್ನೇಹಿತನ ಧಾರಾಳತನವನ್ನು ಕೃತಜ್ಞತಾ ಭಾವದಿಂದ ಸ್ವೀಕರಿಸಿದರೆ, ಶೇಖರನ ತಂಗಿ ವಾಸಂತಿ ತಾನು ಹೃದಯಾರೆ ಪ್ರೀತಿಸುವ ಅರವಿಂದನನ್ನು, ಅಣ್ಣನ ಪ್ರತಿಜ್ಞೆಯ ಸಲುವಾಗಿ ಬಿಟ್ಟುಕೊಟ್ಟು ರಮೇಶನನ್ನು ಮದುವೆಯಾಗು ತ್ತಾಳೆ. ಇಲ್ಲಿ ಪ್ರಣಯಿಗಳ ಪ್ರೀತಿ ಮೌಲ್ಯಕ್ಕಾಗಿ ಕವಲೊಡೆದು ಅಣ್ಣ – ತಂಗಿಯರ ಬಾಂಧವ್ಯದ ಪ್ರೀತಿಗೆ ಮೆರಗು ಮೂಡುತ್ತದೆ. ಕರುಳ ಸಂಬಂಧಕ್ಕೆ ಸೋತ ವಾಸಂತಿ ತನ್ನ ಪ್ರಿಯಕರನ ಪ್ರೀತಿಯನ್ನು ದೂರಮಾಡುವ ದಿಟ್ಟತನ ತೋರು ತ್ತಾಳೆ. ಭೋಗಕ್ಕಿಂತಲೂ ತ್ಯಾಗವೇ ಬಹು ಮೌಲ್ಯಯುತವಾಗಿ ನಮಗಿಲ್ಲಿ ಗೋಚರಿ ಸುವುದು.

ಬಡತನ ಮತ್ತು ಸಿರಿತನಗಳ ನಡುವಿನ ಸೂಕ್ಷ್ಮ ಎಳೆಗಳನ್ನು ಹೊಂದಿದ ಕಥೆ 'ಕೃತಜ್ಞತೆ'...ಯಾರಿಗೂ ಬಡತನ. ಸಿರಿತನ ಶಾಶ್ವತವಲ್ಲ ಆದರೆ ಅದನ್ನು ಅನು ಭವಿಸುವಾಗಿನ ಸನ್ನಿವೇಶಗಳು ಜೀವಂತವಾಗಿರಬೇಕೆನ್ನುವ ಕಳಕಳಿಯನ್ನು ಈ ಕಥೆ ಬಿಂಬಿಸುತ್ತದೆ. ಬಡವರ ಮನೆಯ ಮಹಾಂತ, ವಾರದ ಮನೆಯ ಅನ್ನವನ್ನುಂಡು ಶ್ರೀಮಂತ ವೀರಣ್ಣನವರ ಉದಾರತೆಗೆ ತಲೆಬಾಗಿ. ಸ್ವ ಪ್ರತಿಭೆಯ ಬೆಳಗಿನಿಂದ ದೊಡ್ಡ ಹುದ್ದೆಯಲ್ಲಿದ್ದರೂ ತನ್ನ ಅನ್ನದ ಋಣವನ್ನು ಮರೆಯುವುದಿಲ್ಲ. ಅಧಿಕಾರ, ಅಂತಸ್ತು ಅವನ ಕಣ್ಣುಗಳನ್ನು ಕುರುಡುಗೊಳಿಸುವುದಿಲ್ಲ. ಈಗ ಎಲ್ಲವನ್ನು ಕಳೆದು ಕೊಂಡು ನಿರ್ಗತಿಕರಾದ ವೀರಣ್ಣನವರನ್ನು ಮಹಾಂತ ಕೃತಜ್ಞತಾಭಾವದಿಂದ ಸಲಹುತ್ತಾನೆ. ಇತರರಿಂದ ಉಪಕಾರ. ಸಹಾಯ ಪಡೆದ ಮನುಷ್ಯ ಜೀವಿತ ಮುದ್ದಕ್ಕೂ ಕೃತಜ್ಞನಾಗಿರಬೇಕೆನ್ನುವುದಕ್ಕೆ ಮಹಾಂತ ಸಾಕ್ಷಿಯಾಗಿ ನಿಂತರೆ, ಶ್ರೀಮಂತರು ಹಣದಿಂದ ದೊಡ್ಡವರೆನಿಸುವುದಿಲ್ಲ ಅವರು ತಮ್ಮ ಉದಾರ ಗುಣ ದಿಂದ. ವೈಶಾಲ್ಯ ಹೃದಯದಿಂದ ಕೀರ್ತಿಶಾಲಿಯಾಗುತ್ತಾರೆ. ಇತಿಹಾಸವಾಗು ತ್ತಾರೆ ಎಂಬುದನ್ನು ಕಥೆಗಾರ ಇಲ್ಲಿ ಸ್ಪಷ್ಟಪಡಿಸುವುದರ ಜೊತೆಗೆ ಒಬ್ಬ ಶ್ರೀಮಂತ ಮಾಡುವ ಒಳ್ಳೆಯ ಕೃತಿಯನ್ನು ಶ್ರೀಮಂತ ವೀರಣ್ಣನವರ ಬಾಯಿಂದ "ಸೃಷ್ಟಿ ಯಲ್ಲಿ ಹುಟ್ಟಿ ಬಂದ ಬಳಿಕ ಇದರ ಬಾಡಿಗೆಯನ್ನು ನಾವು ದೇವನಿಗೆ ಕೊಡಲೇಬೇಕಾ ಗುತ್ತದೆ. ನಾವು ಪರರಿಗೆ ಉಪಕಾರ ಮಾಡುವುದರಿಂದಲೇ ಅವನ ಬಾಡಿಗೆ ಮುಟ್ಟಿ ಹೋಗುತ್ತದೆ" ಎಂದು ನುಡಿಸಿ. ತಮ್ಮ ಹೃದಯದ ಒಟ್ಟು ಆಶಯವನ್ನು ವ್ಯಕ್ತ ಪಡಿಸುತ್ತಾರೆ.

'ದಯುವಿಲ್ಲದ ದಯಾಳು' ಕಥೆಯು ಆಗರ್ಭ ಶ್ರೀಮಂತ ಶೇಠ ರಾಮುದಯಾಳು ಹಣದ ಅಮಲಿಕೆಯಿಂದ ಅಂತರಂಗವನ್ನು ಕೆಡಿಸಿಕೊಂಡವನು. ಅವನ ದೃಷ್ಟಿಯಲ್ಲಿ ಹೆಣ್ಣು ಎಂದರೆ ಕೇವಲ ಭೋಗದ ವಸ್ತು ಮಾತ್ರ. ಹೆಣ್ಣಿನ ಚಲುವಿಕೆಗೆ ಕಾಮುದ ಕಣ್ಣು ಅರಳಿಸಿಕೊಂಡು ಜೊಲ್ಲು ಸುರಿಸುವ ಅವನಿಗೆ ನಿಸ್ಸಹಾಯಕ. ವಿನಮ್ರ ಭಾವದ ಹೆಣ್ಣಿನ ಮನಸ್ಸಿನ ಸೂಕ್ಷ್ಮ ಭಾವನೆಗಳನ್ನು ಅರ್ಥ ಮಾಡಿಕೊಳ್ಳದೆ ಅವಳ ದೈನ್ಯಸ್ಥಿತಿಯಲ್ಲೂ ಹಣದ ಮೂಲಕ ದಾಹ ತೀರಿಸಿಕೊಳ್ಳುವ ಪಾಪದ ಕೆಲಸಕ್ಕೆ ಹೇಸದ ಅವನದು ಪುಣ್ಯದ ಹೆಸರು. ಇನ್ನೊಬ್ಬ ಅನಾಥ ಹೆಣ್ಣು ಮಗಳನ್ನು 'ತಂಗಿ' ಎಂದು ಪರಿಭಾವಿಸಿ, ವಾತ್ಸಲ್ಯ ತೋರಿ ಆಶ್ರಯ ನೀಡುವನು. ಅವನ ಹೆಸರು ಪಾಪಣ್ಣ. ಪಾಪದ ಹೆಸರಿನ ಪಾಪಣ್ಣ ಇಲ್ಲಿ ಪುಣ್ಯದ ಉದ್ದೇಶಗಳನ್ನು ಇಟ್ಟುಕೊಂಡಿದ್ದರೆ, ಶ್ರೀರಾಮನ ಪುಣ್ಯದ ಹೆಸರನ್ನು ಹೊಂದಿದ ರಾಮುದಯಾಳು ಪಾಪದ ಪ್ರಜ್ಞೆಯಲ್ಲಿ ಹಣ ಚೆಲ್ಲುತ್ತ, ಅಸಹಾಯಕರನ್ನು ಶೋಷಿಸುತ್ತ ಬದುಕಿದ್ದಾನೆ. ಇದೊಂದು ವಿಪರ್ಯಾಸ: ಹೆಸರಿಗೂ – ವ್ಯಕ್ತಿತ್ವಕ್ಕೂ ಭೂಮಿ ಆಕಾಶದಷ್ಟು ಅಂತರ ಹೊಂದಿರುವ ಜನರನ್ನು ಕಂಡು ಕಥೆಗಾರ ಇಲ್ಲಿ ವ್ಯಥಿತನಾಗುತ್ತಾನೆ. ಮಾನವೀಯ ಹೆಸರಿನ ಮೇಲೆ ಅಮಾನುಷ ವರ್ತನೆಗಿಳಿದವರನ್ನು ಕಂಡು ಮೂಕರಾಗಿ ರೋಧಿಸುತ್ತಾರೆ. "ಪಾಪಣ್ಣ ಪಾಪದ ಹೆಸರಿಟ್ಟುಕೊಂಡು ಪುಣ್ಯದ ಕಾರ್ಯ ಮಾಡುತ್ತಿದ್ದರೆ, ರಾಮುದಯಾಳು ರಾಮನ ಹೆಸರಿಟ್ಟುಕೊಂಡು ರಾವಣನ ಮಾರ್ಗವನ್ನು ಅವಲಂಬಿಸಿದ್ದರು. ರಾವಣ ಸೀತೆಯೊಬ್ಬಳನ್ನೇ ಕದ್ದೊಯ್ದಿದ್ದರೆ ರಾಮುದಯಾಳರು ಅದೆಷ್ಟು ಸೀತೆಯರ ಮಾನಹರಣ ಮಾಡಿದ್ದರೋ !" ಎಂದು ಅಭಿವ್ಯಕ್ತಿಸುವಲ್ಲಿ ಕಥೆಗಾರರ ವೇದನೆಯ ಧ್ವನಿಯನ್ನು ನಾವು ಗುರುತಿಸಬಹುದು.

'ಆತ್ಮಾಹುತಿ' ಸಂಕಲನದ ಇನ್ನೊಂದು ಕಥೆ, ಮಾನವೀಯ ಗುಣಗಳಿಂದ ಬದುಕಿನ ಸುಖ ಅನುಭವಿಸುವ ನಿಟ್ಟಿನಲ್ಲಿದ್ದ ಕುಟುಂಬ ಶಿವಬಸಪ್ಪನದು. ತಾನೂ ಬದುಕಬೇಕು, ಇನ್ನೊಬ್ಬರನ್ನೂ ಬದುಕಿಸಬೇಕು ಎಂಬ ತಾತ್ತ್ವಿಕ ನಿಲುವಿನ ಶಿವಬಸಪ್ಪ ತನ್ನ ದೂರದ ಸಂಬಂಧಿ ರೇವಣೆಪ್ಪನ ಮೇಲೆ ಕರುಣೆ ತೋರಿ, ತಮ್ಮ ಕಿರಾಣಿ ಅಂಗಡಿಯಲ್ಲಿ ಇಟ್ಟುಕೊಂಡು, ಚೆಲ್ಲಾಪಿಲ್ಲಿಯಾಗಿದ್ದ ಅವರ ಕುಟುಂಬಕ್ಕೊಂದು ದಿಕ್ಕಾಗುವುದರೊಂದಿಗೆ ರೇವಣೆಪ್ಪನಿಗೆ ತನ್ನ ಮಗಳು ಕಾಸವ್ವಳನ್ನು ಧಾರೆಯೆರೆದು ಕೊಡುತ್ತಾರೆ. ಆದರೆ ಅನಾಗರಿಕ, ಅಸಂಸ್ಕೃತಿಯ ಪ್ರಜ್ಞೆಯ, ಕುತ್ಸಿತ, ಅಸಭ್ಯ ನಡವಳಿಕೆಯ ರೇವಣೆಪ್ಪನ ಮನೆಯ ಜನ ಕರುಣೆ, ದಯೆ, ದಾಕ್ಷಿಣ್ಯ, ಮಮತೆ, ಕೃತಜ್ಞತೆಯ ಕೊರತೆಯಿಂದ ಬಳಲುವ ಅದರಲ್ಲೂ ತನ್ನ ರಾಕ್ಷಸಿ ಗುಣಗಳಿಂದ ಮನೆಯವರನ್ನೆಲ್ಲ ತನ್ನ ನಿಯಂತ್ರಣದಲ್ಲಿಟ್ಟುಕೊಂಡ ಹಿರಿಯ ಸೊಸೆ ಯಮುನವ್ವ ರೇವಣೆಪ್ಪನ ಹೂ ಹೃದಯ ಕೆಡಿಸಿ, ಶಿವಬಸಪ್ಪನ ಮೇಲಿನ ಅವನ ಕೃತಜ್ಞತಾ ಹೃದಯದಲ್ಲಿ ಹುಳಿಹಿಂಡುತ್ತ ಕಪ್ಪುಗೊಳಿಸುತ್ತಾಳೆ. ಅತ್ತಿಗೆಯ ಮಾತಿಗೆ ತಲೆ

ದೂಗುತ್ತ ಅಪ್ರಾಮಾಣಿಕತೆಯನ್ನು ರೂಢಿಸಿಕೊಂಡು, ಹಣ ದೋಚುತ್ತ ಅನ್ನ ಇಟ್ಟವರಿಗೆ ವಿಷವೀಯತೊಡಗುತ್ತಾನೆ. ಈ ಸೂಕ್ಷ್ಮತೆ ಅರಿವಾಗಿ ಶಿವಬಸಪ್ಪ ರೇವಣೆಪ್ಪನನ್ನು ಅಂಗಡಿಯಿಂದ ದೂರಮಾಡುತ್ತಾರೆ.

"ಸಾತ್ವಿಕರಿಗೂ ಒಳ್ಳೆಯವರಿಗೂ ಈಗ ಕಾಲವಿಲ್ಲ" ಎನ್ನುವ ಕಥೆಗಾರರು ಅಭಿವ್ಯಕ್ತಿಸುವ ಮಾತು ಸತ್ಯವೋ ಎನ್ನುವಂತೆ ರೇವಣೆಪ್ಪ ತನ್ನ ಮನೆಯ ಜನರೊಂದಿಗೆ ಅಂಗಡಿಯೊಂದನ್ನು ತೆರೆದು ಮೋಸ, ವಂಚನೆಗಳಿಂದ ಹಣ ಗಳಿಕೆಯಲ್ಲಿ ದಾಪುಗಾಲು ಹಾಕುತ್ತಾನೆ. ಯಮುನವ್ವಳ ಕುಮ್ಮಕ್ಕಿನಿಂದ ಅವಿವೇಕಿಯಾದ ರೇವಣೆಪ್ಪ ಹೆಂಡತಿಯಾದ ಕಾಸವ್ವಳನ್ನು ಬೇಕಾಬಿಟ್ಟಿಯಾಗಿ ಕಂಡು, ಅವಳ ಸಾವಿಗೆ ಕಾರಣನಾಗುತ್ತಾನೆ. ಮಾನವೀಯತೆಯ ದಾರಿದ್ರ್ಯದಿಂದ ಬಳಲುವ ಮನುಷ್ಯ ಕೇವಲ ಹಣದಿಂದ, ಮೋಸ, ದಗಾಖೋರತನದಿಂದ ಸುಖಹೊಂದಲು ಸಾಧ್ಯವೇ ! ಇಲ್ಲ ಎನ್ನುವ ಗಾಢ ಸತ್ಯವನ್ನು ಇಲ್ಲಿ ಪ್ರಸ್ತುತಪಡಿಸುವ ಕಥೆಗಾರರು ರೇವಣೆಪ್ಪನ ಕೃತಘ್ನ ಗುಣಕ್ಕೆ ಧಿಕ್ಕಾರ ಹೇಳುತ್ತಾರೆ.

ಸಂಕಲನದ ಇನ್ನೊಂದು ಗಮನಾರ್ಹ ಕಥೆಯೆಂದರೆ 'ದೀಪಾವಳಿ'. ಇದರ ನಾಯಕ ರವೀಂದ್ರ ತನ್ನ ಹೆಂಡತಿ ವಿಮಲಳ ಮೇಲೆ ಅತಿಶಯ ಪ್ರೀತಿಯಿಟ್ಟವನು. ಆಕೆ ಹೆರಿಗೆಯ ಸಮಯದಲ್ಲಿ ಮೃತ ಮಗುವಿನೊಂದಿಗೆ ಕೊನೆಯುಸಿರು ಎಳೆದಾಗ ಅತೀವ ವೇದನೆಗೆ ಒಳಗಾಗಿ ಬೆಳಕಿನ ಹಬ್ಬವಾದ ದೀಪಾವಳಿಯನ್ನು ಕತ್ತಲೆಯಲ್ಲಿಯೇ ಕಳೆಯುತ್ತಾನೆ. ಈ ಅನಾಥ ಪ್ರಜ್ಞೆಯಿಂದ ಅವನಿಗೆ ಸತ್ಯವೊಂದು ಗೋಚರಿಸುವುದು. ಕವಿ ರವೀಂದ್ರರ ಮಾತೊಂದು ನೆನಪಾಗುವದು. "ಮಾನವರಾದ ಯಾರನ್ನು ಅತಿಯಾಗಿ ಪ್ರೀತಿಸಬೇಡ. ಅತಿ ಪ್ರೀತಿ ಅನಂತ ದುಃಖಕ್ಕೆ ಬುನಾದಿ. ದೇವರನ್ನು, ದೇಶವನ್ನು ಪ್ರೀತಿಸು – ಆ ಪ್ರೀತಿ ಮಾತ್ರ ಶಾಶ್ವತ". ಈ ಮನೋಜ್ಞ, ಅರ್ಥಗರ್ಭಿತ ಮಾತಿನ ಹೊಳಹಿನಲ್ಲಿ, ವಿಮಲಳ ನೆಳಪಿನಿಂದ ಪಾರಾಗಲು ಯತ್ನಿಸುತ್ತಾನೆ ರವೀಂದ್ರ. ಮುಂದೆ ಗೆಳೆಯ ಶಶಿಕಾಂತನ ಸಹಾಯದಿಂದ ರಾಘವೇಂದ್ರರಾಯರ ಮಗಳಾದ ವಿಧವೆ ಶಾಮಲೆಯನ್ನು ಮದುವೆಯಾಗುತ್ತಾನೆ. ಒಬ್ಬ ವಿಧವೆಗೆ ಬದುಕುಕೊಡುವ ತೀರ್ಮಾನದಲ್ಲಿ ಸುಖ ಕಾಣುತ್ತಾನೆ. ಸಂಪ್ರದಾಯ, ಮೂಢನಂಬಿಕೆ, ಅಂಧಶ್ರದ್ಧೆಗಳ ಬೇಲಿಯಿಂದ ಅವಳನ್ನು ಪಾರು ಮಾಡಿ, ತನ್ನನ್ನು ಮುತ್ತಿದ ಕತ್ತಲೆಯಿಂದ ತಾನೂ ಹೊರಗೆ ಬರುವುದರ ಜೊತೆಗೆ ಶಾಮಲೆಗೂ ಬೆಳಕು ನೀಡುತ್ತ ದೀಪಾವಳಿಯ ವಾಸ್ತವತೆಯ ಅರಿವನ್ನು ಮೂಡಿಸುತ್ತಾನೆ.

ಹೀಗೆ ಸಂಕಲನದ ಬಹಳಷ್ಟು ಕಥೆಗಳಲ್ಲಿ ಮಾನವೀಯ ಬೆಳಕು ಹರಡಿ ನಿಲ್ಲುವುದು. ಜೀವನದ ನಿಜವಾದ ಅರ್ಥವನ್ನು ಸರಿಯಾದ ರೀತಿಯಲ್ಲಿ ರೇಖಿಸುವುದು.

ಆಧುನಿಕ ಕಥೆಗಾರರ ಯಾವ ಗಿಮಿಕ್‌ಗಳಿಗೂ ಇಲ್ಲಿ ಅವಕಾಶವಿಲ್ಲವಾದರೂ ಜತ್ತಿ ಅವರ ಕಥೆಗಳು ತಮ್ಮದೇ ಆದ ರಕ್ತಮಾಂಸದಿಂದ ಆರೋಗ್ಯಪೂರ್ಣವಾಗಿ ಕಂಗೊಳಿಸುತ್ತವೆ. ಜೀವನದ ಹಿರಿಯ ಮೌಲ್ಯಗಳನ್ನು ವೈಭವೀಕರಿಸುವ ನಿಟ್ಟಿನಲ್ಲೂ ಕಥೆಗಾರರ ಉದಾತ್ತಭಾವಕ್ಕೆ ಪ್ರಾಮಾಣಿಕ ಉಸಿರೇ ಸ್ಪಷ್ಟ ಕಾರಣವಾಗಿ ನಿಲ್ಲುತ್ತದೆ. ಬಾಳಿನಲ್ಲಿ ಮುದುಗಿದ ಮಾನವೀಯ ಪ್ರಜ್ಞೆಗಳನ್ನು ಜಾಗೃತಗೊಳಿಸುವ ಆತ್ಮೀಯ ಕೆಲಸ ಜತ್ತಿಯವರದಾಗಿದೆ. ವ್ಯಕ್ತಿಯ ಬದುಕಿನಲ್ಲಿ ಮೌಲ್ಯಗಳನ್ನು ಸ್ಥಾಪಿಸುವುದೇ ಸಂಸ್ಕೃತಿಯೆನಿಸಿದೆ. ಒಟ್ಟಂದದಲ್ಲಿ ಕಥೆಗಾರರ ಹಂಬಲ ಇಲ್ಲಿ ಸ್ಪಷ್ಟವಾಗಿ ಅರಳಿದೆ. ಆದರ್ಶದ ಭಾವನೆಯ ಪರಿಮಳ ಬಯಲನ್ನೆಲ್ಲ ವ್ಯಾಪಿಸಿದೆ ಎಂದು ಹೇಳಿದರೆ ಅತಿಶಯೋಕ್ತಿಯೇನಲ್ಲ.

## ಅಮೂಲ್ಯ ಕಾಣಿಕೆ : ಕಥಾಸಂಕಲನದಲ್ಲಿ ಪಾತ್ರಗಳು

### ಪ್ರೊ. ಮಲ್ಲಿಕಾರ್ಜುನ ಹಿರೇಮಠ

ಜತ್ತಿ ಅವರ 'ಅಮೂಲ್ಯ ಕಾಣಿಕೆ' ಸಂಕಲನದ ಕಥೆಗಳು ನಮ್ಮ ನವೋದಯ ಮತ್ತು ಪ್ರಗತಿಶೀಲ ಮನೋಧರ್ಮದ ಕಥೆಗಳೆನ್ನಬಹುದು. ಲೇಖಕರ ಪರಂಪರಾಗತ ಮೌಲ್ಯಪ್ರಜ್ಞೆ, ಆದರ್ಶಪ್ರಿಯತೆ, ಭಾವುಕತೆಗಳಿಂದಾಗಿ ಇಲ್ಲಿಯ ಪಾತ್ರಗಳು ಪ್ರತಿರೂಪಗಳಾಗಿವೆ. ಶ್ರೀಯುತರ ಪ್ರವಚನಪಟುತ್ವ ಕೂಡ ಪಾತ್ರ ಚಿತ್ರಣದಲ್ಲಿ ಕಾಣಿಸಿಕೊಂಡಿದೆ.

ಇಲ್ಲಿ ಬರುವ ಬಹುತೇಕ ಪಾತ್ರಗಳು ಆದರ್ಶ ಜೀವಿಗಳು. ಆದರ್ಶವನ್ನು, ಮೌಲ್ಯವನ್ನು ಸಾರಬೇಕೆನ್ನುವ ಪುರಾಣ-ಪ್ರವಚನಗಳ ಆಶಯ ಲೇಖಕರ ಪಾತ್ರ ಚಿತ್ರಣದಲ್ಲಿ ಸ್ಫುಟವಾಗಿದೆ. ರೋಚಕವಾಗಿ ಕಥೆಯನ್ನು ನಿರೂಪಿಸುತ್ತ ತಮ್ಮ ಉದ್ದೇಶಕ್ಕೆ ತಕ್ಕಂತೆ ಪಾತ್ರಗಳನ್ನು ನಿರ್ದಿಷ್ಟವಾಗಿ ಬೆಳೆಯಿಸುತ್ತಾರೆ.

ಬಹಳಷ್ಟು ಪಾತ್ರಗಳು ದಯೆ, ದಾನ, ಪ್ರೀತಿ, ಸ್ನೇಹ, ಕೃತಜ್ಞತೆ ಮೊದಲಾದ ಮೌಲ್ಯಗಳಿಗಾಗಿ ಬದುಕುತ್ತಿರುವವರು. ಇವರೆಲ್ಲ ಸದ್ಗುಣಗಳ ಖಣಿಗಳು. ಒಟ್ಟಾರೆ ಲೇಖಕರಿಗೆ ಆದರ್ಶ ಪಾತ್ರಗಳನ್ನು ಸೃಷ್ಟಿಸುವ ಮೂಲಕ ಮೌಲ್ಯಾದರ್ಶಗಳನ್ನು ನೆಲೆಗೊಳಿಸಬೇಕೆಂಬ ಹಂಬಲ ತೀವ್ರವಾಗಿದೆ.

'ಅಮೂಲ್ಯ ಕಾಣಿಕೆ' ಸಂಕಲನದ ಶೀರ್ಷಿಕೆಯ ಕಥೆಯಲ್ಲಿ ದೇಶಕ್ಕಾಗಿ ಮಡಿದ ಗಂಡ, ಸಿದ್ಧರಾಮನ ಪಾದ ಸೇರಿದ ಮಗ. ಇವರಿಗಾಗಿ ದುಃಖಿತಪ್ತಳಾದ ಗಂಗಾ ಒಂದು ತಿಳುವಳಿಕೆಗೆ ಬಂದು ತನ್ನೆಲ್ಲ ಒಡವೆಗಳನ್ನು ರಕ್ಷಣಾನಿಧಿಗೆ ಸಮರ್ಪಿಸುತ್ತಾಳೆ. ಚೀನಾ ಆಕ್ರಮಣದ ಸಮಯದಲ್ಲಿ ದೇಶಾಭಿಮಾನವನ್ನುಂಟುಮಾಡಲು ಬರೆದ ಕಥೆ ಇದು. ತನ್ನ ಗಂಡನನ್ನು, ಇದ್ದ ಒಬ್ಬ ಮಗನನ್ನು ಕಳಕೊಂಡ ಗಂಗಾ ತನ್ನ ಒಡವೆಗಳನ್ನು ರಕ್ಷಣಾನಿಧಿಗಾಗಿ ತ್ಯಾಗ ಮಾಡುವಾಗ ಇಡೀ ಸಭೆಯ ಕಣ್ಣಲ್ಲಿ ನೀರಾಡುವುದನ್ನು, ಸಚಿವರು "ಹೂವಿನಹಾರ ನನಗೆ ಯೋಗ್ಯವಲ್ಲ, ವೀರಮಾತೆ ಗಂಗಾ ತಾಯಿಗೆ ಯೋಗ್ಯವಾದುದು" ಎಂದು ಅರ್ಪಿಸುತ್ತಾರೆ. ಲೇಖಕರಿಗೆ ತಾಯಿಯ ಉದಾತ್ತತೆ, ತ್ಯಾಗವನ್ನು ಸಾಕಾರಗೊಳಿಸಬೇಕಾಗಿದೆ. ಘಟನೆಗಳನ್ನು ಹೊಂದಿಸುವಲ್ಲಿ ಸಹಜತೆ ಇದೆ; ಧಾಟಿಯಲ್ಲಿ ಪ್ರವಚನ ರೀತಿ ಇದೆ. ಸನ್ನಿವೇಶಗಳನ್ನು ನಾಟ್ಯೀಕರಿಸುತ್ತ ಗಂಗಾ ತಾಯಿಯ ನಿಸ್ವಾರ್ಥತೆ ಬಣ್ಣಿಸುತ್ತ ಆಕೆ ಅಪರೂಪದ ವ್ಯಕ್ತಿ ಎಂಬಂತೆ ಚಿತ್ರಿಸಿದ್ದಾರೆ.

'ಸ್ನೇಹ ಸೇತುವೆ' ಕಥೆಯಲ್ಲಿ ಸರೋಜ ತನ್ನ ಗೆಳತಿ ಲಲಿತಳ ಬಾಳು ವರದಕ್ಷಿಣೆಯ ದೆಸೆಯಿಂದಾಗಿ ದುರ್ಭರವಾಗಿರುವಾಗ ಆರ್ಥಿಕ ನೆರವು ನೀಡುವ ಮೂಲಕ ಸೊಗಸುಗೊಳಿಸುತ್ತಾಳೆ.

'ರಕ್ತದಾನ' ಕಥೆಯಲ್ಲಿ ಒಬ್ಬ ಆದರ್ಶ ವೈದ್ಯ ಹಾಗೂ ಆದರ್ಶ ಪತ್ನಿ ಕುಸುಮಾರ ಚಿತ್ರಣವಿದೆ. ಸೋದರ ಸಂಬಂಧಿಯೊಬ್ಬಳು ಹೆರಿಗೆಯಾದ ಪಾರ್ವತಿಗೆ ರಕ್ತ ಕೊಡಬೇಕಾದ ಪ್ರಸಂಗದಿಂದ ನುಣುಚಿಕೊಂಡಾಗ ಡಾಕ್ಟರರ ಪತ್ನಿ ಕುಸುಮಾ ತನ್ನ ರಕ್ತ ಕೊಡುವ ಮೂಲಕ ಆಕೆಗೆ ಜೀವದಾನ ಮಾಡುತ್ತಾಳೆ. ಲೇಖಕರು ಡಾಕ್ಟರ ರಾಜಣ್ಣರನ್ನು ಕುರಿತು ಹೀಗೆ ಹೇಳುತ್ತಾರೆ: "...ಈ ಅನಿಶ್ಚಿತ ಕಾಲದ ಕರೆ ಅವರಿಗೆಂದೂ ಬೇಸರವನ್ನು ತಂದಿರಲಿಲ್ಲ. ಈ ಸಂಯಮ. ಸಮಾಧಾನ ಅವರಿಗೆ ದೈವದತ್ತವಾಗಿ ಬಂದುವುಗಳು. ಬಂದ ರೋಗಿಗಳನ್ನು ಸಂತೈಸಿ. ಪರೀಕ್ಷಿಸಿ. ಔಷಧೋಪಚಾರ ಮಾಡಿ ಮನಸ್ಸುಖಿಗಳಾಗಿಯೇ ಅವರನ್ನು ಬೀಳ್ಕೊಡುತ್ತಿದ್ದರು." ಒಬ್ಬ ಆದರ್ಶ ವೈದ್ಯ ಹೇಗಿರಬೇಕೆಂಬುದರ ಮಾದರಿ ಡಾ. ರಾಜನ್. ಇನ್ನು ಅವರ ಪತ್ನಿ "ಕುಸುಮಾ ತಾಯಿಯವರು ಕುಸುಮದಂತೆ ನಿರ್ಮಲ ಹೃದಯದವರಾಗಿದ್ದರು. ಅಲ್ಲದೆ ಸಜೀವ ಕುಸುಮಗಳೆರಡನ್ನು ನೀಡಿ. ಬಾಳಿನ ಬೃಂದಾವನಕ್ಕೆ ಹೆಚ್ಚಿನ ಶೋಭೆ ತಂದಿದ್ದರು" ಲೇಖಕರು ಬಣ್ಣಿಸುತ್ತಾರೆ. ಲೇಖಕರ ಈ ಮಾತುಗಳು ಅವರ ಶೈಲಿಯ ಬಗ್ಗೆ ಹೇಳುವಂತೆಯೇ ಅವರ ಪಾತ್ರ ಚಿತ್ರಣದ ರೀತಿಯ ಬಗೆಗೂ ಹೇಳುತ್ತವೆ. ಸೂಕ್ಷ್ಮತೆಗಿಂತ ನೇರ. ಸರಳ ವಾಚ್ಯಚಿತ್ರಣಗಳನ್ನು ಕಾಣುತ್ತೇವೆ.

ಗಂಡ ಹೆಂಡತಿಯರಲ್ಲಿರಬಹುದಾದ **Posessive nature** ಬಗ್ಗೆ ವಿನೋದವನ್ನುಂಟುಮಾಡುವ ಕತೆ 'ಸುಶೀಲಾ'. ಹೆಸರಿಗೆ ತಕ್ಕಂತೆ ಇರುವ ಗೃಹಿಣಿ ತನ್ನ ಗಂಡನೊಂದಿಗೆ ಒಂದು ಹೆಣ್ಣು ಇರುವ ಫೋಟೋ ನೋಡಿ. ಮುನಿಸಿಕೊಂಡಿರುವಾಗ ನಾಟಕದಲ್ಲಿ ಹೆಣ್ಣಿನ ಪಾತ್ರಧಾರಿ ವಸಂತ ಎಂದು ತಿಳಿದು ಆಕೆಯ ಸಿಂಡರಿಸಿದ ಮುಖ 'ಅರಳಿ ನಗೆಮಲ್ಲಿಗೆ' ಹೊರಸೂಸುತ್ತದೆ.

'ಬಂಧು ಪ್ರೇಮ' ಕಥೆಯಲ್ಲಿ ತನ್ನ ತಂಗಿ ವಾಸಂತಿಯನ್ನು ಸ್ನೇಹಿತ ಪರಮೇಶನಿಗೆ ಕೊಡುವುದಾಗಿ ಶೇಖರ ಚಾಮುಂಡೇಶ್ವರಿಯ ಮುಂದೆ ಪ್ರತಿಜ್ಞೆ ಕೈಕೊಳ್ಳುತ್ತಾನೆ. ಹೀಗೆ ಕೈಕೊಳ್ಳುವ ಶೇಖರ ತನ್ನ ತಂಗಿಯ ಮಾತಿನ ಒಲವನ್ನು ತಿಳಿದುಕೊಳ್ಳುವ ಗೊಡವೆಗೆ ಹೋಗುವುದಿಲ್ಲ. ಅಲ್ಲದೆ ತಂಗಿ ವಾಸಂತಿಗೆ ಈತ "ನನ್ನ ಮಾತು ನಡೆಸುವಂತಿದ್ದರೆ ಒಪ್ಪು. ನಾನು ಬೇಡವಾಗಿದ್ದರೆ ಬಿಡು" ಎನ್ನುವುದು ದುರದೃಷ್ಟಕರ. ಅಣ್ಣನ ಪ್ರೀತಿಗಾಗಿ ತಂಗಿ ತನ್ನ ಪ್ರೇಮಿ ಅರವಿಂದನನ್ನು ತ್ಯಾಗ ಮಾಡುತ್ತಾಳೆ. ಲೇಖಕರು ತಂಗಿಯ ಈ ತ್ಯಾಗಬುದ್ಧಿಯನ್ನು ಕೊಂಡಾಡುತ್ತಾರೆ.

ಇಲ್ಲಿ ಲೇಖಕರ ಪರಂಪರಾಗತ ನಿಲುವು ಸ್ಪಷ್ಟವಾಗುತ್ತದೆ. ಗಂಡು ಹೆಣ್ಣಿನ ಒಲವು ಪ್ರೀತಿಗಳಿಗಿಂತ ಬಂಧು ಪ್ರೇಮ ದೊಡ್ಡದು ಎಂದು ಲೇಖಕರು ಈ ಪಾತ್ರಚಿತ್ರಣ ಮುಖೇನ ಹೇಳಬೇಕಾಗಿದೆ.

'ಕೃತಜ್ಞತೆ'ಯಲ್ಲಿ ವೀರಣ್ಣ ಮತ್ತು ಲೀಲಾ ತಾಯಿ ಆದರ್ಶ ದಂಪತಿಗಳು. ಬಡ ಹುಡುಗ ಮಹಾಂತನಿಗೆ ಮನೆಯಲ್ಲಿ ಊಟದ ವ್ಯವಸ್ಥೆ ಮಾಡುವ ಮೂಲಕ ಅವನ ಶಿಕ್ಷಣಕ್ಕೆ ನೆರವಾಗುತ್ತಾರೆ. ತಾಯಿಯನ್ನು ಕಳೆದುಕೊಂಡ ಹುಡುಗನಿಗೆ ಮಾತೃತ್ವ ವನ್ನು ನೀಡುತ್ತಾರೆ ಲೀಲಾ ತಾಯಿ. ಈ ಶ್ರೀಮಂತ ದಂಪತಿಗಳು ವ್ಯವಹಾರದಲ್ಲಿ ಸೋತು ಕಡುಬಡವರಾದ ಪ್ರಸಂಗದಲ್ಲಿ ಮಹಾಂತಣ್ಣ ಪೋಲೀಸ ಇನಸ್ಪೆಕ್ಟರನಾಗಿ ರುತ್ತಾನೆ. ಆತ ಬಂದು ಇವರನ್ನು ತನ್ನ ಮನೆಗೆ ಕರೆದೊಯ್ಯುತ್ತಾನೆ. "ಇಂದು ಇನಸ್ಪೆಕ್ಟರ ಮಹಾಂತಣ್ಣನವರ ಮನೆಯ ತೂಗು ಮಂಚದ ಮೇಲೆ ವೀರಣ್ಣ-ಲೀಲಾ ತಾಯಿಯವರು ಸೌಖ್ಯವಾಗಿದ್ದಾರೆ. ಮಹಾಂತಣ್ಣನ ಕೃತಜ್ಞತೆಯ ಬೆಳಕಿನಲ್ಲಿ ಅವರು ಪುನರ್ಜನ್ಮ ಪಡೆದಿದ್ದಾರೆ."

ಆದರ್ಶ. ತ್ಯಾಗ ಜೀವಿಗಳೇ ಇಲ್ಲಿಯ ಕಥೆಗಳಲ್ಲಿದ್ದರೂ 'ದಯವಿಲ್ಲದ ದಯಾಳು' ಕತೆಯಲ್ಲಿ ದಾನಶೇಟಪುರದ ಶೇಠ ರಾಮದಯಾಳ ಎಂಬ ಒಬ್ಬ ಕಾಮಿ ಹಾಗೂ ನಿರ್ದಯಿ ವ್ಯಕ್ತಿಯ ಚಿತ್ರಣವಿದೆ. ಇವನ ಕಾಮಪಿಪಾಸೆಗೆ ಬಲಿಯಾಗ ಬಹುದಾಗಿದ್ದ ನಿರಾಶ್ರಿತ ಹೆಣ್ಣು ದಾಪಣ್ಣನಂಥ ಸಾತ್ವಿಕನಿಗೆ ಆಶ್ರಯವಾಗಿ ನಿಲ್ಲುತ್ತಾಳೆ.

'ಆತ್ಮಾಹುತಿ' ಕೌಟುಂಬಿಕ ದುರಂತದ ಕಥೆ. ಗಂಡನ ಮನೆಯ ಕೀಟಲೆ ಕಾಟಗಳಿಗೆ ಬೇಸತ್ತು ತಮ್ಮನ ಮನೆಯಲ್ಲಿ ಕೆಲವು ದಿನ ಇದ್ದು, ಪುನಃ ಗಂಡನ ಮನೆಗೆ ಹೋದಾಗ ಪ್ರವೇಶ ಸಿಗದ್ದರ ಬಗ್ಗೆ ನೊಂದುಕೊಂಡ ಕಾಸಪ್ಪ ಆತ್ಮಾಹುತಿ ಮಾಡಿ ಕೊಳ್ಳುತ್ತಾಳೆ. ಗಂಡ ರೇವಣಪ್ಪನಿಗೆ ಹಣವೇ ಪ್ರಾಧಾನ್ಯವಾಗಿ ಸಾಂಸಾರಿಕ ಸೊಗಸನ್ನೇ ತಿಳಿಯದವನು. ಕಾಸಪ್ಪನ ಸೋದರ ಶಂಕ್ರಪ್ಪ ಅಪಾರ ಸೋದರ ಪ್ರೇಮವನ್ನು ತೋರುವಾತ.

'ದೀಪಾವಳಿ' ಒಂದು ಪ್ರಗತಿಪರ ಆಶಯದ ಕಥೆ. ಸಾಂಪ್ರದಾಯಿಕ ಮೌಲ್ಯ ಗಳ ಪರ ಇದ್ದ ಲೇಖಕರು ವಿಧವೆ-ವಿಧುರರ ಪುನರ್ವಿವಾಹವನ್ನೂ ಇಲ್ಲಿ ಪುರಸ್ಕರಿಸು ತ್ತಾರೆಂಬುದನ್ನು ಗಮನಿಸಬೇಕು. ರವೀಂದ್ರ ಮತ್ತು ಶಾಮಲ ಪುನರ್ವಿವಾಹಿತ ರಾಗುತ್ತಾರೆ. ಶಾಮಲಳ ಬದುಕಿನ ದುರಂತದಿಂದ ನೊಂದುಕೊಂಡ ರವೀಂದ್ರ ಶಾಮಲಳ ಬದುಕಿನಲ್ಲಿ ಉಲ್ಲಾಸ ತರಬೇಕೆಂದು ನಿರ್ಧರಿಸಿ ಈ ವಿವಾಹಕ್ಕೆ ಮುಂದಾಗು ತ್ತಾನೆ. ಕಥೆ ಹೀಗೆ ಮುಕ್ತಾಯ ಆಗುತ್ತದೆ. "ಈ ಲಗ್ನಕ್ಕೆ ಸಂಪ್ರದಾಯಸ್ಥರೆಲ್ಲರೂ

ಮೂಗು ಮುರಿದು ಬಂದಿರಲಿಲ್ಲವಾದರೂ ನವನಾಗರಿಕತೆಯ ಹೊಸ ಪೀಳಿಗೆಯ ತರುಣ–ತರುಣಿಯರಿಂದ ಲಗ್ನ ಮಂಟಪ ತುಂಬಿ ನಿಂತಿತ್ತು.”

ಅವಳಿ ಜವಳಿ ಸೋದರಿಯರಿಂದ ಉಂಟಾಗುವ ತಪ್ಪು ಕಲ್ಪನೆ ನಿವಾರಣೆ ಆಗುತ್ತ ವಿನೋದ ಉಂಟುಮಾಡುವ ಕಥೆ 'ಮೋಡ ಚೆದುರಿ ಬಾನು ಬೆಳಗಿತು.'

ಈ ಪಾತ್ರಗಳು ಬದುಕಿನ ನಿರೀಕ್ಷಣೆಯಿಂದಲೇ ಸೃಷ್ಟಿಯಾಗಿದ್ದರೂ ಮೌಲ್ಯಾದರ್ಶಗಳನ್ನು ಪ್ರತಿನಿಧಿಸುವುದಕ್ಕಾಗಿ ನಿರ್ಮಿತವಾದವುಗಳು. ಲೇಖಕರ ಸರಳ ದೃಷ್ಟಿ ಧೋರಣೆಗಳಿಂದಾಗಿ ನಿರ್ದಿಷ್ಟವಾಗಿ ವರ್ಗೀಕರಿಸಲ್ಪಟ್ಟ ಕಪ್ಪು-ಬಿಳುಪಿನ ಪಾತ್ರಗಳು ಇಲ್ಲಿವೆ.

# ಬಸವತತ್ತ್ವ ದರ್ಶನ : ಒಂದು ಅವಲೋಕನ

**ಕು. ರಾ. ನಾ.**

ಹುಟ್ಟಿನಿಂದ ಯಾರೂ ಶ್ರೇಷ್ಠತೆಯನ್ನು ಕಟ್ಟಿಕೊಂಡು ಹುಟ್ಟುವದಿಲ್ಲ. ಆತ ಬಾಳಿ ಬದುಕಿದ ರೀತಿ-ನೀತಿಗಳಲ್ಲಿ ಅವನ ಶ್ರೇಷ್ಠತೆ ಗೌರವಾದರಗಳು ನಿರ್ಧರಿಸಲ್ಪಡುತ್ತವೆ. ಇದು ಬದುಕಿನ ಮೂಲ ಸತ್ಯವಾದರೆ ಸಮಾಜದಲ್ಲಿದ್ದ ಶಕ್ತಿವಂತವನಾದವನು ಶ್ರೇಷ್ಠತೆಯನ್ನೆಲ್ಲ ತನ್ನ ಕದಂಬ ಬಾಹುಗಳಲ್ಲಿ ಕಬಳಿಸಿಕೊಂಡು ಶ್ರೇಷ್ಠತೆಯೆನ್ನುವದು ಕೇವಲ ತನಗಾಗಿಯೇ ಸೃಷ್ಟಿಯಾಗಿದೆ ಏನೋ ಎನ್ನುವಂತೆ ಮೆರೆಯುತ್ತಾನೆ. ಆಗ ಅಶಕ್ತರ ನಡುವೆ ಶಕ್ತರ ದಬ್ಬಾಳಿಕೆಯು ನಡೆದುಹೋಗುತ್ತದೆ. ಶಕ್ತರಲ್ಲಿಯೋ ಅಥವಾ ಅಶಕ್ತರಲ್ಲಿಯೋ ಒಬ್ಬ ಪ್ರಜ್ಞಾವಂತ ಮುಂದೆ ಬಂದು "ಇದನ್ನು ನೀವು ಮಾಡುವದು ತಪ್ಪು, ಅಪರಾಧ" ಎಂದು ಹೇಳತೊಡಗಿದರೆ ಅಲ್ಲಿ ಕ್ರಾಂತಿ ಎಂಬುದು ಹುಟ್ಟಿಕೊಳ್ಳುತ್ತದೆ. ಸುಂದರ ಬದುಕಿನ ಆದರ್ಶದ ಕನಸುಗಳನ್ನು ಕಂಡು ಸಮಾಜಕ್ಕೆ ತಿಳಿಹೇಳಿ ಅವರನ್ನು ತಿದ್ದಿದ ಅನೇಕ ಮಹನೀಯರಲ್ಲಿ "ಕ್ರಾಂತಿಯೋಗಿ" ಬಸವಣ್ಣನೂ ಒಬ್ಬ.

ಹನ್ನೆರಡನೆಯ ಶತಮಾನದಲ್ಲಿ ಕನ್ನಡ ನಾಡಿನಲ್ಲಿ ಮಹಾಕ್ರಾಂತಿಯುಂಟಾಯಿತು. ಇದು ರಾಜಕೀಯ, ಧಾರ್ಮಿಕ, ಸಾಮಾಜಿಕ ಹಾಗೂ ಸಾಹಿತ್ಯಕ ಮುಖವಾಗಿ ಟಿಸಿಲೊಡೆಯಿತು. ಈ ಕ್ರಾಂತಿಯ ನೇತಾರ ಬಸವಣ್ಣ. ಆತನ ಹಿಂದಿನ ಅನೇಕ ಶಿವ-ಶರಣರು ತಾವು ಕಂಡುಕೊಂಡ ಆದರ್ಶದ ಬದುಕಿನ ಕಲ್ಪನೆ ಹೇಗಿರಬೇಕೆಂದು ಹಗಲಿರುಳೂ ಚಿಂತಿಸಿದರು. ಮಂಥಿಸಿದರು. ತಾವು ಅಂದುಕೊಂಡಂತೆ ನಡೆದು ತೋರಿಸಿದರು. ಕನ್ನಡದ ಮಹಾಕಾವ್ಯ ತನ್ನ ಪರಂಪರೆಯನ್ನು ಬಿಡಿಸಿಕೊಂಡು ಪ್ರಪ್ರಥಮವಾಗಿ ಜನಸಾಮಾನ್ಯನ ಬಾಗಿಲಿಗೆ ಬಂದಿತು. ಆಗ ಜನಸಾಮಾನ್ಯನೂ ಕೂಡಾ ಸಮಾಜದಲ್ಲಿ ತನ್ನ ಪಾಪ, ಧರ್ಮ, ಅರ್ಥ, ಕಾಮ, ಮೋಕ್ಷಗಳ ಬಗ್ಗೆ ಚಿಂತಿಸತೊಡಗಿದ. ಈ ಕೆಲಸವನ್ನು ಮೊಟ್ಟಮೊದಲು ವಚನಕಾರರೇ ಮಾಡಿದರು.

ಈ ವಚನ ಸಾಹಿತ್ಯದ ಕುರಿತಾಗಿ ಚರ್ಚೆ, ಟೀಕೆ, ಟಿಪ್ಪಣೆ, ವಿಚಾರ ಸಂಕಿರಣಗಳು ಅವ್ಯಾಹತವಾಗಿ ನಡೆದುಕೊಂಡೇ ಬಂದಿವೆ. ಆ ನಿಟ್ಟಿನಲ್ಲಿ ಶ್ರೀ ದಾನಪ್ಪ ಜತ್ತಿಯವರು ಸಂಪಾದಿಸಿದ "ಬಸವ ತತ್ತ್ವ ದರ್ಶನ" ಕೃತಿಯೂ ಕೂಡಾ ಗಮನಾರ್ಹವಾಗಿದೆ. ಶ್ರೀ ದಾನಪ್ಪ ಜತ್ತಿ ಒಳ್ಳೆ ವಾಗ್ಮಿಗಳು, ಪ್ರವಚನಕಾರ, ಪುರಾಣಿಕಾರರೂ ಹೌದು. ಈ ಸಂದರ್ಭದಲ್ಲಿ ಅವರ ಅಭಿಮಾನಿಗಳನ್ನು ಶ್ರೀ ಜತ್ತಿ ಅವರನ್ನು ಅಭಿನಂದಿಸುತ್ತಿರುವದು ಉಚಿತವಾಗಿಯೇ ಇದೆ. ವೀರಶೈವ ತತ್ತ್ವಗಳ ಒಳ-ಹೊರಗುಗಳನ್ನು ತಿಳಿದುಕೊಂಡ ಶ್ರೀ ಜತ್ತಿ ಅವರು ಈ ಕೃತಿಯ ಸಂಪಾದನೆ

ಯಲ್ಲಿ ವಿಶೇಷ ಮುತುವರ್ಜಿಯನ್ನು ತಾಳಿ ಬಸವಣ್ಣನವರ ಬದುಕು, ಸಂದೇಶ, ವಿಡಂಬನೆ, ಅನುಭಾವ ಮುಂತಾಗಿ ಹನ್ನೆರಡು ಪ್ರಬಂಧಗಳನ್ನು ತುಂಬ ಸ್ವಾರಸ್ಯಕರವಾಗಿ ಸಂಗ್ರಹಿಸಿದ್ದಾರೆ.

"ಭಗವಾನ ಬಸವಣ್ಣನವರು ಜಗದ್ವಂದ್ಯರು, ಅದ್ವಿತೀಯರು. ಇವರೇ ದ್ವಿತೀಯ ಶಂಭು" ಈ ಮೊದಲಾದ ಹೇಳಿಕೆಗಳನ್ನು ಶ್ರೀ ಮ.ನಿ.ಪ್ರ. ಸಂಗನಬಸವ ಮಹಾಶಿವಯೋಗಿಗಳು ವಿಚಾರಪೂರ್ಣವಾಗಿ ತರ್ಕಿಸಿದ್ದಾರೆ.

'ಅನು ತುಂಬಿ' ಈ ಸಂಗ್ರಹದಲ್ಲಿ ಮತ್ತೊಂದು ವಿಶಿಷ್ಟ ಲೇಖನ.

"ವಚನದಲ್ಲಿ ನಿಮ್ಮ ನಾಮಾಮೃತ ತುಂಬಿ
ನಯನದಲ್ಲಿ ನಿಮ್ಮ ಮೂರುತಿ ತುಂಬಿ
ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ
ಮನದಲ್ಲಿ ನಿಮ್ಮ ನೆನಹು ತುಂಬಿ"

ಬಸವಣ್ಣನವರ ವಚನವೇ ಇಷ್ಟು ಮನೋಹರವಾಗಿದೆ. ಕಣ್ಣು. ಕಿವಿ, ನಡೆ–ನುಡಿ, ಮನ ಎಲ್ಲವನ್ನು ಶಿವನೇ ತುಂಬಿದ ಬಳಿಕ ಮುಂದೆ ಉಳಿಯುವದೇನು ! ಎಲ್ಲವೂ ಶಿವಮಯ. ಆಗ ಶಿವ–ಭಕ್ತರ ನಡುವೆ ಭೇದ–ಭಾವವೇ ಉಳಿಯುವದಿಲ್ಲ. ಆಗ ಭಕ್ತ 'ಅಹಂ ಬ್ರಹ್ಮಾಸ್ಮಿ'ಯಾಗುತ್ತಾನೆ.

'ಅನು ಎಂದರೆ ಸಂಸಾರದ ಪ್ರವೃತ್ತಿಗೆ ಕಾರಣವಾದದ್ದು'. ನಾನು – ನನ್ನದೆಂಬುದೆಲ್ಲವನ್ನು ಕೂಡಲ ಸಂಗಮನ ಚರಣ ಕಮಲಗಳಲ್ಲಿ ತುಂಬಿದ ಮೇಲಲ್ಲವೇ "ಕಣ್ಣು ತುಂಬಿದ ಬಳಿಕ ನೋಡಲಿಲ್ಲ, ಕೈ ತುಂಬಿದ ಬಳಿಕ ಪೂಜಿಸಲಿಲ್ಲ, ಮನ ತುಂಬಿದ ಬಳಿಕ ನೆನೆಯಲಿಲ್ಲ". ಇಲ್ಲಿ ಶಿವನ ಚರಣ ಕಮಲಗಳಿಗೆ ಮುತ್ತಿಕ್ಕುವ 'ತುಂಬಿ' ಅಂದರೆ ದುಂಬಿಗಳು' ಎಂಬ ಶ್ಲೇಷಾರ್ಥವನ್ನು ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳು ಮನಮುಟ್ಟುವಂತೆ ವಿವರಿಸಿದ್ದಾರೆ.

ಅನುಭಾವಿ ಬಸವಣ್ಣ 'ಸಮಾಜ ಸುಧಾರಕನಾಗಿ', 'ಬದುಕಿನ ರೂವಾರಿಯಾಗಿ' ಮಾಡಿದ ಕೆಲಸ ದಲಿತೋದ್ಧಾರ; ಇದು ಮುಖ್ಯವಾದುದು. ಇದು ಒಂದೇ ಮುಖದಿಂದ ಅಲ್ಲ, ಹಲವಾರು ಮುಖಗಳಿಂದ. ಅದಕ್ಕಾಗಿ 'ಬಸವ ಸಂದೇಶ'ದಲ್ಲಿ,

"ಮರ್ತ್ಯ ಕೈಲಾಸ ಬೇರಿಲ್ಲ ಇಲ್ಲಿ ಸಲ್ಲುವವರು
ಅಲ್ಲಿಯೂ ಸಲ್ಲುವರು"
"ಸತ್ಯವೇ ನಾಕ ಅಸತ್ಯವೇ ನರಕ"
"ದಯವಿಲ್ಲದ ಧರ್ಮ ಯಾವುದಯ್ಯ"
"ಕಳಬೇಡ ಕೊಲಬೇಡ ಹುಸಿಯ ನುಡಿಯಲುಬೇಡ"

"ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ"

"ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ"

ಹೀಗೆ ಅನೇಕಾನೇಕ ಬಸವಣ್ಣನವರ ಸಂದೇಶಗಳನ್ನು ವಿವಿಧ ಲೇಖಕರು ಚರ್ಚಿಸಿದ್ದಾರೆ.

ಸಮಾಜ – ಸಮಾಜದಲ್ಲಿಯ ಡಂಭಾಚಾರಗಳು, ಮೂಢ ನಂಬಿಕೆಗಳು ಇವು ಬದುಕಿನ ಸ್ವಾಸ್ಥ್ಯವನ್ನು ಕೆಡಿಸುವ ಹಾಗಿದ್ದರೆ, ಇನ್ನೊಬ್ಬರು ಆ ದೋಷಗಳನ್ನು ತಿದ್ದಿ ಹೇಳಲೇಬೇಕು. ಆಗಲೂ ಕೂಡಾ ತನ್ನ ದೋಷಗಳನ್ನು ಮರೆಮಾಚಬಾರದು. ಬಸವಣ್ಣನವರ ವಚನಗಳಲ್ಲಿ ಇಂಥ ವಿಡಂಬನೆಯನ್ನು ನಾವು ಸಾಮಾನ್ಯವಾಗಿ ಕಾಣುತ್ತೇವೆ. ಅದಕ್ಕಾಗಿಯೇ ಇಲ್ಲಿಯ ಲೇಖಕರು ಬಸವಣ್ಣನನ್ನು 'ಸಮಾಜ ಸುಧಾರಕನಾಗಿ', 'ಮಾತೃ ಭಾಷೆಯ ಪುರಸ್ಕರ್ತನಾಗಿ', 'ಬದುಕಿನ ರೂವಾರಿಯಾಗಿ' ನೋಡಿದ್ದಾರೆ.

ರೂಪಕ, ದೃಷ್ಟಾಂತ, ಉಪಮೆಗಳು ಬಸವಣ್ಣನವರ ವಚನಗಳಲ್ಲಿ ಹಾಸು ಹೊಕ್ಕಾಗಿವೆ. ಅಲ್ಲದೇ ಅವೆಲ್ಲ ನಮ್ಮ ನಿತ್ಯ ಜೀವನದಿಂದ ಆರಿಸಿಕೊಂಡಂಥ ಸಂಗತಿಗಳೇ ಆಗಿವೆ. ಗುರು–ಶಿಷ್ಯರು, ಆನೆ, ಕುದುರೆ, ಬಾಳೆ ಮುಂತಾಗಿ ಅನೇಕ ರೀತಿಯಲ್ಲಿವೆ.

"ಉಳ್ಳವರು ಶಿವಾಲಯ ಮಾಡುವರಯ್ಯ
ನಾನೇನು ಮಾಡಲಿ ಬಡವನಯ್ಯ"

"ಸಂಸಾರವೆಂಬುದು ಗಾಳಿಯ ಸೊಡರು"

"ಕಲ್ಲ ನಾಗರ ಕಂಡರೆ ಹಾಲನೆರೆಯೆಂಬರಯ್ಯ"

"ಕದಳಿ ಎಂಬುದು ತನು ಕದಳಿ ಎಂಬುದು ಮನ ಕದಳಿ ಎಂಬುದು ಘೋರ ವಿಷಯಂಗಳು" ಎಂದು ಅಕ್ಕನ ವಚನಗಳಲ್ಲಿ ಕಂಡುಬಂದರೆ, ಬಸವಣ್ಣನವರು ತಮ್ಮ ವಚನಗಳಲ್ಲಿ 'ಬಾಳೆ' ಎಂಬ ಪ್ರಯೋಗವನ್ನು ಯಾವಾಗಲೂ ಬಾಗಿಕೊಂಡು ನಿಂತ ಬಾಳೆಗೊನೆಯನ್ನು ಭಕ್ತನಿಗ ಹೋಲಿಸಿದ್ದಾರೆ.

"ಬೀಗಿ ಬೆಳೆದ ಗೊನೆವಾಳೆಯಂತೆ
ಬಾಗಿಕೊಂಡಿದ್ದಡೆ
ಬೇಡಿದ ಪದವಿಯನೀವ ಕೂಡಲ ಸಂಗಮದೇವ"

ಇಲ್ಲಿ ವಿಷಯ ವಿವೇಚನೆ ಚೆನ್ನಾಗಿ ಮೂಡಿಬಂದಿದೆ.

ಇನ್ನು 'ಕೂಡಲ ಸಂಗಮ ರಹಸ್ಯ'ವನ್ನು ಕುರಿತು ಈಶ್ವರಚಂದ್ರ ಚಿಂತಾಮಣಿ ಅವರು ಬರೆದಿದ್ದಾರೆ. 'ಕೂಡಲ' ಮತ್ತು 'ಸಂಗಮ' ಈ ಪದಗಳಿಗೆ 'ಬೆರೆಯುವಿಕೆ',

'ಒಂದುಗೂಡುವಿಕೆ' ಎಂದು ವಿವರಿಸುತ್ತ ಅಂಗಾಂಗ ಸಾಮರಸ್ಯದ ಬಗೆಯನ್ನು ಅರ್ಥಪೂರ್ಣವಾಗಿ ವಿವರಿಸಿದ್ದಾರೆ.

'ಬಸವತತ್ತ್ವ ದರ್ಶನದಲ್ಲಿ' ಶ್ರೀ ಜತ್ತಿಯವರು ಬಸವನ ಸಂದೇಶವನ್ನೆಲ್ಲ ಬಿಚ್ಚಿ ಬಿಚ್ಚಿ ಬಿಡಿಸಿ ನೋಡಿದ್ದಾರೆ. ಅವರ ಹಲವಾರು ವಚನಗಳನ್ನು ಉದಾಹರಣೆ ನೀಡಿದ್ದಾರೆ.

ಒಂದು ಕೃತಿ. ಅದು ಸ್ವತಂತ್ರ ಕೃತಿಯೇ ಆಗಿರಲಿ ಅಥವಾ ಸಂಪಾದನೆಯೇ ಆಗಿರಲಿ, ಅದಕ್ಕೆ ತನ್ನದೇ ಆದ ಪರಿಶ್ರಮವಿದೆ. ಸಂಪಾದನೆ ಇದ್ದರಂತೂ ಅಲ್ಲಿ ಸಂಪಾದಕನ ಜವಾಬ್ದಾರಿ ಇನ್ನೂ ಹೆಚ್ಚಾಗಿರುತ್ತದೆ. ಈ ದೃಷ್ಟಿಯಿಂದ ನಮ್ಮ ಕನ್ನಡದ ಓದುಗರಿಗೆ ಶ್ರೀ ಜತ್ತಿಯವರು ಒಳ್ಳೆಯ ಕೃತಿಗಳನ್ನು ನೀಡಿದ್ದಾರೆ. ಇದೊಂದು ಸ್ವಾಗತಾರ್ಹ ಕೃತಿಯಾಗಿದೆ.

# ಭಾವಸೌರಭ : ಒಂದು ಅವಲೋಕನ

## ಸುಭಾಸ ಸಂ. ಪೋರೆ (ಸು.ಸಂ.ಪೋ)

ನವೋದಯದ ಆದರ್ಶಗಳು ಗಾಳಿಯಲ್ಲಿ ಇನ್ನೂ ಲೀಲಾಜಾಲವಾಗಿ ವಿಹರಿಸುತ್ತಿರುವಂತೆಯೇ ತುಸು ತಟಸ್ಥವಾಗುತ್ತ ಒಂದು ನವ್ಯದ ಸೆಳಕು ಬೀಸುತ್ತಿದ್ದಾಗ ಜತ್ತಿಯವರ 'ಭಾವಸೌರಭ' ಗರಿ ಕಾಯಿಸಿಕೊಂಡು ನವೋದಯದ ದಿಗಂತವನ್ನು ಕಾತರದಿಂದ ಅಪ್ಪಹೊರಟ ಒಂದು ಶುದ್ಧ ಪ್ರಯತ್ನ. ಭಾವದ ದಟ್ಟಿಲೆ ಪ್ರೀತಿಯ ಅನುಸಂಧಾನ ಮೌಲ್ಯಗಳ ಕನಸುಗಾರಿಕೆ ಆದರ್ಶದ ಶಕ್ತ ಅನುಭವಗಳಿಗೆ ತುಡಿಯುವ ಗುಣಗಳಿಂದ ನವೋದಯ ನನ್ನಂತಹವರಿಗೆ ಇನ್ನೂ ಆಕರ್ಷಣೆಯಾಗುತ್ತದೆ: ಬದುಕನ್ನು ಕೇವಲ ವ್ಯಂಗ್ಯದಿಂದ ವೈಚಾರಿಕ ವ್ಯಂಜನದಿಂದ ತುಂಬಿಕೊಳ್ಳಲಾಗದು. ಅದರ ಹದಕ್ಕೆ ಜೀವನ ಪ್ರೀತಿಯನ್ನು ಇಲ್ಲದಿದ್ದರೂ ಹುಡುಕುವ ಪ್ರಯತ್ನಗಳು ಮನುಷ್ಯನ ಸತತ ಅನ್ವೇಷಣವಾಗುವದರಿಂದ ತುಸು ನೆಮ್ಮದಿಯನ್ನು ಇದರಿಂದ ತಂದುಕೊಳ್ಳಬಹುದು. ಹೀಗೆ ಶ್ರೀ ದಾನಪ್ಪ ಜತ್ತಿಯವರ ಭಾವಸೌರಭದಲ್ಲಿ ನನಗೆ ಆಕರ್ಷಣೆ ಸಹಜವಾಗಿ ತೋರುತ್ತದೆ.

'ಭಾವಸೌರಭ' ಮೂವತ್ತೊಂದು ಕವಿತೆಗಳ ಒಂದು ಸಂಕಲನ. ಇಲ್ಲಿನ ಕವಿತೆಗಳ ಉದ್ದಕ್ಕೂ ಕವಿಯಲ್ಲಿ ತುಡಿಯುತ್ತಿರುವ ಕೆಲವೊಂದು ವೇದನೆಗಳು ಸಾಹಿತ್ಯದ ಕವಚತೊಟ್ಟು ಸಹೃದಯನೊಂದಿಗೆ ಸಂವೇದನೆಗೆಡೆಮಾಡಿಕೊಡುತ್ತವೆ. ಸಂಕಲನದಲ್ಲಿನ ಒಟ್ಟು ಭಾವಾಶಯಗಳು ಪ್ರಕೃತಿಯನ್ನೇ ಅರಸುವ, ಶುದ್ಧ ಪ್ರೇಮ ತತ್ತ್ವ, ಉಪಾಸನಾ ಕ್ರಮದ Metaphysical ಅಂಶಗಳಲ್ಲಿ ಸಮ್ಮಿಳನಗೊಂಡಿವೆ. ಪ್ರಭಾವಗಳನ್ನು ತುಸು ಪರಿಶೀಲಿಸಿದರೆ ಕ್ರಾಂತಿಯ, ವೈಚಾರಿಕ ಅಂಶಗಳಿಗೆಲ್ಲ ವಚನ ಸಾಹಿತ್ಯದ ಪರಿಸರ ಜತ್ತಿಯವರಲ್ಲಿ ಪ್ರೇರಣೆ ಮಾಡಿದೆ.

ವೈಯಕ್ತಿಕತೆಗೂ – ಕಾವ್ಯಕ್ಕೂ ಒಂದು ಸಹಜವಾದ ಹೊಂದಾಣಿಕೆಯೂ ಸಮಾಜವನ್ನು ಕಾಣುವ ತವಕಿಸುವವರತ್ತ ಮುಂದಾಗುತ್ತದೆ. ಪ್ರತಿ ವ್ಯಕ್ತಿಗೂ ಕಾಣ್ಕೆ ಇದ್ದರೆ ಕವಿಗೆ ಈ ಕಾಣ್ಕೆಯು ಮುಂದುವರಿದು ಕಟ್ಟುವಿಕೆಯಲ್ಲಿ ಪರಿವರ್ತನವಾಗಿಸುವವರತ್ತ ಆತ್ಮೀಯವಾದ ಒಂದು ಹೊಣೆಗಾರಿಕೆ ಇರುತ್ತದೆ. ಇದನ್ನೇ "On Reading Poetry" ಯಲ್ಲಿ Aubrey de Selincourt–

"............Poets are like the rest of us, but they love things more than we do, and there fore know them better and opproach more nearly to the heart of their mystery" ಎಂದು ಹೇಳುವುದು. ನಮ್ಮ ಸುತ್ತಣ ಆಗು–ಹೋಗುಗಳಿಗೆ ನಮ್ಮಂತೇ ಸ್ಪಂದಿಸುವ,

ಹೆಚ್ಚಾಗಿ ಅವನ್ನು ತನ್ನ ವೈಯುಕ್ತಿಕವೆಂದು ಪರಿಭಾವಿಸಿ ಒಂದು ಆತ್ಮಿಕ ಸಂವಾದಕ್ಕೆ. ಸಂವೇದನೆಗಳಿಗೆ ತನ್ನನ್ನು ಒಳಪಡಿಸಿಕೊಂಡು ಅದಕ್ಕೊಂದು ಕಾವ್ಯದ ಆವರಣವನ್ನು ನಿರ್ಮಿಸಿ. ವೈಯುಕ್ತಿಕತೆಯ ವಿಮರ್ಶೆಯನ್ನು ಆರೋಪಿಸಿ. ಸಹೃದಯರ ಒಲವಿಗೆ ತೆರವಿಕ್ಕುತ್ತಾನೆ. ಹೀಗೆ ಆವಿರ್ಭಸುವ ಕಾವ್ಯ ಜೀವನ ಪ್ರೀತಿಯಿಂದ ಕೂಡಿಕೊಂಡು ಕವಿಯ ವೈಯುಕ್ತಿಕತೆಯೇ ಸಹೃದಯನ. ಸಮಾಜದ ಹೃದಯಗಳಿಗೆ ಕಿವಿಗೊಂಡು ದಾಂಗುಡಿಯಿಡುತ್ತದೆ.

ಹೀಗೆ ಕವಿ ಮತ್ತು ಕಾವ್ಯದ ಅನ್ಯೋನ್ಯತೆಗಳಿಂದ ಸಹೃದಯ ಅನ್ಯವೆನಿಸುವ ಭಾವಗಳನ್ನು ತುಂಬಿಕೊಳ್ಳುತ್ತಾನೆ. ತನ್ನ ವೈಯುಕ್ತಿಕತೆಗಳಿಗೂ ಅವುಗಳು ಸಾಮೀಪ್ಯ ಹೊಂದಿರುವುದರಿಂದ ಅವು ತನ್ನವೆಂದೇ ಅನುಭವಿಸಿಕೊಳ್ಳುತ್ತಾನೆ. ಒಟ್ಟಿನಲ್ಲಿ ಕಾವ್ಯ **Subjective** ಆಗಿರಲಿ **Objective** ಆಗಿರಲಿ ಅದು ಸಹೃದಯನ ಎದೆಯಲ್ಲಿ ಸಲುಗೆಯೊಂದಿಗೆ ಇಂಬು ಪಡೆಯುವುದಕ್ಕೆ ಕಾರಣವಾಗುತ್ತದೆ.

ಜತ್ತಿಯವರ ಬಹಳಷ್ಟು ಕವಿತೆಗಳ ಚಿಂತನೆ ಇರುವುದು ಅರಸುವಿಕೆಯಲ್ಲಿ. 'ದೇವ ನೀನೆಲ್ಲಿ ?' ಎನ್ನುವ ಅವರ ಕವಿತೆ ಮಾನವ ಪರಿಸರದ ಬಾಹ್ಯದ ಆವರಣಗಳನ್ನು ಸೂಕ್ಷ್ಮವಾಗಿ ಪ್ರಶ್ನಿಸುತ್ತದೆ.

"ನಿನಗಾಗಿ ಗುಡಿ ಗೋಪುರಗಳೆಷ್ಟು ? ಚರ್ಚ ಮಸಜಿದಗಳೆಷ್ಟು ?
ಪಗಡಿ ಪಲ್ಲಕ್ಕಿಗಳು ಛತ್ರ ಚಾಮರಗಳು
ಜಾತ್ರೆ ಉರುಸುಗಳು ಪ್ರಾರ್ಥನೆ ನಮಾಜಗಳು"

ಒಂದೇ ಎರಡೇ–

"ಶಾಸ್ತ್ರ ಸಂಕೀರ್ತನಗಳು ಪುರಾಣ ಹರಿ ಕಥೆಗಳು
ಭಜನೆ ಭಕ್ತಿಗೀತೆಗಳು ದಿಂಡೆ ತಂಡಗಳು
ಗೃವರದೂ ಜನಸ್ತೋಮ ನೂರೊಂದು ವಿಧಭಕ್ತಿ
ಆದರೂ ನೀನವರಿಗೆ ನಿಲುಕಿಲ್ಲವಂತೆ"

ಹೀಗೆ ಆಧ್ಯಾತ್ಮಿಕ ಹುಡುಕಾಟದಲ್ಲಿನ ಶುದ್ಧ ಮನಸ್ಸು ಬಾಹ್ಯದ ಈ! ಮಾನವ ಪ್ರಯತ್ನಗಳನ್ನು. ಸೋಗುಗಳೆಂದು ಕಂಡು ಪ್ರಶ್ನಿಸುತ್ತದೆ.

ಲೌಕಿಕದಲ್ಲಿ ಬೆಳಗಿನ ಪ್ರತಿಕ್ಷಣವೂ ಸುಖವಿರದಿದ್ದರೂ ಅದರತ್ತವೇ ತುಡಿಯುವ. ಕನಸುಕಾಣುವ ಹೃದಯ ಮನುಷ್ಯನದು. ಇಂತಹ ಅಸಮ–ವಿಷಮಗಳಿಗೆ ಕವಿಯ ಕಾಣ್ಕೆ ಪ್ರತಿನುಡಿಯುವದು ಅದೆಷ್ಟು ಸರಳ!

"ಬಾಳ ಬುತ್ತಿಯಲ್ಲಿ ಹಲವು ಹರಳುಗಳುಂಟು
ಹಸಿದಿರುವೆನೆಂದು ಹಾಗೆ ತಿನ್ನದಿರು"

"ಬಾಳ ದಾರಿಗುಂಟ ಕಲ್ಲು ಮುಳ್ಳಿನ ರಾಶಿ
ಎಡವಿ ಬಿದ್ದರೆ ಎತ್ತಿ ಹಿಡಿವರಿಲ್ಲ
ಕೈತಟ್ಟಿ ನಗುವರುಂಟು ಕೈನೀಡಿ ಎತ್ತುವರಿಲ್ಲ"
"ಬಾಳ ಗೂಡಿನಲಿ ಜೇನ್ಹನಿಯಷ್ಟೇ ಇಲ್ಲ
ಬೇವಿನಾ ಕಹಿಯುಂಟು ಜಾಲಿಯಾ ಮುಳ್ಳುಂಟು
ಹಾವಿನಾ ವಿಷ ಉಂಟು ಹೂವಿನಾ ಕಂಪುಂಟು"

ಎಂದು ಶೈಲಿಸಿಕ ಸಿದ್ಧಾಂತವನ್ನು ಬಾಳ ಬಟ್ಟೆಯಲ್ಲಿ ಕಂಡಿರುವ ವಿಸಮ್ರುತೆ ಸರ್ವೋದಯದ ಛಾಪಿನಲ್ಲಿ ಅನಿವಾರ್ಯವಾಗುಳಿವಂತಹದು. ಬದುಕನ್ನು ಎದುರಿಸುವ ಪಯಣದಲ್ಲಿ ಬರುವದೇನೆಲ್ಲವನ್ನೂ ಸ್ವಾಗತಿಸುವ ಪ್ರಜ್ಞೆ ತುಂಬ ಗಮನ ಸೆಳೆಯುತ್ತದೆ.

"ಬರುವದೇನಿಹುದಿನ್ನು ಬಳಿಸಾರಿ ಬರಲಿಕ್ಕೆ ?
ಬಂದರೇ ಬರಲದರ ಹೆದರಿಕೆಯೇ ಎನಗಿಲ್ಲ
ಬರುವದೇನಿಹುದೆಲ್ಲ ಈ ದಿನವೇ ಬರಲಿ
ದೇವ ದೇವನ ಕರುಣೆ ದಿನನಿತ್ಯವಿರಲಿ" (ಬರುವುದೇನಿಹುದಿನ್ನು?)

ಎಂಬುವಲ್ಲಿ ಬದುಕನ್ನು ಎದುರಿಸುವ ಕೆಚ್ಚು ಪ್ರಕಟವಾದರೂ ಪರಾಶಕ್ತಿಯೊಂದಕ್ಕೆ ಜೋತುಬೀಳುವ ಕೊನೆಯ ಸಾಲು. ತನ್ನ ನಂಬಿಕೆಗಳೆಲ್ಲ ಕ್ರಿಯಾತ್ಮಕ ದನಿಯಲ್ಲಿದ್ದರೂ ಅದು ಹಾಗೇ ಕೊನೆಗೊಳ್ಳದೇ ಕ್ರಿಯಾಕೇಂದ್ರದ ನಿಯಾಂತ್ರಿಕತೆಯಾದ ದೈವ **(Fate)**ದ ಕೃಪೆಯನ್ನು ಅವಲಂಬಿಸಿದುದು ಬದುಕಿನ ಆ ಕ್ರಿಯಾತ್ಮಕ ಶಕ್ತಿಯನ್ನೇ ಆಶ್ರಯಿಸಿದಂತಿದೆ (**Possiveness of life**). ಆದರೆ ಜತ್ತಿಯವರ ಸಮಗ್ರತೆ ಹೀಗೆಯೇ ಮುಂದುವರಿಯುವಂತಹವಲ್ಲ. ಅದು ಕಾಲವನ್ನು **(Time Factor)** ಶೃತಿಗೊಳಿಸಿಕೊಂಡ ಅನ್ವೇಷಣವಲ್ಲಿಯೂ ತೊಡಗುವದುಂಟು.

"ಬಾ ಮಗುವೆ ಮೆಲಮೆಲನೆ ಮೇಲೇಳು ಎದ್ದೇಳು
ಕಾಲನಿಗೆ ಅಧೀನ ನೀನಿರುವೆಯಲ್ಲವೆ" (ಮಗು ನಿನಗೆ ಸ್ವಾಗತ)
ಇದೇ ಸಂಕ್ರಮಣಗೊಂಡು ಅಂತರವನ್ನು ಖಚಿತವಾಗಿ ಗಮನಿಸುವಂತಿದೆ

"ನಿನ್ನಂತರ ಅಳೆವ ಅಳತೆಗೋಲುಗಳು
ಎಷ್ಟೊಂದು ದಾರಿ ಹರವಿದ್ದಾರೆ !
ನನ್ನ ಮುಂದೆ ನಿನ್ ಕಾಣ್ವದಕೆ
ಆದರೂ ತಿಳಿಯಲೊಲ್ಲದು ನಿನ್ನಂತ್ಯ ನಿನ್ನಂತರ
ನನಗೂ ನಿನಗೂ ಎಷ್ಟಂತರ ? ಎಷ್ಟಂತರ ?"

ಎಂದ ಭಾವ Metaphysical ನ ದೀಪ್ತಿಯಿಂದ ನಿರಂತರವನ್ನು ಹೊಂದಿದಾಗ ಅಂತರವೇ ಇಲ್ಲದ್ದನ್ನು ಗೆರೆಕೊರೆದು ಹೇಳುತ್ತದೆ.

"ನಾನು ನಿನ್ನೊಳಗೆ ಬೆರೆತಾಗ ಎಲ್ಲಿಹುದು ಅಂತರ
ಆ ಅಂತರ ನನಗೂ ನಿನಗೂ ಶೂನ್ಯಾಂತರ" (ಎಷ್ಟಂತರ?)

ಎಂದು ಪೂರ್ಣತ್ವದ ಜೀವ ಭಾವಗಳ ಅನುರಕ್ತ–ವಿರಕ್ತಗಳ ಭಾವವಲಯದ ಸಂಕೇತವೇ ಸರಿ.

ಹೀಗಿದ್ದು ಈ ಸಂಕಲನದಲ್ಲಿ ಪ್ರಗತಿಪರ ಧೋರಣೆಗಳು ಬೆಳಕು ಕಾಣಿಸುತ್ತವೆ. ಅಸಮಾನತೆಯೇ ಮನುಷ್ಯ ಪ್ರಪಂಚದ ಒಂದು ಹೆಗ್ಗುರುತು. ಅದು ಹೆಚ್ಚು ಇದ್ದಷ್ಟು ಈತನ ಚರಿತ್ರೆ ಬೆಳೆಯುತ್ತಿದೆ ಎಂದು ತೋರುತ್ತದೆ. ಆದರೆ ಅನೇಕರು ಇದನ್ನು ತೊಡೆಯಲು ಹೋಗಿ ತತ್ಕಾಲೀನ ಸಮಾಜಕ್ಕೆ ವಿರೋಧಿಗಳಾಗಿ ಗಲ್ಲುಕಂಬ ಏರಿದರು. ವಿಷಕುಡಿದರು. ಇಲ್ಲವೇ ಆತ್ಮಾಹುತಿಯಾದರು. ನಂತರ ಮಹಾತ್ಮರಾದರು. ಇದು ನೇರವಾಗಿ ಡೊಂಕು ತಿದ್ದಹೊರಟ ಅವರ ಆತ್ಮೀಯ ಕಳಕಳಿಗೆ ಸಂದ ಮಾನದ ಕೊಡುಗೆ. ಇಂತಹ ವಿಷಯ ಪರಿಸರದಲ್ಲಿ ಜೀವಿಸುವ ಕವಿಗೂ ಈ ಕ್ರೂರತೆಯ ಅರಿವಾದಾಗ ಅವನೂ ಅದನ್ನು ಪ್ರತಿಭಟಿಸುವದಕ್ಕೆ ದನಿ ಎತ್ತುತ್ತಾನೆ.

"ನಿತ್ಯ ದುಡಿಮೆ ದುಡಿತದಲ್ಲಿ
ಬಡವನೊಡಲ ಕುದಿವದು
ದುಡಿದ ಒಡಲಿಗೆ ಬರೆಯನಿಕ್ಕುತ
ದೊರೆಯು ಸಿರಿಯಲಿ ಮೆರೆವನು"

"ಈಶ ನಿನ್ನಲಿ ದ್ವೇಷ ಅಸುವಿಗೆ
ಇಂಬು ಕೊಡುವದುಚಿತವೆ ?
ಅಂಬೆ ನಿನ್ನ ಮಕ್ಕಳಲ್ಲಿ
ತಾರತಮ್ಯವದೇತಕೆ ?" (ಹೇಗೆ ಬದುಕಲಿ)

ಇಲ್ಲಿ ಪ್ರತಿಭಟನೆ ತೀರ ವಾಚ್ಯವಾಗುಳಿಯುವಂತಹದಲ್ಲ. ಸಮೀಕ್ಷೆಯ ಧಾಟಿಯಲ್ಲಿದ್ದು ಇದರ ವೈಚಾರಿಕತೆಯನ್ನು ಮತ್ತೆ ಪರಾಶಕ್ತಿಗೆ ಪ್ರಶ್ನಿಸುವದರತ್ತವೇ ಇದೆ. ಹೀಗಾಗಿ ಇಂದು ತೀರ Progress ಆದ attitudes ನ್ನು ಸೃಷ್ಟಿಸುವ ಹಾಗೆ ತೋರುವದಿಲ್ಲ. ಆದರೆ ಅದೇ "ಎಲ್ಲಿಹುದು ಸುಖ?" ಎಂಬ ಕವಿತೆಯಲ್ಲಿ ಈ ಪ್ರಶ್ನೆ ಒಡಲಿನ ಕಾವನ್ನು ಸ್ಫೋಟಿಸುವದರತ್ತ ಒಲಿದಿರುವದು ಸ್ಪಷ್ಟ. ಬೆಂದ ಬದುಕನ್ನು ಕಂಡ ಕವಿ ಹೃದಯ ಈ ಪ್ರಶ್ನೆಗಳನ್ನು ಎತ್ತುತ್ತದೆ.

"ಅಧಿಕಾರ ಗದ್ದುಗೆಯ ರಾಜಕೀಯ ನಾಯಕರು
ಪಟ್ಟದಾ ಅಧ್ಯಕ್ಷರು ಕಾವಿ ಹೊದ್ದ ಕೈವಲ್ಯದಾತರು
ತ್ಯಾಗಿ ಯೋಗಿ ಭೋಗಿ ಎನಿಬವರಾರಿಗೂ
ದೊರೆತಿಲ್ಲ ದೊರೆಯದು ದೊರೆತಿರುವದದು ಬರಿಭ್ರಾಂತಿ"

ಈ ಸಾಲುಗಳಲ್ಲಿ ಶುದ್ಧ ಪ್ರೀತಿ ಮತ್ತು ನಿರ್ಮತ್ಸರ ಬದುಕಿನ ಸೌಖ್ಯದ ವಂಚನೆಗಳಿಂದ ಆದ ಪರಿಸ್ಥಿತಿಯನ್ನು ಎತ್ತಿ ಹೇಳುವಂತೆ ಧ್ವನಿರಸನವಾದ ವಾಸ್ತವವೂ ಇದೆ.

ಈ ಸಂಕಲನದ ಇನ್ನೊಂದು ಗಮನಾರ್ಹ ಅಂಶವೆಂದರೆ ಸಾಂದರ್ಭಿಕತೆಗಳನ್ನು ಕಾವ್ಯವಾಗಿಸಿರುವುದು. ಯುದ್ಧಕಾಲದಲ್ಲಿ. ವೈರಿಗಳ ಆಕ್ರಮಣದ ಸಮಯದಲ್ಲಿ ನಮ್ಮ ದೇಶದ ಶೂರ ಸೈನಿಕರನ್ನು ಸ್ಫೂರ್ತಿಸುವ ಧಾಟಿಯಿಂದ ಮೂಡಿಬಂದ "ಯತೋ ಧರ್ಮ ತತೋ ವಿಜಯ". ನಮ್ಮ ಪ್ರಧಾನಿ ಲಾಲಬಹಾದ್ದೂರ್ ಶಾಸ್ತ್ರಿಯವರನ್ನು ಸ್ಮರಣೆ ಮಾಡಿದ 'ಶ್ರದ್ಧಾಂಜಲಿ' 'ಶಾಂತಿ ಜ್ಯೋತಿ' ಮುಂತಾದವು ಉಚಿತವಾಗಿವೆ. ಭಾವ – ಆವೇಶ – ಅಭಿವ್ಯಕ್ತಿಗಳಲ್ಲಿ ಹೊಸ ಹೆಜ್ಜೆಯ ಗುರುತುಗಳು ಕಾಣುವಂತೇ ನವೋದಯದಿಂದ ಪಾರಾಗುತ್ತಿರುವ ಭಾಷಾಶ್ರದ್ಧೆ ಹಾಗೂ ಸಾಂದ್ರತೆಗಳು ಇಲ್ಲಿ ಗಮನ ಸೆಳೆಯುತ್ತವೆ.

ಇಷ್ಟಾಗಿಯೂ ನವ್ಯದ ಜಾಡಿನಲ್ಲಿ ಪ್ರಯೋಗಗೊಂಡ 'ದೇಗುಲದ ಜಲ', 'ಜಾಳು'. 'ಮೊರೆ'ಗಳು ಮುಕ್ತಛಂದವಾಗಿ ಬಂದಿದ್ದರೂ ನವ್ಯದ ಪರಿಸೊಳಗೆ ನವೋದಯದ ಪೂರಣವನ್ನೇ ತುಂಬಿದ್ದುದು ಗಮನಸೆಳೆಯುತ್ತದೆ. ಇನ್ನು 'ಭಾವಪಾಶ' ಜತ್ತಿಯವರ ಪ್ರಕೃತಿ ಗೀತದ ಬಗೆಗೆ ಎರಡು ಮಾತು;

"ಏಲೇ ಮಾನವಾ ನಿನ್ನೊಳಗೇನಿದೆಯೋ ?
ಇಳೆ ಕೊಡುವ ಪಾಠ ನೀ ಕಲಿತು
ಕಳೆ ತಂದುಕೋ ನಿನ್ನ ಬದುಕಿಗೆ"

ಎಂಬುದು ಪ್ರಕೃತಿಯನ್ನೇ ಗುರುವಾಗಿಸಿಕೊಂಡ ಪ್ರತಿಮೆ ಮೆಚ್ಚಿನದು. **Earth has not anything to show more fare** ಎನ್ನುವ **Wordswarth** ನಂತೇ ಸೃಷ್ಟಿಯ ಹಲವಾರು ಮುಖಲಿನಲ್ಲಿ ಕಲಿಯುವುದು ಬಹಳವಿದೆ. ಅದು ನಿತ್ಯ ನೂತನ. ಚಿರಂತನ. ಉತ್ಸಾಹ ಒಂದು ಮುಖವಾಗಿ ಕಾಣುವ ಒಂದು ಸೊಗಸು, ರಮ್ಯವೂ. ಭವ್ಯವೂ. ತಟಸ್ಥವೂ – ಹೀಗೆ ವಿಧವಿಧದ ರಸಚೇತನಗಳ ಸ್ಥಾಯಿಕೇಂದ್ರ. ಇದನ್ನು ತುಂಬ ಪ್ರಿಯವಾಗಿ ಅಪ್ಪಿಕೊಂಡ ಜತ್ತಿಯವರಲ್ಲಿ ಪ್ರಕೃತಿಯ ಬಗೆಗಿನ ರಸಜ್ಞತೆ ಅಭಿವ್ಯಕ್ತವಾಗುತ್ತದೆ.

ಸಂಕಲನದಲ್ಲಿಯ 'ನಮನ', 'ಸಂಕಲ್ಪ'ಗಳು ವ್ಯಕ್ತ ಉದ್ದೇಶಿತವಾದರೂ ಇಲ್ಲಿಯೂ ಅವರ ಚೇತನದ ಅರಸುವಿಕೆಯೇ ಕಂಡುಬರುತ್ತದೆ. ದೀಪಾವಳಿ. ಯುಗಾದಿ. ಸಂಕ್ರಾಂತಿ. ಮಹಾನವಮಿಯಂತಹ ವೈಶಿಷ್ಟ್ಯಗಳನ್ನೂ ಕವಿತೆಯಾಗಿಸುವ ಜತ್ತಿಯವರಲ್ಲಿ ಸಂಪ್ರದಾಯವನ್ನು ವೈಜ್ಞಾನಿಕತೆಯಲ್ಲಿ ಒರೆದು ನೋಡುವ ಬಗೆ ಗಮನಾರ್ಹವಾದುದು.

ಹೀಗೆ – ಜತ್ತಿಯವರ ಮೊದಲ ಸಂಕಲನದ ಭಾವಸೌರಭದಲ್ಲಿ ಬದುಕಿನ ಲಯಗಳಿಗೆ ಶ್ರುತಿಗಳು ಮಿಡಿದಿರುವುದನ್ನು ಕಾಣುವುದರ ಜೊತೆಗೆ ಒಂದು ಸಂಕೀರ್ಣತೆಯಲ್ಲಿ ಶುದ್ಧ ಮನಸ್ಸೊಂದರ ಮಿಡಿತಗಳ ಹೃದಯವೂ ಕಾಣುತ್ತದೆ.

# ವಚನಾಮೃತ : ಒಂದು ಅವಲೋಕನ

**ಡಾ. ಬಿ. ಕೆ. ಹಿರೇಮಠ**

ಹನ್ನೆರಡನೆಯ ಶತಮಾನದ ಹೊತ್ತಿಗೆ ಕಾಲಗರ್ಭದಲ್ಲಿ ಹೂತುಕೊಂಡಿದ್ದ ಅಭಿವ್ಯಕ್ತಿಯ ಬೀಜವೊಂದು ಮೊಳೆತು, ಹೆಮ್ಮರವಾಗಿ, ಫಲಭರಿತವಾಯಿತು. ಅದನ್ನೇ ವಚನ ಸಾಹಿತ್ಯ, ಅನುಭಾವ ಸಾಹಿತ್ಯ ಎಂದು ಗುರುತಿಸಲಾಗಿದೆ. ಅಂದಿನಿಂದ ಇಂದಿನವರೆಗೂ ಈ ಸಾಹಿತ್ಯ ಫಲದ ಬೀಜಗಳನ್ನು ಬೀಸಿದ ಗಾಳಿ, ಹರಿದ ನೀರು ನಾಡಿನ ಉದ್ದಗಲಕ್ಕೂ ಪಸರಿಸಿವೆ. ಅವು ಆಗಾಗ ಜನ ಮನೋಭೂಮಿಕೆಯಲ್ಲಿ ನಾಟಿ, ಮೊಳೆತು, ಆಯಾ ಕಾಲದ ಪರಿಸರ, ವ್ಯಕ್ತಿತ್ವ, ಅನುಭಾವ ಆಳ-ನೀಳ ಗಳನ್ನು ಹೊತ್ತು ಫಲ ನೀಡಿವೆ. ಇಂದಿಗೆ ಎಂಟು ಶತಮಾನಗಳು ಉರುಳಿದರೂ 'ಕಾಲ ಕೃಷಿಕ' ಅವನ್ನೇ 'ಬೀಜಗಾಳ'ನ್ನಾಗಿ ಉಳಿಸಿಕೊಳ್ಳುತ್ತಲಿರುವುದು ಆ ಕಾಳಿನಲ್ಲಿ ಹುದುಗಿರುವ ಸತ್ವಕ್ಕೊಂದು ನಿದರ್ಶನವಾಗಿದೆ.

'ವಚನ' ಸಾಮಾನ್ಯಾರ್ಥದಲ್ಲಿ ಮಾತು. ಅದಕ್ಕೆ ಅಮೃತತ್ವ ಬರುವುದು ವ್ಯಕ್ತಿಯ ಬದುಕು ಕುದಿಗೊಳ್ಳುವಂತೆ ಮಾಡಿದ ಘಟನೆ, ಗಳಿಗೆಗಳು ಆ ವ್ಯಕ್ತಿಯನ್ನು ಪರಮಸತ್ಯದ ಹತ್ತಿರಕ್ಕೆ ಕರೆದೊಯ್ಯುವಾಗ ಮಾತ್ರ. ಒಮ್ಮೆ ಕೇವಲ ಮಾತು ಆಗಿದ್ದುದು ಅನುಭವದ ಪೊರೆಯನ್ನು ಸೀಳಿ ಅನುಭಾವದ ಆಳಕ್ಕೆ ಇಳಿದು 'ವಚನ' ಎಂಬ ವಿಶೇಷಾರ್ಥಪಡೆಯುತ್ತದೆ. ಶ್ರೀ ದಾನಪ್ಪ ಜತ್ತಿಯವರ 'ವಚನಾಮೃತ' ಈ ಅವಸ್ಥೆಯ ಒಂದು ನಿದರ್ಶನ.



'ವಚನಾಮೃತ' ದಾನಪ್ಪ ಜತ್ತಿಯವರ ಮೂರನೆಯ ಸ್ವತಂತ್ರ ಕೃತಿ. ಇದಕ್ಕೂ ಹಿಂದೆ 'ಭಾವ ಸೌರಭ' ಕವನ ಸಂಕಲನ, ಇದಕ್ಕೂ ಹಿಂದೆ 'ಅಮೂಲ್ಯ ಕಾಣಿಕೆ' ಕಥಾ ಸಂಕಲನ ರಚನೆಗೊಂಡಿವೆ. ಇದು ಜತ್ತಿಯವರ ಮಾತು ವಚನಾಮೃತ ವಾಗುತ್ತ ಬಂದ ವಿಧಾನವೂ ಹೌದು.

ಶ್ರೀ ದಾನಪ್ಪ ಜತ್ತಿಯವರ ಸಾಗಿಬಂದ ಬದುಕು ಕೂಡ ಇದಕ್ಕೆ ಸಮಾಂತರ ವಾಗಿದೆ. ಒಂದು ಕಾಲಕ್ಕೆ ಜತ್ತಿಯವರು ವ್ಯಾಪಾರಿ. 'ವ್ಯಾಪಾರಂ ದ್ರೋಹ ಚಿಂತನಂ' ಎಂಬ ಉಕ್ತಿಗೆ ಅಪವಾದವಾಗಿ ವ್ಯಾಪಾರವನ್ನು ಅಲಕ್ಷಿಸಿ ಕಲೋಪಾಸನೆ ಮಾಡಿದರು. ದಕ್ಕಿದ್ದು ಮಾತ್ರ ದೃಶ್ಯ ಮಾಧ್ಯಮದ ಅಷ್ಟಿಷ್ಟು ಅನುಭವ, ಹಾಡು, ಸಂಗೀತಗಳು. ಅದರಂತೆ ಒಂದು ಕಾಲಕ್ಕೆ ಸರಪಂಚ-ನಗರ ಸಭಾಧ್ಯಕ್ಷ ಆಡಳಿತದ ಸೂತ್ರಧಾರಿ. ವ್ಯಕ್ತಿ - ಸಮಾಜ ಜೀವನದ ಒಳ-ಹೊರಗುಗಳನ್ನು ಕಾಣುವ ನೂರಾರು ಸಂದರ್ಭಗಳು. ಆಗಲೂ ನಟನೆ, ಕೀರ್ತನೆ, ಬರವಣಿಗೆ, ಪ್ರವಚನಗಳ ಗೀಳು. ಹೀಗೆ ವೃತ್ತಿ ಬಾಡಿತು. ಪ್ರವೃತ್ತಿ ಚಿಗುರಿತು. ಒಂದು ಕಾಲಕ್ಕೆ ಬೇರೆ ಬೇರೆಯಾಗಿದ್ದ

ವೃತ್ತಿ-ಪ್ರವೃತ್ತಿಗಳು ಪತ್ತಿರಕ್ಕೆ ಬಂದವು. ಈಗ ಬೆರೆತು ಬೇರಿಲ್ಲವಾಗುವ ದಾರಿ ಹುಡುಕುತ್ತಲಿವೆ. ಇದು ಜತ್ತಿಯವರು ಪೂರ್ತಿಗೊಳ್ಳುತ್ತ ಬಂದ ಇತಿವೃತ್ತ. ಈ ಇತಿವೃತ್ತಕ್ಕೂ ವಚನಾಮೃತಕ್ಕೂ ನೇರ ನಂಟಿದೆ. ಹಾಗೆಂದೇ ಸ್ವಾನುಭವ, ಲೋಕಾನುಭವ, ಅನುಭಾವಗಳು ಬೆಳೆದುಬಂದಿವೆ.

ವಚನಕಾರ ಮಾತುಗಾರನಲ್ಲ. ಮಾತು ಹುಟ್ಟಿ ಅಡಗುವ ನೆಲೆಯನರಸುವಾತ. 'ದಾನೇಶ ಪ್ರಿಯ ದೇವಾ' ಎಂಬ ಅಂಕಿತವನ್ನೊಳಗೊಳ್ಳುವ ಇಲ್ಲಿನ ವಚನಗಳು ತೊಡಗುವುದೇ ಇಂಥ ಅನ್ವೇಷಣೆಯಿಂದ ಎಂಬುದನ್ನು,

ಚನ್ನಬಸವನು ನೀನೆ ಮುನ್ನ ಬಸವನೂ ನೀನೆ
ಮುನ್ನ ಮುನ್ನ ಎಲ್ಲಕ್ಕೂ ಮುನ್ನ ಈಶನಿದ್ದಾತನೂ ನೀನೆ
ನಾರದಗಡ್ಡೆಯಡಿ ನೆಲಸಿ ನಲಿದಾತನೂ ನೀನೆ
ದಾನೇಶ ಪ್ರಿಯ ದೇವಾ ಎನಗೆ ನಡೆ-ನುಡಿಗಲಿಸಿದಾತನೂ
ನೀನಲ್ಲವೇ ತಂದೆ.

ಎನ್ನುವಲ್ಲಿ ನೋಡಬಹುದು. ಇನ್ನೊಂದು ವಚನದಲ್ಲಿ 'ನಿನ್ನಿಂದಲಧಿಕ ದೈವ ಮತ್ತುಂಟೆ?' ಎಂದು ಕೇಳುತ್ತ ತಾವು ಕಂಡ ಶಕ್ತಿಯಲ್ಲಿಯೇ ತಾಯಿ, ತಂದೆ, ಬಂಧು-ಬಾಂಧವರ ವಾತ್ಸಲ್ಯ, ಆರೈಕೆ ಪ್ರೀತಿಗಳನ್ನನುಭವಿಸುತ್ತಾರೆ.

ಜತ್ತಿಯವರ ಒಳತೋಟಿಯಾದರೋ ಇಂಥದು. ಇವಕ್ಕೆ ಪ್ರತಿಯಾಗಿರುವ ಲೋಕದ ವರ್ತನೆಯೋ ಕಕ್ಕಾವಿಕ್ಕಿಗೊಳಿಸುವಂಥದು. ಅನ್ವೇಷಕನ ಬದುಕಿನ ಅಗ್ನಿಪರೀಕ್ಷೆಯೂ ಆಗುವಂಥದು. ಇಂಥ ಸತ್ವಪರೀಕ್ಷೆಯ ಕ್ಷಣ ಜತ್ತಿಯವರ ವಚನವೊಂದರಲ್ಲಿ ವಸ್ತುನಿಷ್ಠವಾಗಿ ದಾಖಲಾಗಿದೆ. ವ್ಯಾಪಾರ ವ್ಯವಹಾರದಲ್ಲಿ ಕೈಸುಟ್ಟುಕೊಂಡು ತಳಮಳಿಸಿದ ಜತ್ತಿಯವರು ಆ ಬೇಗುದಿಯಿಂದ ಪಾರಾದುದು ಒಂದು ದೈವಿ ಸಂಕಲ್ಪ. ಅವಾಗಲೇ ಜತ್ತಿಯವರು ಹೊಸ ಮನುಷ್ಯರಾದುದು. ಈ ಒಟ್ಟು ಸಂದರ್ಭಕ್ಕೆ ಹಿನ್ನೆಲೆಯಾಗಿ ನಿಲ್ಲುವ ವಾಸ್ತವಿಕ ಚಿತ್ರಣವು :

ಆಗ ಧನದಿಂದ ಸಿರಿವಂತನಾಗಿ ಗುಣದಿಂದ ಬಡವನಾಗಿದ್ದೆ
ಲೋಕ ಆದರಿಸಿತು.
ಮನೆಯಿಂದ ದೊಡ್ಡವನಾಗಿ ಮನದಿಂದ ಚಿಕ್ಕವನಾಗಿದ್ದೆ
ಜಗ ಸನ್ಮಾನಿಸಿತು.
ಈಗ ಗುಣದಿಂದ ಸಿರಿವಂತನಾಗಿ ಧನದಿಂದ ಬಡವನಾದೆ
ಲೋಕ ಅನಾದರಿಸುತ್ತಿದೆ.
ಮನದಿಂದ ದೊಡ್ಡವನಾಗಿ ಮನೆಯಿಂದ ಚಿಕ್ಕವನಾದೆ
ಜಗ ಅವಮಾನಿಸುತ್ತಿದೆ.

ದಾನೇಶ ಪ್ರಿಯ ದೇವಾ
ಈ ಲೋಕದ ನಡೆ ಅಚ್ಚರಿಯಾಹುದಯ್ಯಾ !

ಎನ್ನುವಲ್ಲಿ ಮೂಡಿಬಂದಿದೆ. ಮಾನವನು ತನ್ನ ನೋವನ್ನು ಇತರರ ಮುಂದೆ ತೋಡಿಕೊಳ್ಳುವುದು ಸಹಜ. ಅದು ಅನೇಕ ಸಂದರ್ಭಗಳಲ್ಲಿ ವ್ಯರ್ಥ ಎಂದೆನಿಸುತ್ತದೆ. ಜತ್ತಿಯವರ ಅನುಭವವು ಇದಕ್ಕೆ ಹೊರತಾಗಿಲ್ಲ. ಒಡಲ ತಳಮಳವನ್ನು ತಡೆಯಲಾರದೆ ತೋಡಿಕೊಂಡಾಗಲೂ ಪ್ರತಿಯಾಗಿ ದೊರಕುವುದು ಮಾತ್ರ ಸಾಂತ್ವನವಲ್ಲ ಕಹಿ. ಅದು.

ಎನ್ನ ದುಃಖವ ಅನ್ಯರಿಗೆ ಹೇಳಿದೆ; ಪರಿಹಾಸ್ಯ ಮಾಡಿದರು
ಎನ್ನ ಸಂಕಟವ ಇನ್ನಾರಿಗೋ ತೋರಿದೆ; ಅಪಹಾಸ್ಯ ನೀಡಿದರು
ಎನ್ನ ಕಳವಳವ ಲೋಕಕ್ಕೆ ತೆರೆದು ಸುರಿದೆ:
ಕುಣಿಕುಣಿದು ನಗೆಮಾಡಿದರು
ದಾನೇಶ ಪ್ರಿಯ ದೇವಾ ನಿನಗೆ ನನ್ನನ್ನೇ ನೈವೇದಿಸಿದೆ.
ನೀನೆನ್ನ ಸಾಂತ್ವನಗೊಳಿಸಿದೆ.

ಎಂಬ ವಚನದಲ್ಲಿ ನಿರೂಪಿತವಾಗಿದೆ. ಹೀಗೆ ಬದುಕಿನ ಹೊಯ್ದಾಟದ ಗಳಿಗೆಯಲ್ಲಿ ಸಾಂತ್ವನಗೊಳಿಸಿದ ಶಕ್ತಿಯ ಒಲವು ಜತ್ತಿಯವರ ಮುಂದಿನ ಜೀವನದ ಒಳ ಹೊರಗನ್ನು ಆವರಿಸಿಬಿಡುತ್ತದೆ. ಈ ವ್ಯಕ್ತಿಗೆ ಆ ಶಕ್ತಿಯ ಒಲವು ಅನಿವಾರ್ಯವಾಗುತ್ತದೆ. ವಚನವೊಂದರಲ್ಲಿ.

ಕಡಲೊಡಲ ಮೀನು ಕಡೆಗಾದರೆ !
ಅದೆಂತು ಉಳಿವುದಯ್ಯಾ ?
ತೆರೆಯೊಡಲ ನೌಕೆ ತಲೆಕೆಳಗಾದರೆ !
ಅದೆಂತು ತಾಳುವುದಯ್ಯಾ ?
ಗಗನೊಡಲ ಹಕ್ಕಿ ಗರಿಮುರಿದರೆ !
ಅದೆಂತು ಹಾರುವುದಯ್ಯಾ ?
ಮಡಿಲೊಡಲ ಕೂಸು ಹೊರಗಾದರೆ !
ಅದೆಂತು ಬದುಕುವದಯ್ಯಾ ?
ದಾನೇಶ ಪ್ರಿಯ ದೇವಾ
ಜಗದೊಡಲ ಜೀವಿ ನಾ ನಿನ್ನೊಲವ ತಪ್ಪಿದರೆ !
ಆನೆಂತು ಜೀವಿಪೆನಯ್ಯಾ ?

ಈ ಪಂಕ್ತಿಗಳು ಜತ್ತಿಯವರ ಒಡಲನುಡಿಗಳೇ ಆಗಿವೆ.

ತಮ್ಮ ಬದುಕನ್ನು ತುಂಬಿದ ದೈವೀಶಕ್ತಿಯ ಒಲವಿಗಾಗಿ ಹಂಬಲಿಸುವ ಜತ್ತಿಯವರ ಉಪಾಸನಾ ಮಾರ್ಗವೂ ವಿಶಿಷ್ಟವಾದುದು. ಅದು :

ಸಂಗೀತ, ಸಾಹಿತ್ಯ, ಕಾವ್ಯ
ನಿನ್ನನರಸುವುದಕ್ಕೆ ರೂಪಗೊಂಡವು ತಂದೆ
ಜ್ಞಾನಿ, ಸುಜ್ಞಾನಿ, ವಿಜ್ಞಾನಿ ಎಲ್ಲರೂ
ನಿನ್ನ ದರ್ಶನಕೆ ಪರಿತಪಿಸುವರು ತಂದೆ
ತತ್ತ್ವಜ್ಞಾನಿ, ಆತ್ಮಜ್ಞಾನಿ, ಅಧ್ಯಾತ್ಮಿ ಇವರೆಲ್ಲ
ನಿನಗಾಗಿ ಹಂಬಲಿಪರು ತಂದೆ
ದಾನೇಶ ಪ್ರಿಯ ದೇವಾ
ಆನೂ ನಿನ್ನನ್ವೇಷಣೆಯಲ್ಲಿಯೇ ಜೀವಿಪೆನಯ್ಯಾ.

ಎಂಬ ವಚನದಲ್ಲಿ ವ್ಯಕ್ತವಾಗಿದೆ. ಹೀಗೆ ಅಂದು ಆರಂಭಗೊಂಡ ಜತ್ತಿಯವರ ಸಾರಸ್ವತ ಉಪಾಸನೆ, ಕಲೋಪಾಸನೆ ಇಂದಿಗೂ ನಿರಂತರವಾಗಿ ಸಾಗಿಬರುತ್ತಲಿದೆ. ಅದರಿಂದಾಗಿ ಅವರ ಮನ ದಣಿದಿಲ್ಲ. ನಾಲಿಗೆ ತಣಿದಿಲ್ಲ. ಅದರೆ ದಿನದಿಂದ ದಿನಕ್ಕೆ ಜತ್ತಿಯವರ ವಾಣಿ-ವಚನ ಜನತೆಯ ಪಾಲಿಗೆ ಸಂಜೀವಿನಿಯಾಗುತ್ತಲಿವೆ.

ಹೀಗೆ ಜತ್ತಿಯವರ 'ವಚನಾಮೃತ' ಅವರ ಬದುಕಿನ ನೂಲೆಳೆಗಳು ಹಾಸುಹೊಕ್ಕಾಗಿ ನೇಯ್ದುಕೊಂಡ ನೇಯ್ಗೆ. ಅದನ್ನು ಬಿಡಿಸಿ ನೋಡಲು ಹೊರಟ ಯಾರ ಕಣ್ಣಿಗಾದರೂ ಅದು ಅವರ ಬದುಕಿನ ಪ್ರತಿಬಿಂಬವಾಗಿ ಕಾಣದಿರಲಾರದು. ಹಾಗೆಂದೇ ಇದು ಅವರ ವಿಶಿಷ್ಟ ಕೃತಿಯಾಗುತ್ತದೆ.

'ವಚನಾಮೃತ'ದ ಪ್ರತಿ ವಚನವೂ ಉತ್ತಮ ಮಟ್ಟದ್ದೆಂದು ಹೇಳಲಾಗದು. ಕೆಲವು ವಚನಗಳಲ್ಲಿ ಶರಣರ ವಚನಗಳ ಛಾಯೆಯೇ ಮೂಡಿದೆ. ಅಂಥವುಗಳನ್ನು ಓದುವಾಗ ಹೆಚ್ಚಿನ ಪರಿಣಾಮ ಆಗುವುದಿಲ್ಲ. ಆದರೂ ಇಲ್ಲಿನ ಕೆಲವು ವಚನಗಳಲ್ಲಿ ವ್ಯಕ್ತವಾದ ಲೋಕ ನಿರೀಕ್ಷಣದಲ್ಲಿ ತೀಕ್ಷ್ಣತೆಯಿದೆ. ವಚನಕಾರ ಕಂಡ ವ್ಯಕ್ತಿ ದೌರ್ಬಲ್ಯಗಳು, ಸಮಾಜದ ಊನಗಳು ಅನುಭವದ ಅಂಚನ್ನು ತಾಕಿ ಅಭಿವ್ಯಕ್ತಿ ಪಡೆದದ್ದು ಎದ್ದುಕಾಣುವ ಅಂಶವಾಗಿದೆ. 'ಅಳಲನ್ನೇ ಕಣ್ಣ ಮಡಿಯಲಿ ಇಳಿಸಿ ಬಾಳ ಹಸಿರನ್ನು ಬೆಳೆಸುವನಯ್ಯ', 'ಅರಿವಿಲ್ಲದೆ ಕಳೆದ ಬಾಲ್ಯ. ಮರೆವಿನಲ್ಲಿಯೆ ತುಳಿದ ಯೌವ್ವನ'. 'ಇಂದಿನ ಎನ್ನ ಜೆವರ ಹನಿಗಳೆ. ಕಾಳಿನ ತೆನೆಗಳಾಗಿ ನಾಳೆ ಮೂಡಲಿವೆ', 'ಜನಿಸಿದ ಜೀವಿಗಳೆಲ್ಲ ಜೀವಿಗಳೇನಯ್ಯ. ಜನನ ಮರಣಗಳರ್ಥ ತಿಳಿದವರು ಜೀವಿಗಳಯ್ಯ', 'ಹಣದ ಝಣತ್ಕಾರ ಕಂಡಾಗ. ನೆರೆಯದೆ ನರ ಹೊರೆಯ ಬಳಗ ?', 'ನಡೆಯುತ್ತ ನಡೆಯುತ್ತ ಬಳಲುವರಲ್ಲದೆ. ದಾರಿ ಬಳಲೀತೆ ?', 'ಪೂಜಿಸಿ... ಪೂಜಿಸಿ ಸವೆಯುವರಲ್ಲದೆ, ನೀನು ಸವೆಯುವೆಯಾ ?' ಎಂಬಂಥ ಸಾಲುಗಳಲ್ಲಿ ದಾನಪ್ಪ ಜತ್ತಿಯವರ ಪ್ರತಿಭೆಯ ಹೊಳಪು ಇದೆ; ಚಿಂತನೆಯ ಆಳವಿದೆ; ಅಭಿವ್ಯಕ್ತಿಯ ತೂಕವಿದೆ.

'ವಚನಾಮೃತ'ವು ಅಂದಿನ ಸಾಹಿತ್ಯಿಕ ಕ್ಷೇತ್ರದಲ್ಲಿ ಸ್ಪರ್ಧೆಗೆ ನಿಂತು ತನ್ನ ಸ್ಥಾನವನ್ನು ಗುರುತಿಸಿಕೊಳ್ಳದೆ ಹೋಗಬಹುದು. ಆದರೆ ಅದು ಶ್ರೀ ದಾನಪ್ಪ ಜತ್ತಿಯವರ ಬದುಕಿನ ಬರಹವಾಗಿ, ಅವರ ಅಂತರಂಗ-ಬಹಿರಂಗವನ್ನು, ಅವರ ಮನೋಗತ-ಮನೋಧರ್ಮವನ್ನು ಬಿಂಬಿಸುವ ವಿಶಿಷ್ಟ ಕೃತಿಯಾಗಿ ನಿಲ್ಲುವುದಂತೂ ಸತ್ಯವಾಗಿದೆ.

# ಶರಣರು ನಕ್ಕಾಗ : ಒಂದು ಚಿಂತನಶೀಲ ಕೃತಿ

## ಪ್ರೊ. ಜಿ. ಜಿ. ಹೂಗಾರ

"ನಗುವೇ ಬಾಳು ಅಳುವೇ ಗೋಳು". ಈ ಬಾಳಿನಲ್ಲಿ ಎಲ್ಲರೂ ನಗಬೇಕು. ಅದೇ ಒಂದು ಸುಖ: ಅದೇ ಸ್ವರ್ಗ. ಈ ನಗುವಿನಲ್ಲಿ ತೃಪ್ತಿಯಿದೆ: ಸಂತೋಷವೂ ಇದೆ; ವ್ಯಂಗ್ಯವೂ ಇಲ್ಲವೆಂದಲ್ಲ; ಅಸಂತೋಷವೂ ಅಡಗಿಲ್ಲವೆಂದಲ್ಲ. ಒಂದು ನಗುವಿನಲ್ಲಿ ಏನೆಲ್ಲವೂ ಅಡಗಿದೆ. ಜೀವನದ ಸ್ವರ ಸ್ವರಗಳಲ್ಲಿಯು ನಗುವಿನ ಪಕಳೆಗಳನ್ನು ಸೊಗಸಾಗಿ ಬಿಚ್ಚಿಟ್ಟು. ನಗದವರನ್ನೂ ಸಹ ನಗಿಸುವ ಶ್ರೀ ದಾನಪ್ಪ ಜತ್ತಿಯವರು ಪ್ರಪಂಚದ ಪಾಠ ಶಾಲೆಯಲ್ಲಿ ಸರ್ವಜ್ಞನಂತೆ ನುರಿತವರು ಹಾಗೂ ಅರಿತವರು. ಕೀರ್ತನಕಾರರಾಗಿ ಅಲೆದಾಡಿ ಮಕ್ಕನಿಂದ ಶರಣರವರೆಗಿನ ವಿವಿಧ ವರ್ಗಗಳ, ವಿವಿಧ ಜನರ ನಗುವಿನ ಅಲೆಗಳನ್ನು ಕಂಡು ಆ ಸಿಹಿಯನ್ನುಂಡವರು. ಆಗಾಗ ತಾವೂ ಸಹ 'ನಗೆ ಮಾರಿ ತಂದೆ'ಯಂತೆ ನಕ್ಕು ನಗಿಸಿ, ತಮ್ಮ ಜ್ಞಾನ ದಾಸೋಹದಲ್ಲಿ ಯಶಸ್ಸುಗಳಿಸಿ ನಡೆದವರು. ಚಲಿಸುವ ವಿಶ್ವಕೋಶದೋಪಾದಿಯಲ್ಲಿ ಜ್ಞಾನದಾಗರವಾದ ಅವರ ಒಂದು ಪುಟ್ಟ ಕೃತಿ 'ಶರಣರು ನಕ್ಕಾಗ' ಸಮರ್ಥ ಕೃತಿಯೆನಿಸಿದೆ.

"ಸಂಜು ನೊರವಾಲಾಗಲು ನಗೆ ಬೇಕು. ಬರಡು ಬಾಳು ಫಲಭರಿತ ನಂದನ ವನವಾಗಲು ನಗೆ ಬೇಕು...... ಬಡವ–ಬಲ್ಲಿದ, ಗಂಡು–ಹೆಣ್ಣು, ರಾಜ–ರಂಕ, ಗುರು–ಶಿಷ್ಯ ಎಲ್ಲರೂ ನಗುತ್ತಾರೆ. ಪ್ರಸಂಗಾನುಸಾರವಾಗಿ......... ನಗುವಿಗೆ ಬಾಡಿಗೆ ಸುಂಕವಿಲ್ಲ. ನಗುವಿಗೆ ಮೀಟರ ಕೂಡ್ರಿಸಿ ಹಣ ವಸೂಲ ಮಾಡುವ ಸಂಸ್ಥೆ ಇಲ್ಲವೇ ಇಲ್ಲ" ಎಂದ ಜತ್ತಿಯವರು ಅರಸಿಕರನ್ನೂ ರಸಿಕನನ್ನಾಗಿಸುವಂತೆ ನಗುವಿನ ಅಲೆಗಳನ್ನೆಬ್ಬಿಸಿದ್ದಾರೆ. ಕೇವಲ ನಕ್ಕುಬಿಡುವ. ನಗುವಿಗಾಗಿಯೇ ಮಾತ್ರ ಮೀಸಲಾಗಿರುವ ಕೆಲವು Jokes ಕೃತಿಗಳಿಗೂ ಈ ಕೃತಿಗೂ ವ್ಯತ್ಯಾಸವಿದೆ. ಇಲ್ಲಿ ಓದಿ ನಕ್ಕಾಗ, ನಂತರ ನಾವು ಗಂಭೀರವಾದ ಚಿಂತನಶೀಲತೆಯಲ್ಲಿ ಮಗ್ನರಾಗುವಂಥ ಮಾರ್ಗದರ್ಶನವಿದೆ.

ಶರಣನ ಬಾಳು ಗೋಳಿನ ಸಂತೆಯಲ್ಲ. ಆತನ ನಗೆ ದೀವಿಗೆಯಿಂದ ಅಜ್ಞಾನದ ತಮಂಧತೆ ತೊಲಗಿತು. 'ಶರಣ ಮನತೆರೆದು ಮಾತನಾಡಿದ ಮಾತು ಮಾತಲ್ಲ. ಅದೊಂದು ಘನ ಚೇತನ – ರಸ ಚೇತನ, ಚಿತ್ಕಳಾ ಚೇತನ. ಕಾಮ – ಕ್ರೋಧಾದಿ ವೈರಿಗಳನ್ನು ಮಿತ್ರರನ್ನಾಗಿಸಿಕೊಂಡು ನಕ್ಕವರು ಶರಣರು. ನಗು ನಗುತ್ತಲೇ ಕಾಯಕದಲ್ಲಿ ಮಗ್ನರಾಗಿ ತೃಪ್ತಿಯ ನಗೆ ನಕ್ಕರು. ತತ್ತ್ವಜ್ಞಾನಿಗಳ ಸಭೆಗೆ

ಆಗಮಿಸಿದ ಅಷ್ಟಾವಕ್ರನನ್ನು ಕಂಡು ಸಭೆಯಲ್ಲಿ ನಗೆಗಡಲಿನಲ್ಲಿ ಓಲಾಡಿತಂತೆ; ಪ್ರತಿಯಾಗಿ ಆತನೂ ನಕ್ಕನು.

"ನಾನು ತತ್ತ್ವಜ್ಞಾನಿಗಳ ಸಭೆಗೆ ಬರುವುದು ಬಿಟ್ಟು, ಚರ್ಮವನ್ನಷ್ಟೇ ಪರೀಕ್ಷಿಸುವ ಚಮ್ಮಾರರ ಸಭೆಗೆ ಬಂದೆನಲ್ಲಾ" ಎಂದು ನಕ್ಕನಂತೆ. ಈ ನಗುವಿನಲ್ಲಿ ಅಡಗಿರುವ ಚಾಟಿಯ ಏಟಿನ ಹೊಡೆತ ಗಮನಾರ್ಹವಾದುದು.

ಶರಪಂಜರದಲ್ಲಿ ಮಲಗಿದ ಭೀಷ್ಮ 'ಊರು ಕೊಳ್ಳೆ ಹೊಡೆದಮೇಲೆ ಕೋಟೆ ಬಾಗಿಲು ಹಾಕಿದಂತೆ' ಪಾಂಡವರಿಗೆ ಉಪದೇಶ ಮಾಡುವಾಗ ದ್ರೌಪದಿ ನಕ್ಕಳಂತೆ. ಈ ನಗುವಿನಲ್ಲಿರುವ ಜಿಗುಪ್ಸೆಯನ್ನು ಗಮನಿಸಬೇಕು. ಪುಣ್ಯಜೀವಿಗಳ ಗೋಷ್ಠಿಯ ಮಧ್ಯೆ 'ಸ್ವರ್ಗಕ್ಕೆ ಹೋಗುವವರು ಯಾರು ?' ಎಂದು ಗುರು ವ್ಯಾಸರು ಕೇಳಿದಾಗ, ಕನಕದಾಸರು 'ನಾನು ಹೋದರೆ ಹೋದೇನು' ಎಂದರು. ಪುಣ್ಯಜೀವಿಗಳೆನಿಸಿ ಕೊಂಡವರು ಕನಕದಾಸರನ್ನು ಹಾಸ್ಯಾಸ್ಪದವಾಗಿ ನೋಡಿ ನಕ್ಕರು. ಅಹಂ ಹೋದರೆ ನಾನು ಸ್ವರ್ಗಕ್ಕೆ ಹೋದೇನೆಂಬರ್ಥ ಈ ಪುಣ್ಯಜೀವಿಗಳಿಗಾಗಿರಲಿಲ್ಲ. ಹೀಗೆ ತಿಳಿಯದೆ ನಗುವ ಅಜ್ಞಾನಿಗಳುಂಟು.

ಮುಗ್ಧ ಮಗುವಿನ ನಗು, ಕಾಲವಡಿಯಲ್ಲಿ ಮಾಗಿ ಹಣ್ಣಾದ ಮುದುಕಿಯ ನಗು, ಜಾಣ ಗುರುವಿನ ನಗು. ಮೂರ್ಖ ಶಿಷ್ಯನ ನಗು, ಅರ್ಥವಿಲ್ಲದ ಹುಚ್ಚನ ನಗು, ಕಲ್ಪನಾ ಲೋಕದಲ್ಲಿ ವಿಹರಿಸುವ ಕವಿಯ ನಗು, ಶರಣರಲ್ಲೂ ಇರುವ ಕತ್ತಲೆ ಕಳೆದ ಪ್ರಭುವಿನ ನಗು – ಹೀಗೆ ಮಾಲೆ ಮಾಲೆಯಾಗಿಯೂ ವೈವಿಧ್ಯಮಯವಾಗಿಯೂ ಬೆಳೆದಿರುವ ಈ ನಗುವಿನ ಪ್ರಪಂಚವನ್ನು ತೆರೆದಿಡುವ ಶ್ರೀ ಜತ್ತಿಯವರ ಪ್ರಯತ್ನ ಸಫಲವಾಗಿದೆ.

# ಎರಡು ಕ್ಯಾಸೆಟ್‌ಗಳು : ಒಂದು ಸಮೀಕ್ಷೆ

## ಪ್ರೊ. ಸಿದ್ಧರಾಮಯ್ಯ ಮಠಪತಿ

ಇಪ್ಪತ್ತನೆ ಶತಮಾನದ ಉತ್ತರಾರ್ಧಕಾಲ 'ಕ್ಯಾಸೆಟ್‌ಗಳ ಕಾಲ' ಎಂದೇ ಹೇಳಬೇಕು. ಏಕೆಂದರೆ, ನಮ್ಮ ಬದುಕಿನ ಪ್ರತಿಯೊಂದು ರಂಗದ ಚಟುವಟಿಕೆಗಳನ್ನು ಸಹ ಕ್ಯಾಸೆಟ್‌ಗಳು ಪ್ರತಿನಿಧಿಸಿವೆ. ಆರಂಭದ ಹಂತದಲ್ಲಿ ಕೇವಲ ಸಿನೇಮಾ ಮಾಧ್ಯಮಕ್ಕೆ ಸೀಮಿತವಾಗಿದ್ದ ಕ್ಯಾಸೆಟ್‌ಗಳು ಈಗ ಕ್ರಮೇಣ ಎಲ್ಲ ರಂಗಗಳಲ್ಲೂ ಪ್ರವೇಶಿಸಿವೆ. ಒಂದರ್ಥದಲ್ಲಿ ಕ್ಯಾಸೆಟ್ ನಮ್ಮ ಬದುಕಿನ ಅವಿಭಾಜ್ಯ ಅಂಗವಾಗಿದೆ ಯೆಂದೇ ಹೇಳಬೇಕು.

ಕ್ಯಾಸೆಟ್‌ಗಳು ಮೊದಮೊದಲು ಮನೋರಂಜನೆಯ ಮಾಧ್ಯಮಗಳಾಗಿ ಹೊರ ಬಂದವು. ಅವು ಕೇವಲ ಕೆಲವೇ ಜನರನ್ನು ಸಂಪ್ರೀತಗೊಳಿಸಿದವು. ಬರಬರುತ್ತ ಅವುಗಳಲ್ಲಿ ಆಧ್ಯಾತ್ಮಿಕ ಬದುಕಿನ ಹೊಸ ಹೊಸ ಪ್ರಯೋಗಗಳು ಕಾಣ ಲಾರಂಭಿಸಿದವು. ಈ ಕ್ಯಾಸೆಟ್‌ಗಳು ಸಮಾಜದ ಅನೇಕರನ್ನು ಆನಂದಗೊಳಿಸಿದವು. ಅಂತಹ ಆನಂದ ಮತ್ತು ಆಹ್ಲಾದ ಭರಿತವಾದ ಕ್ಯಾಸೆಟ್‌ಗಳಲ್ಲಿ ಕೀರ್ತನ. ಪ್ರವಚನ ಮಾಧ್ಯಮದ ಕ್ಯಾಸೆಟ್‌ಗಳು ಮೊದಲೆನಿಸಿವೆ.

ಉತ್ತರ ಕರ್ನಾಟಕದ ಹೆಸರಾಂತ ಕೀರ್ತನ-ಪ್ರವಚನಕಾರರಲ್ಲಿ ತಿಕೋಟಾದ ದಾನಪ್ಪ ಜತ್ತಿಯವರ ಹೆಸರು ಅಗ್ರಪಂಕ್ತಿಯಲ್ಲಿದೆ. ಈ ಕ್ಷೇತ್ರದಲ್ಲಿ ದಾನಪ್ಪನವರದು ಒಂದು ಶೈಲಿಯಾಗಿದೆ. ಅದು ಒಂದು ಮಾದರಿಯೂ ಎನಿಸಿದೆ. ಕ್ಯಾಸೆಟ್ ಮೂಲಕ ಕೀರ್ತನ ಪ್ರಸಾರ ಮಾಡುವ ಕೀರ್ತನಕಾರರಲ್ಲಿ ದಾನಪ್ಪನವರದು ಒಂದು ದಾಖಲೆ ಎನಿಸಿದೆ.

ಇದುವರೆಗೆ ದಾನಪ್ಪ ಜತ್ತಿಯವರ ಎರಡು ಕೀರ್ತನ ಕ್ಯಾಸೆಟ್‌ಗಳು ಹೊರಬಂದಿವೆ. ಒಂದು : ಶಿವನ ಆಣೆ. ಎರಡು : ಕೋಳೂರು ಕೊಡಗೂಸು. ಈ ಎರಡೂ ಕ್ಯಾಸೆಟ್‌ಗಳು ನವರಸಭರಿತವಾದ ಕೀರ್ತನ ಕ್ಯಾಸೆಟ್‌ಗಳೆಂದು ಹೇಳಬಹುದು.

**ಶಿವನ ಆಣೆ :**

ಅರವತ್ಮೂರು ಪುರಾತನರಲ್ಲೊಬ್ಬರಾದ ಶಿವಶರಣ 'ತಿರುನೀಲಕಂಠ'ರ ಕಥೆಯನ್ನಾಧರಿಸಿ ತಯಾರಿಸಿದ ಕೀರ್ತನೆ 'ಶಿವನ ಆಣೆ' ಎನ್ನುವಂಥದು. ಶರಣ ಶ್ರೇಷ್ಠರಾದ ತಿರುನೀಲಕಂಠರು ನಿತ್ಯ ಪೊನ್ನಾಂಬಲೇಶ್ವರ ದೇವಸ್ಥಾನಕ್ಕೆ ಹೋಗಿ ಬರುತ್ತಿದ್ದಾಗೊಮ್ಮೆ 'ವಿಲಾಸಿ' ಎಂಬ ದೇವದಾಸಿಯ ಎಂಜಲು ತಲೆಯ ಮೇಲೆ

ಬೀಳುತ್ತವೆ. ಆಕೆ ಶರಣರಲ್ಲಿ ಕ್ಷಮೆ ಕೇಳುತ್ತಾಳೆ. ಆ ಘಟನೆಯಿಂದ ಬೇಸರಿಸಿ ಕೊಂಡು ಶರಣರು ವಿಲಾಸಿಯ ಮನೆಯಿಂದ ಬರುವುದನ್ನು ನೋಡಿದ ಶರಣರ ಧರ್ಮಪತ್ನಿ ಸತ್ಯವತಿ ದೇವದಾಸಿಯ ಮನೆಯಿಂದ ಬಂದ ತನ್ನ ಗಂಡನ ವರ್ತನೆ ಯನ್ನು ಕಂಡು ಕುಪಿತಳಾಗಿ ತನ್ನನ್ನು ಮುಟ್ಟಿದರೆ 'ಶಿವನ ಆಣೆ' ಎಂದು ಆಣೆಯನ್ನಿಡುತ್ತಾಳೆ. ಈ ದಂಪತಿಗಳ ವಿರಸಮಯ ಬದುಕನ್ನು ಕಂಡು ಸಾಕ್ಷಾತ್ ಪರಶಿವನೇ ಅವರಲ್ಲಿಗೆ ಬಂದು ಆಣೆಯಿಂದ ಮುಕ್ತಗೊಳಿಸುತ್ತಾನೆ. ಇದು 'ಶಿವನ ಆಣೆ'ಯ ಕಥೆ.

ಈ ಕಥೆಯಲ್ಲಿ ದಾಸಪ್ಪನವರು ತುಂಬ ರಸಭರಿತವಾಗಿ ಕೀರ್ತನವನ್ನು ಹೆಣೆದಿದ್ದಾರೆ. ತನ್ನ ತಪ್ಪನ್ನು ಕ್ಷಮಿಸಬೇಕೆಂದು ವಿಲಾಸಿ ತಿರುನೀಲಕಂಠರ ಪಾದಕ್ಕೆ ಬಿದ್ದು ಬೇಡಿಕೊಳ್ಳುವ ಸನ್ನಿವೇಶ ಹೃದಯವನ್ನೇ ಹಿಂಡುತ್ತದೆ. ನಿಜಕ್ಕೂ ಆ ವಿಲಾಸಿಯೇ ದಾಸಪ್ಪನವರ ಕಂಠದಲ್ಲಿ ನಿಂದು ಕರುಣೆಯಿಂದ ಕೇಳುವಂತಿದೆ ಆ ದೃಶ್ಯ. ಕರುಣಾ ರಸಭರಿತವಾದ ಸಂಗೀತ. ಸನ್ನಿವೇಶಕ್ಕೆ ಪೂರಕವಾಗಿದೆ; ಹೃದಯವೇದ್ಯವಾಗಿದೆ. ಶೀಲ ಚಾರಿತ್ರ್ಯದ ಮೇಲೆ ಶಂಕೆ ತಾಳುವ ಈ ಕಥೆ ಶ್ರೋತೃಗಳನ್ನು ಮಂತ್ರ ಮುಗ್ಧರನ್ನಾಗಿಸುತ್ತದೆ.

**ಕೋಳೂರು ಕೊಡಗೂಸು :**

ಮಗುವಿನ ಮುಗ್ಧ ಭಕ್ತಿಗೆ ಸಾಕ್ಷಾತ್ ಪರಶಿವನೇ ಒಲಿದು ಮಗುವನ್ನು ತನ್ನಂತೆ ಮಾಡಿಕೊಂಡ ಮುಗ್ಧ ಭಕ್ತಿಯನ್ನು ಬಿಂಬಿಸುವ ಕಥೆಯೇ 'ಕೋಳೂರು ಕೊಡಗೂಸು'. ಈ ಕಥೆಯಲ್ಲಿ ಮಗುವಿನ ಮುಗ್ಧತೆ ಪ್ರತಿಬಿಂಬಿತವಾಗಿದೆ. ಶಿಶು ಶಿವನೊಂದಿಗೆ ಒಡ್ಡುವ ಸವಾಲು ಪರಿಣಾಮಕಾರಿಯಾಗಿದೆ. ಒಟ್ಟಾರೆ ಕಥೆಯನ್ನು ಮನೋಜ್ಞವಾಗಿ ಕೀರ್ತನಕಾರರು ಚಿತ್ರಿಸಿದ್ದಾರೆ.

ಈ ಎರಡೂ ಕ್ಯಾಸೆಟ್‌ಗಳಲ್ಲಿ ಶಾಸ್ತ್ರೀಯ ಸಂಗೀತವನ್ನೇ ಪ್ರಧಾನವಾಗಿ ಆಯ್ಕೆ ಮಾಡಿಕೊಂಡಿದ್ದಾರೆ. ಕೀರ್ತನಕಾರರು ಕೇವಲ ಕೀರ್ತನಕಾರರಾಗಿರದೆ ಸಂಗೀತವನ್ನು ಬಲ್ಲವರಾಗಿದ್ದಾರೆ. ಅಂತೆಯೇ ಅವರ ಈ ಕೀರ್ತನೆಗಳು ಜನಪ್ರಿಯವಾಗಿವೆ. ಜನ ಸಾಮಾನ್ಯರನ್ನು ಸುಲಭವಾಗಿ ಸೆರೆಹಿಡಿಯಬಲ್ಲ ಸಾಮರ್ಥ್ಯ ಈ ಕೀರ್ತನೆಗಳಿಗಿದೆ. ಅಂತೆಯೇ ಅವು ಉತ್ತರ ಕರ್ನಾಟಕದ ಕೀರ್ತನ ಕ್ಯಾಸೆಟ್‌ಗಳಲ್ಲಿ ಜನಪ್ರಿಯವಾಗಿವೆ ಎಂಬುದರಲ್ಲಿ ಸಂದೇಹವಿಲ್ಲ.

ಕೀರ್ತನಕ್ಕೆ ಮುಖ್ಯವಾಗಿ ಬೇಕಾದವುಗಳು ಸಾಹಿತ್ಯ ಮತ್ತು ಸಂಗೀತ. ಅವೆರಡೂ ಈ ಕೀರ್ತನಗಳಲ್ಲಿ ಸಮೃದ್ಧವಾಗಿವೆ. ದಾನಪ್ಪನವರ ವಾಣಿ ಹಾಗೂ ಪಾಣಿ ಎರಡೂ ಶುದ್ಧವಾಗಿವೆ, ಪರಿಶುದ್ಧವಾಗಿವೆ.

ದಾನಪ್ಪನವರ ನಿರೂಪಣಾ ಸಾಮರ್ಥ್ಯ ಮಾರ್ಮಿಕವಾಗಿದೆ. ಕೀರ್ತನಕಾರರಿಗೆ ಮುಖ್ಯವಾಗಿ ಬೇಕಾದುದು ಅದುವೇ. ಅದು ಅವರಲ್ಲಿ ಸಮೃದ್ಧವಾಗಿದೆ. ಕ್ಯಾಸೆಟ್ ಮೂಲಕ ಶರಣರ ತತ್ತ್ವ ಸಿದ್ಧಾಂತವನ್ನು ಕೀರ್ತನ ಮಾಧ್ಯಮದಲ್ಲಿ ಪ್ರಚುರ ಪಡಿಸುತ್ತಿರುವ ದಾನಪ್ಪ ಜತ್ತಿಯವರ ಕಾರ್ಯ ಶ್ಲಾಘನೀಯವಾಗಿದೆ.

ಸಂಗೀತ ಕಛೇರಿಗಾಗಲೀ ಕೀರ್ತನ ಕಾರ್ಯಕ್ರಮಕ್ಕಾಗಲೀ ಮುಖ್ಯವಾಗಿ ಬೇಕಾದುದು ಸಾಥಿದಾರರ ಪರಿಪಕ್ವತೆ. ನುರಿತ ಸಂಗೀತ ಕಲಾವಿದರೊಂದಿಗೆ ಕೀರ್ತನ ಸಂಪದ್ಭರಿತವಾಗಿರುತ್ತದೆಯೆಂಬುದರಲ್ಲಿ ಎರಡು ಮಾತಿಲ್ಲ. ದಾನಪ್ಪನವರ ಕೀರ್ತನೆಗೆ ಹಾರ್ಮೋನಿಯಂ ಸಾಥಿ ನೀಡಿ ಸಹಗಾಯನಕ್ಕೆ ಸಹಕರಿಸಿದವರು ಕಲ್ಯಾಣದ ಉತ್ತಮ ಗಾಯಕ ಶ್ರೀ ಕೆ. ಕೆ. ಮಹಾದಾನಶೆಟ್ಟಿ ಅವರು. ಅವರು ಹಳೆಯ ತಲೆಮಾರಿನ ನುರಿತ ಸಂಗೀತಗಾರರು. ಶುದ್ಧ ಸಂಗೀತವನ್ನು ಶ್ರದ್ಧೆಯಿಂದ ಸಿದ್ಧಿಸಿಕೊಂಡವರು. ಅವರ ಹಾಡುಗಾರಿಕೆ ಕೇಳಬೇಕಾದಂತಹುದು. ಅವರಿಗೆ ತಬಲಾ ನುಡಿಸಿದವರು ಶ್ರೀ ಗಣೇಶ ಕಮ್ಮಾರರು. ಅವರೂ ಉತ್ತಮ ತಬಲಾವಾದಕರು. ಅವರೀರ್ವರ ಸಾಥ ಸಂಗತ ಕೀರ್ತನೆಗೆ ಮೆರಗನ್ನು ನೀಡಿದೆ.

# ದುಗ್ಧ ಮನಸ್ಸಿನ ಮುಗ್ಧ

## ಡಾ. ಶಿವಕುಮಾರಸ್ವಾಮಿ ಮಾಲಗಿತ್ತಿಮಠ

ಅಂತರಂಗದ ಭಕ್ತಿ ಬಹಿರಂಗದಲಿ ಬಂದು
ಭಕ್ತನಾಗಿಹುದಿಲ್ಲಿ ತಿಕೋಟಿಯಲ್ಲಿ
ದಾನಪ್ಪ ಜತ್ತಿ ಎಂದೆಂಬ ಪೆಸರಂ ಪೊತ್ತು
ಪರಿಮಳವ ಬೀರುತಿದೆ ಜನಕೋಟಿಯಲ್ಲಿ

ತಾಯಿ ದಾನೇಶ್ವರಿಯ ವರಪ್ರಸಾದ ಮಹಿಮೆ-
ಯಿಂ ಜನಿಸಿ ಬಂದಾತ ದಾನಪ್ಪ ಜತ್ತಿ
ಆ ತಾಯ ಹೆಸರನ್ನೇ ತಾಯಿ ಮಗುವಿಂಗಿಟ್ಟು
ಮುದವ ಪಡೆದಳು ಮೂಸಿ ಮಗನನ್ನೆತ್ತಿ

ಜ.ಚ.ನಿ. ಗುರುವಿನಿಂ ಶಿವದೀಕ್ಷೆಯಂ ಪಡೆದು
ಗುರು ಕರ ಸಂಜಾತನೆನಿಸಿದಾತ
ಗುರು ಲಿಂಗ ಜಂಗಮವೆ ಪ್ರಾಣವೆಂದರಿದು ಸದ್
ಭಕ್ತನಾಗಿಯೆ ಬಾಳಿ ಬದುಕಿದಾತ

ಮುಗ್ಧ ಮಗುವಿನ ಕಳೆಯು ಮಿಂಚುತಿದೆ ಮೊಗದಲ್ಲಿ
ವಂಚನೆಯು ಎನಿತಿಲ್ಲ ಹೃದಯದಲ್ಲಿ
ದಗ್ಧವಾಗಿಹವಿಲ್ಲಿ ಚಪಲ ಚೈತ್ರ್ಯಾದಿಗಳು
ದುಗ್ಧ ಮನಸ್ಸಿನ ಮುಗ್ಧ ಜತ್ತಿಯಲ್ಲಿ

ನುಡಿವಂತೆ ನಡೆಯುಂಟು ನಡೆಯಂತೆ ನುಡಿಯುಂಟು
ಒಡಲೊಳಗೆ ಎನಿತಿಲ್ಲ ಅಹಮಿಕೆಯ ಅಂಶ
ಕಡು ಚೆಲುವು ಒಳ-ಹೊರಗೆ ತುಂಬಿ ತುಳುಕುತ್ತಿಹುದು
ಅದು ಆತನಂಗಕ್ಕೆ ಹೊಳೆವಾವಸಂತ

ಸರ್ವ ಧರ್ಮದ ತತ್ತ್ವವಭ್ಯಸಿಸಿ ಸಂಗ್ರಹಿಸಿ
ಚಾತುರ್ಯದಿಂದ ಮೇಳಾಪಿಸಿ
ಮಗು ಮುದುಕ ಸಾಮಾನ್ಯರೆಲ್ಲರಿಗೂ ತಿಳಿವಂತೆ
ಹೇಳ್ವ ಕಲೆಯಲಿ ಈತ ಹೆಸರುವಾಸಿ

ತಿಮ್ಮನೆಂಬವನೊಬ್ಬ ದೃಷ್ಟಾರ ಜೊತೆಗುಂಟು
ಸಂದರ್ಭಕವನ ಕಥೆ ಹೇಳಿ ನಗಿಸಿ,
ತಿಳಿಯದವರಿಗೂ ಸ್ಪಷ್ಟ ತಿಳಿವಂತೆ ಶ್ರಮವಹಿಸಿ
ವಿವರಿಸುವನದನಾತ್ಮ ತತ್ತ್ವಕ್ಕೆ ಹೋಲಿಸಿ

ಪ್ರವಚನ ಕಲೆಯಲ್ಲಿ ಸಿದ್ಧ ಹಸ್ತನು ಈತ
ಶಿವನೊಲುಮೆ ಇವನಿಗಿದು ದೈವದತ್ತ
ವರ್ಣನೆಗೂ ಮೀರಿರುವ ನಿಲುವೀತನಲ್ಲಿಹುದು
ಹೃದ್ ಹರಿಕೆಯೇ ನಾವು ಅವಗೀವ ಮೊತ್ತ

## ಶರಣ ಸಾಧಕ

### ರೇವತಿ ಉಪ್ಪಿನ

ವೈಜ್ಞಾನಿಕ ಯುಗದಲ್ಲೂ
ಆಧ್ಯಾತ್ಮಿಕತೆಯ ಅರಿವು ಮೂಡಿಸಿ
ಲೌಕಿಕ ಅಂಧಃಕಾರದಲಿ
ನಿದ್ರಿಸುತಿಪರನು ಎಚ್ಚರಿಸಿ
ಪಾರಮಾರ್ಥದತ್ತ ನಡೆಯಲು ಕಲಿಸಿ
ಭಕ್ತಿರಸ, ತಿಳಿಹಾಸ್ಯ ಸಾಹಿತ್ಯ ಸಮಾಗಮ
ಬಾಳು ಹಸನಾದ ತ್ರಿವೇಣಿ ಸಂಗಮ
ಬರದ ನೆಲದಲೂ ಚಿಗುರೊಡೆದು ಪಸರಿಸಿಹುದು
ಚೇತನವು ಸೆಲೆಯಾಗಿ ಹರಡಿದುದು
ಅನುಭವವಾಣಿ ಸುಗಂಧ ಸುಮವಾಗಿ
ಕೀರ್ತನ, ಪುರಾಣ, ಪ್ರವಚನಕಾರ
ಕರ್ನಾಟಕದಲ್ಲೆಲ್ಲ ಸಂಚರಿಸಿದ ಹರಿಕಾರ
ಸುತ್ತಲಿನ ಜಗವೆಲ್ಲ ಸತ್ಯ-ಶಿವ-ಸುಂದರ
ಶ್ರಮ ಸಾಧನೆಯದು ನಿತ್ಯ ನಿರಂತರ
ದಾನಶೂರರಿಗುಂಟು ಹೆಸರು ದಾನಪ್ಪನೆಂದು
ವಾಗ್ದೇವಿ ಮಂದಿರದಲಿ ಪಡೆದ ವರದಾನ
ಹಂಚಿಕೊಂಡರೆಲ್ಲರಲ್ಲಿ ಅನುಭವಜ್ಞಾನ
ನೀಡಿದ ಅನವರತ ವಾಗ್ಝರಿಯ ದಾನ
'ಅರಿದೊಡೆ ಶರಣ ಮರೆತರೆ ಮಾನವ'
ಸತ್ಯನುಡಿ ಸಂದೇಶ ನೀಡಿಹನು ಜಗಕೆ
ನುಡಿದಂತೆ ನಡೆನಡೆದು ಬೆಳಕು
ತಂದಿಹನು ಮನಕೆ

## ಒಂದು ಲಾವಣಿ

### ಗಂಗಾತನಯ (ಅ. ರಾ. ಜಂಬಗಿ)

ಮಹಾನುಭಾವಿ ದಿವ್ಯ ಶಿವಾನುಭವಿ ಕೀರ್ತನಕೇಸರಿ
ಶರಣ ಕಿಂಕರರಾದ ಜತ್ತಿ ದಾನಪ್ಪನ ಪಾಡೂನು ಬಾ
ಅವರು ಗೈದ ಸಾಧನೆ ನೆನೆಯುನು ಬಾ ॥

೧

ಜಿಲ್ಲಾ ವಿಜಾಪೂರ ತಿಕೋಟಾ ಗ್ರಾಮದಿ
ಜನಿಸಿ ಬಂದ ತಾಯಿ ದೊಡ್ಡಮ್ಮನುದರದಿ
ಜನಕ ಸಿದ್ರಾಮಪ್ಪ ಪೊರೆದನಕ್ಕರದಿ । ದಿವ್ಯ ಸಂಸ್ಕಾರದ ಭವ್ಯ ಭವಿಷ್ಯ
ತ್ತಿನ ದಾನಪ್ಪನ ಹೊಗಳುನು ಬಾ । ಅವರು ಗೈದ ಸಾಧನೆ ಪಾಡುನು ಬಾ ॥

೨

ವೀರಶೈವರ ಕುಡಿಯಾಗಿ ಬೆಳೆದು
ಸಾರ ಸಂಪತ್ತಿನ ಸಿರಿಯನು ಸವಿದು
ಘೋರ ಕಷ್ಟಗಳ ಧೈರ್ಯದಿ ತುಳಿದು
ಧೀರಸತ್ಯ ನಿಷ್ಠೂರಿಯಾದ ದಾನಪ್ಪನ ಪಾಡೂನು ಬಾ ।
ಅವರು ಗೈದ ಸಾಧನೆ ಹೊಗಳುನು ಬಾ ॥

೩

ಕಲಾ ಸಾಧನೆ ತಪವನು ಗೈದು
ಕಲಾ ಶಾರದೆ ಸೇವೆಗೆ ಸವಿದು
ಭಲೆ ಎನಿಸಿಕೊಂಡ ರಂಗಭೂಮಿಯು
ಬಾಲನ ನೋಡುನು ಬಾ । ಅವರು ಗೈದ ಸಾಧನೆ ಪಾಡೂನು ಬಾ ॥

೪

ಚಿತ್ರರಂಗದಿ ಬೆಳಗಿದನೀತಾ
ಚೈತ್ರ ವಸಂತದ ತೇಜ ಪೂರಿತಾ
ಪಿತೃ ಸಂಸ್ಕಾರದ ಕುಡಿಯಾಗಿ ನಿಂತಾ । ಮಾತೃದೇವಿ ದೊಡ್ಡಮ್ಮ ತಾಯಿ
ಯ ಪುತ್ರನ ನೆನೆಯುನು ಬಾ । ಅವರು ಗೈದ ಸಾಧನೆ ಹಾಡೂನು ಬಾ ॥

೫

ಶಿವ ಕೀರ್ತನೆಯು ನಿಧಿ ತಾನಾಗಿ
ಕಾಲಕಥಾಕ್ಷೇಪ ಮಧು ಸುಧೆಯಾಗಿ
ಸದ್ಧರ್ಮ ಬೀರುವ ಸುರತರುವಾಗಿ । ಶಿವಯೋಗ ಸಂಪದ ನಿರುತ
ಸಾರುವ ಯೋಗಿಯು ನೆನೆಯುನು ಬಾ ।
ಅವರು ಗೈದ ಸಾಧನೆ ಪಾಡೂನು ಬಾ ॥

೬

ಕನ್ನಡಾಂಬೆಯು ಕುಡಿ ತಾನಾಗಿ
ನಾಡನುಡಿ ಹಿರಿ ಸಂಪತ್ತಿಗಾಗಿ
ಸದಾ ದುಡಿಯುವ ಧೀರ ದೇಶಭಕ್ತರಾದ
ದಾನಪ್ಪನ ನೆನೆಯೂನು ಬಾ । ಅವರು ಗೈದ ಸಾಧನೆ ಪಾಡೂನು ಬಾ ॥

೭

ಸದಾ ಹಸನ್ಮುಖಿ ಶಿವತೇಜ ಭರಿತಾ ।
ಮಿತ್ರ ಕಳತ್ರ ಬಂಧು ಬಾಂಧವ ಪ್ರೀತಾ
ಅಜಾತ ಶತ್ರುವೆನಿಸಿ ಮೆರಿಯುತಾ
ಖ್ಯಾತ ಬನಪಟ್ಟಿ ಕವಿ ಗಂಗಾತನಯ ಅಪ್ಪಣ್ಣನಾತ್ಮೀಯ
ಮಿತ್ರನ ನೆನಿಯೂನು ಬಾ । ಅವರು ಗೈದ ಸಾಧನೆ ಪಾಡೂನು ಬಾ ॥



ಹಾಸ್ಯದಲಿ ಇವನೊಬ್ಬ ಅಭಿನವ ಬೀಚಿ
ಕಥೆ ಕಾವ್ಯಗಳೆರಡರಲ್ಲಿ ಇವ ಸವ್ಯಸಾಚಿ
ಅಮೂಲ್ಯ ಕಾಣಿಕೆಯನಿತ್ತು ಶಾರದೆಗೆ
ಭಾವಸೌರಭಪರಳು ಮುಡಿಸಿದನು ಮುಡಿಗೆ

* ಶಂ. ಗು. ಬಿರಾದಾರ

ಸಾಹಿತ್ಯ ಹೊರಟಿತ್ತು ಸಂಗೀತ ಶ್ರವಣಕ್ಕೆ
ಸಂಗೀತ ಸಾಗಿತ್ತು ಸಾಹಿತ್ಯ ದರ್ಶನಕೆ
ಸಾಹಿತ್ಯ ಸಂಗೀತದೊಡನೆ ಅಭಿನಯವಾಂತು
ಅನ್ವರ್ಥ 'ದಾನಪ್ಪ'ಗಾಯ್ತು ಸಾರ್ಥಕವಿಂತು

* ಪ್ರೊ. ಪಿ. ವ್ಹಿ. ವಜ್ರಮಟ್ಟಿ (ಮೇಘಮಿತ್ರ)

ರಂಗಭೂಮಿಯ ಮೇಲೆ ಕುಣಿದಿಹನು ಈತ
ಆಕಾಶವಾಣಿಯಲ್ಲಿ ಮಾಡುವನು ಪಾತ್ರ
ವ್ಯಾಪಾರ ಮಾಡಿದರು ದಾನಪ್ಪ ಬೇರೆ
ಸಾಹಿತ್ಯ ಶಾರದೆಗೆ ಉಡಿಸಿಹನು ಸೀರೆ

* ಜಿ.ಎಸ್. ಅನ್ನದಾನಿ

ಕನ್ನಡದ ಕುವರ ದಾನಪ್ಪ ಜತ್ತಿ
ಅರ್ಪಿತವು ಕನ್ನಡಕೆ ನಿನ್ನಮರ ಕೃತಿ
ಕನ್ನಡಾಂಬೆಯ ಕೃಪೆಯು ನಿನ್ನ ಮೇಲಿರಲಿ
ನಿತ್ಯ ನೂತನ ಕೃತಿಯು ನಿಮ್ಮಿಂದ ಬರಲಿ

* ಈರಯ್ಯ ಕೆ. ಕಣಬೂರ

ಸಾಹಿತ್ಯ, ಸಂಗೀತ, ಕಲೆಯು ಭಾವ ಸಂಗಮ
ಪ್ರತಿಭಾ ಲತೆಯ ಪರಿಮಳ ಕುಸುಮ
ವ್ಯಾಪಾರ ಮಾಡುವನು ದಾನಪ್ಪ ಶೆಟ್ಟಿ
ಸಾಹಿತ್ಯ ಗರಡಿಯಲಿ ಇವ ಶ್ರೇಷ್ಠ ಜಟ್ಟಿ

* ಎಂ. ಆರ್. ಹುಲಗಬಾಳಿ

ವ್ಯಾಪಾರಿ ತೋಟದಲ್ಲಿ ಬೆಳದಿಹುದು ಈ ಹೂವು
ಸಾಹಿತ್ಯ ಸೌರಭವ ಸೂಸುವ ಈ ದಿವ್ಯ ಹೂವು
ಸಾಹಿತಿಗಳ ಮನಸೆಳೆದ ಸ್ನೇಹ ಪಾಶದ ಹೂವು
ಶಾಂತಿ, ಕಾಂತಿ, ಪ್ರೇಮ, ಮತಿ, ವಿನಯವೆಂಬ ಐದಳದ ಹೂವು
ಗಾನದಿಂದ ಗುಂಜಾರವ ಗೈವ ಭ್ರಮರ ಕಾಂತಿಯ ಹೂವು
ರಂಗ ಮಂಟಪದೊಳು ನಟನೆಗೈದ ನಾಟ್ಯ ಸೌರಭದ ಹೂವು
ಸ್ನೇಹರತ್ನ ಶ್ರೀ ದಾನಪ್ಪ ಜತ್ತಿಯವರೇ ಆ ಹೂವು

* **ಕಲ್ಮೇಶಕಂದ**

# ಮುತ್ತಿನ ಹಾರ

**ಪ. ಗು. ಸಿದ್ದಾಪೂರ**

ನಗೆಮೊಗದ ನಟರಾಜ
ಕಂಗಳಲಿ ಶಶಿತೇಜ
ತನು ಮನವು ತಣಿಯುವುದು ಆಡಿದರೆ ನೀನು
ಸಂಗೀತ ಸಾಹಿತ್ಯ
ಸಾಗರದಿ ನೀ ನಿತ್ಯ
ಮಿಂಚು ಕಲೆ ನೆಲೆಕಂಡ ಕಲೆಗಾರ ನೀನು

*

ತಿಮ್ಮನಾ ಕತೆಗಳಲಿ
ಮುಮ್ಮಿಕ್ಕಿ ಹರಿಯುವುದು
ಅಲ್ಲಲ್ಲಿ ಆಗಾಗ ಹಾಸ್ಯದಾ ಹೊನಲು
ನಿನ್ನ ನಟನೆಯ ನೋಡಿ
ಬೆರಗಾದೆ ನಾನೋಡಿ
ಹಣ್ಣಾಗಿ ಹೋಗಿಹುದು ನಕ್ಕೆನ್ನ ಒಡಲು

*

ಶರಣ ವಚನದ ಸಾರ
ಆರಗಿಸಿದ ಸವಿಗಾರ
ಕನ್ನಡದ ಓ ಕುವರ ನುಡಿಯನಿತು ಇಂಪು
ದಾನಪ್ಪ ಎಂದೊಡನೆ
ಏನಪ್ಪ ! ಕಲೆಗಾರ !!
ಅಚ್ಚರಿಯ ನುಡಿ ಮಾತು ಎಲ್ಲೆಲ್ಲು ಕಂಪು

*

ಕಸ್ತೂರಿ ಕನ್ನಡವ
ಬಿತ್ತರಿಸು ಗಡಿಯಾಚೆ
ಕೀರ್ತನೆಯ ಮಾರ್ದನಿಯು ಅಲೆಯಾಗಿ ಬರಲಿ
ವಚನ ಸುಧೆ ಉಣಿಸುತ್ತ
ಜನಮನವ ತಣಿಸುತ್ತ
ಶತಮಾನ ದಾಟೆಂದು ಹಾಡವೆನು ಲಾಲಿ

ಐವತ್ತೈದು ತಲುಪಿರುವ
ಅಣ್ಣಾ ನಿನಗರ್ಪಿಸುವೆ
ಸಣ್ಣ ಮುತ್ತಿನಹಾರ ಈ ಕವನ ಕೊಡುಗೆ
ರನ್ನಮಣಿ ನೀನಾಗು
ಚಿನ್ನದಾ ಎಳೆಯಾಗು
ನಮ್ಮನ್ನು ಪೊರೆವ ಕನ್ನಡಮ್ಮನ ಮುಡಿಗೆ

## ಜಂಬುನಾಥ ಕಂಚ್ಯಾಣಿ

ಧನ್ಯ ಧನ್ಯ ಜ್ಞಾನ ದಾನಿ
ಕರ್ಣ ಮಧುರ ನಿನ್ನ ವಾಣಿ
ಅಷ್ಟದಿಶೆಗೆ ನಿನ್ನ ಖ್ಯಾತಿ
ಬೆಳಗುತಿರುವೆ ಧರ್ಮಜ್ಯೋತಿ

ಶರಣ ತತ್ತ್ವ ಪಥವ ತುಳಿದು
ವಿಷಯ ಸುಖದ ಹಂಗು ಹರಿದು
ಅಲೆಯುತಿರುವಿ ಊರು ಕೇರಿ
ತೋರಲೆಂದು ನಾಕದಾರಿ

ನಿತ್ಯ ಬೋಧೆ ಸತ್ಯಕರ್ಮ
ನುಡಿಗೆ ತಕ್ಕ ನಡೆಯೆ ಧರ್ಮ
ಬ್ರಹ್ಮರಾಣಿ ಕುಣಿಯುತಿರಲಿ
ಸದಾ ನಿನ್ನ ಜಿಹ್ವೆಯಲ್ಲಿ

ನಾಟ್ಯ ಕಲೆಯು ಜೀವದುಸಿರು
ನವಿರು ಹಾಸ್ಯ ಕಲೆಗೆ ಕುಸಿರು
ಜನರ ಮನದಿ ಮೂಡಿನಿಂತ
ನೀನೆ ನಿಜದಿ ಭಾಗ್ಯವಂತ

ಬಾಳ ಶರಧಿ ಈಜಿ ಬಂದೆ
ಎಡರು-ತೊಡರು ಜಯಿಸಿ ನಿಂದೆ
ಕಷ್ಟ-ಸುಖವು ಸಮವು ಎಂದೆ
ಇರುಳು ಕಳೆದು ಬೆಳಕು ಕಂಡೆ

ಭಕುತನೆದೆಯು ಮಿಡಿವ ಕಲೆಗೆ
ಈಶ ಸೇವೆಗೈದ ನಿನಗೆ
ಅರ್ಪಿಸುವೆವು ಕುಸುಮವಿದನು
ಅಭಿನಂದನ ಗ್ರಂಥವನ್ನು

# ಬದುಕೇ ಸಾರ್ಥಕ

**ಪ್ರೊ. ಬಿ. ಕೆ. ನಂದನೂರ**

ಮಾನವನ ಮನೋಭೂಮಿ
ಯಲ್ಲಿ ಸದ್ಭಾವನಾ
ಬೀಜ ಬಿತ್ತಿ
ಭ್ರಾಂತಿಯ ಕಳೆ ಕಿತ್ತಿ
ಹುಲುಸು ಬೆಳೆಯೊಂದಿಗೆ
ಮುಗಿಲುದ್ದ ಬೆಳೆದಿರುವ ಜತ್ತಿ
ಭ್ರಾಮಕ ಸಂಪತ್ತಿನ ಕೆಸರಿನಿಂದ
ನಾಲ್ಕು ಗೋಡೆಗಳ ಮಧ್ಯದ
ಕತ್ತಲೆಯಿಂದ
ಜಗದಗಲ, ಮುಗಿಲಗಲದ
ಅರಿವು ಮೂಡಿಸಿ
ಸಾಗರಾಳದ ಮುತ್ತಿನ
ಕಾಂತಿ ತೋರಿಸಿ
ನಡೆ ನುಡಿಗಳಲಿ ಸಾಮರಸ್ಯ ಬೆರಸಿ
ಪುರಾಣ–ಪ್ರವಚನ–ಕೀರ್ತನೆ
ಕಲೆ-ಸಾಹಿತ್ಯದ ಜೇನು ಹೊಳೆಯಲಿ ಮಿಯಿಸಿ
ಛಿದ್ರಗೊಂಡ ಹೃದಯದಲ್ಲಿ
ಮಾನವೀಯ ಹೂ ಅರಳಿಸಿ
ವಾಸ್ತವತೆಯ ಅರ್ಥ ಬಿಡಿಸಿದ
ಅವರ ಬದುಕೇ ಸಾರ್ಥಕ
ಸನ್ಮಾರ್ಗದ ಪ್ರತೀಕ !

# ಮಹಾಶಿವಶರಣ

## ವೇ. ವಿರೂಪಾಕ್ಷಕವಿ ಹಿರೇಮಠ

ಅಣ್ಣ ಬಸವರ ತತ್ವ ಮುಕ್ತಿಗೆ ಸೋಪಾನ
ಭಕ್ತಿಗೆ ಮೂಲಾಧಾರ ಚೆನ್ನಬಸವರ ವಚನ
ಮುನ್ನ ಶರಣರ ಮಾರ್ಗ। ಭವಪಾಶ ಪರಿಹಾರ
ಚೆನ್ನ ದಾನೇಶ ನೀನೇ ಮಹಾಶಿವಶರಣ
ಸದ್ಭಾವ ಪರಿಪೂರ್ಣ ॥

ವೀರಶೈವಾಚಾರ ತತ್ವವನು ನೀ ತಿಳಿಸಿ
ಸದ್ಭಾವದಮೃತ ಜನಕೋಟಿಗೆ ಉಣಿಸಿ
ಕರುಣಾಳು ಅನುಭಾವಿ ದಾನೇಶ ನೀನಿಂದು
ಕೀರ್ತಿಯನು ಪಡೆದೆ ಮಹಾಶರಣನೆಂದು ॥

ಅಣ್ಣ ಅಕ್ಕನ ವಚನ ಬಿಚ್ಚಿ ನೀ ಹೇಳಿದಿ
ಜನಮನಕೆ ಸನ್ಮಾರ್ಗದ ಬೆಳಕು ತೋರಿದಿ
ಭಕ್ತಿಭಾವದಾ ಶ್ರೀಗಂಧ ತೀಡಿದಿ
ಮನುಕುಲಕೆ ಸನ್ಮಂಗಳವನು ಬೀರಿದಿ ॥

ಕೀರ್ತನೆ–ಪುರಾಣ–ಪ್ರವಚನ ಶರಧಿಯಲಿ
ಸಂಗೀತ, ಸಾಹಿತ್ಯ, ಹಾಸ್ಯದ ಹೊನಲಲಿ
ಸ್ವರ್ಗವನು ತೋರುತಲಿ
ನಿಂತಿರುವೆ ಮಾನವತೆ ತೆರದಲಿ

## ಶಿವಕವಿ (ಸಂಗಮೇಶ ಹೊಸಮನಿ)

'ಬಸವರಾಜ' ಕರೆವ ಹೆಸರು
ಶರಣರೆಷ್ಟು ಜನರು ?
'ನಾರಾಯಣ' ಇಟ್ಟ ನಾವು
ಇರುವದೆನಿತು ಉಸಿರು ! ॥ ೧ ॥

'ದಾನಪ್ಪ'ನ ಹೆಸರಿನಲ್ಲಿ
ಸಾಮ್ಯತೆ ಇಳಿದುಳಿದಿದೆ
'ಪ್ರವಚನ ಪಟು' ಎನಿಸಿದಂತೆ
ಭಕ್ತಿಯ ಸುಧೆ ಹರಿದಿದೆ ॥ ೨ ॥

'ಜತ್ತಿ' ಎಂಬ ಅಡ್ಡ ಹೆಸರು
ಜತೆಗೂಡಿದ ಬದುಕು
'ದಾನೇಶ'ನ ಬಾಳಿನಲ್ಲಿ
'ಶಾಸ್ತ್ರಿ' ಪಾತ್ರ ನಿಜರು ॥ ೩ ॥

ಮುತ್ತು ಸುರಿವ ತೆರದಿ ಮಾತು
ಎಂಥ ಗತ್ತುಗಾರಿಕೆ
ಭಕುತಿ ಜೇನು ಸುರಿವ ರೀತಿ
ಶರಣ ಜೀವ ಭಾಗ್ಯಕೆ ॥ ೪ ॥

ನುರಿತ ಭಾಷೆ, ಹರಿತ ಮಾತು
ಬೆರೆತು ಬಂದ ಸಂಭ್ರಮ
ನಾಡಿನುದ್ದ ಸಂಚರಿಸುವ
ವಚನಾಮೃತ ಪಾವನ ॥ ೫ ॥

ಕವಿ, ಗಮಕಿಯು, ವಾಗ್ಮಿ ಎನಿಸಿ
ನಾಟಕದೊಳೂ ಪಾತ್ರ
ವಿವಿಧ ಮುಖದ ಜೀವನದಲಿ
ಶರಣ ಭಾವ – ಸೂತ್ರ ॥ ೬ ॥

ಶುದ್ಧ ಸ್ನೇಹ, ಚಾರಿತ್ರ್ಯದ
ಶಿವ ಸಂಸ್ಕೃತಿ ಬೆಸುಗೆ
ಸಕ್ಕರೆಯದು ಗೊಂಬೆಯಂತೆ
ಸಿಹಿ ಜೀವನದೊಸಗೆ ॥ ೭ ॥

ತಾಳಬೇಕು ತಾಳಬೇಕು
ತಾಪತ್ರಯದಲ್ಲಿ
ತಾಳಿದವನು ಬಾಳಿಯಾನು
ಬಾಳ ಪಯಣದಲ್ಲಿ ॥ ೮ ॥

# ನಗುಮುಖದ ಮೋಡಿಗಾರ

**ಶಿ. ಅ. ದರೂರ**

ತತ್ತ್ವಕ್ಕೆ–ಜ್ಞಾನಕ್ಕೆ ಎತ್ತಣದ ಸಂಬಂಧ ?
ಜತ್ತಿಯಾ ಶ್ರೀಕಂಠ ಕೀರ್ತನದಿ ಅನುಬಂಧ
ಸತ್ಯಂ ಶಿವಂ ಸುಂದರಂ ಈ ಪದ ತ್ರಿಕೂಟಾ
ನಿತ್ಯ ಪೂಜಿಪ ಜತ್ತಿ ಹುಟ್ಟಿದ್ದೇ ತಿಕೋಟಾ

ಬೊಮ್ಮನಾ ಜಾಣ್ಮೆ ಈ ತಿಮ್ಮನಲಿ ತುಂಬಿ
ಒಮ್ಮನದಿ ಸ್ತುತಿಸುವನು ಶಾರದೆಯು ನಂಬಿ !
ಬುದ್ಧ–ಬಸವ, ಗಿರಿಜೆ–ಗೌತಮಿ ಆತ್ಮ ಒಂದೇ
ಶುದ್ಧ ವಚನದಿ ಹಾಡಿದವ ಶ್ರೀ ಜತ್ತಿ ಎಂದೇ !

ಶರಣ ಸಾಹಿತ್ಯವ ತ್ರಿಕರ್ಣದಿಂ ಓದಿ ಓದಿ !
ಹರನ ಕಿಂಕರನಾಗಿ ಕೀರ್ತನಕಿಳಿದ ಬೀದಿ ಬೀದಿ !
ಎಡಬಲದಿ ನುಡಿಸುವ ಆ ವಾದ್ಯ–ವೈದ್ಯರು !
ಹಿಡಿದು ಶೃತಿ ! ಸಂಗೀತ ನುಡಿಸಲು ಬದ್ಧರು !

ಹೊಗೆರಹಿತ ನಗುಮುಖ ದಾನಪ್ಪನಲಿ ಕಂಡೆ !
ಮಿಗಿಲಾದ ಮೋಡಿಯಲಿ ನಾ ಸಿಲುಕಿಕೊಂಡೆ !
ಚಿತ್ತದಿ ಚಿದಾನಂದ ಮೂಡಿಬರೆ ಮನಕೆ !
ಮತ್ತೊಮ್ಮೆ ಕೇಳುವ ಆತುರವು ಜನಕೆ !

## ಡಾ. ಕರವೀರಪ್ರಭು ಕ್ಯಾಲಕೊಂಡ

ತಿಕೋಟಾ ಊರಾಗ ಜತ್ತಿ ಮನೆತನದಾಗ
ಹುಟ್ಟಿ ಬಂದಾನ ದಾನಪ್ಪ
ಬಿದಗಿ ಚಂದ್ರನಂಗ ಗೆಳೆಯರ ನಡುವೆ
ಬೆಳೆದು ಬೆಳಗಿಹನಪ್ಪ

ಕಂಚಿನ ಕಂಠದಿ ಕೀರ್ತನ ಹೇಳಿ
ಮೋಡಿ ಮಾಡುವ ಗತ್ತುಂಟು
ಹೆಜ್ಜಿ ತಪ್ಪಿ ಹಾಳಾಗು ಹುಂಬರಿಗೆ
ಹಾದಿಗೆ ಹಚ್ಚುವ ಕೆಚ್ಚುಂಟು

ರಂಗಿನ ಜಗದಲಿ ಗುಂಗಿನ ಜನತೆಯು
ನಡುವೆ ನಿಂತಿಹನು ಗಟ್ಟ್ಯಾಗಿ
ಕೆಟ್ಟ ಗುಣಗಳು ಸುಟ್ಟು ಹಾಕಲು
ಕೀರ್ತನ ಕಾದಿದೆ ಕಿಚ್ಚಾಗಿ

ಚಂಚಲ ಮನಸಿಗೆ ಶಾಂತಿಯು ಕೊಡುಗೆ
ಜತ್ತಿಯು ಕೀರ್ತನದಿಂದ
ಮನದ ಮಲಿನತೆ ಮಾಯವಾಗುವುದು
ಪುರಾಣ ಪ್ರವಚನದಿಂದ

ಅಳಿಯುವ ಕಲೆಗೆ ಆಸರೆ ಕೊಟ್ಟು
ಬೆಳೆಸಿದ ಕೀರ್ತನ ಕೇಸರಿ
ಹಸುರಾಗಿ ಹಬ್ಬಲಿ ದಾನಪ್ಪ ಜತ್ತಿಯ
ಕೀರ್ತಿ ಶಿಖರದ ಐಸಿರಿ

ಶ್ರೀ ಸಾಲೇಶ್ವರ ಪ್ರಸನ್ನಃ

॥ ಚಿರಮಭಿ ವರ್ಧತಾಂ ಶ್ರೀ ಗುರುಸಿದ್ಧ ಸಂತಾನಶ್ರೀಃ ॥

ಶ್ರೀಮದ್ ಹಿಮವತ್ಕೇದಾರ ವೈರಾಗ್ಯ ಸಿಂಹಾಸನಾಧೀಶ ಪಕೋರಾಮ ಕರಕಮಲ ಸಂಜಾತ ಲಿಂಗೈಕ್ಯ ಶ್ರೀ ೧೦೦೮ ಜಗದ್ಗುರು ಗುರುಸಿದ್ಧ ಪಟ್ಟದಾರ್ಯ ಮಹಾಸ್ವಾಮಿಗಳವರ ಕೃಪಾಶೀರ್ವಾದದಿಂದ ಶ್ರೀ ೧೦೦೮ ಜಗದ್ಗುರು ಗುರುಸಿದ್ಧೇಶ್ವರ ಬೃಹನ್ಮಠ, ಗುಳೇದಗುಡ್ಡ ಇವರ ದಿವ್ಯ ಸನ್ನಿಧಾನಂಗಳಲ್ಲಿ ಶ್ರೀ ವೀರಶೈವ ಪಟ್ಟಸಾಲಿ ಸಮಾಜ, ಯುವಕ ಸಂಘ ಇವರ ಆಶ್ರಯದಲ್ಲಿ ಕೀರ್ತನ ಸಮಿತಿ ವತಿಯಿಂದ ದಿನಾಂಕ ೬-೮-೧೯೮೬ನೇ ಬುಧವಾರದಿಂದ ತಿಕೋಟಾದ ಶರಣ ದಾನಪ್ಪ ಜತ್ತಿ ಶಾಸ್ತ್ರಿಗಳಿಂದ ಪ್ರತಿಪಾದಿತ ನಾಲವತ್ತವಾಡದ ಶ್ರೀ ವೀರೇಶ್ವರ ಶರಣರ ಹಾಗೂ ಶರಣ ಚರಿತಾಮೃತದ ಕೀರ್ತನಯುಕ್ತ ಪ್ರವಚನ ದಿನಾಂಕ ೮-೯-೧೯೮೬ನೇ ಸೋಮವಾರ ಸಾಯಂಕಾಲದಂದು ಜರುಗಿದ ಮಂಗಲ ಮಹೋತ್ಸವ ಸುಸಂದರ್ಭದಲ್ಲಿ,

## "ನವ್ಯ ಕೀರ್ತನ ಕಲಾಕೇಸರಿ"

### ಎಂಬ ಬಿರುದನ್ನಿತ್ತ ಸನ್ಮಾನ ಪತ್ರ

ಸನ್ಮಾನ್ಯ ಶರಣರೇ,

ಮೃದು ವಚನಗಳೇ ಸರ್ವಜಪತಪಗಳೆಂಬರಿತ ಆಚಾರ ನಿಷ್ಠರಾದ ತಾವು ಸದಾಶಿವನ ಒಲುಮೆಗಾಗಿ ಸದ್ವಿನಯವನ್ನೇ ತಮ್ಮ ಶೀಲವಂತ ವ್ಯಕ್ತಿತ್ವದ ಬಂಡವಾಳವನ್ನಾಗಿರಿಸಿಕೊಂಡಿರುವುದು ಆದರ್ಶನೀಯ. ಪ್ರಾಚೀನ- ಅರ್ವಾಚೀನ ಸಾಹಿತ್ಯಗಳೊಂದಿಗೆ ಶರಣ ಧರ್ಮದ ವಚನ ಸಾಹಿತ್ಯವನ್ನು ಕಲೆ, ಸಾಹಿತ್ಯ, ಸಂಗೀತಗಳ ತ್ರಿವೇಣಿ ಸಂಗಮದ ಸುಸಂಸ್ಕೃತ ವಾಕ್-ಗಂಗಾ ಪ್ರವಾಹದಿಂದ ಶ್ರೋತೃಗಳ ಹೃನ್ಮನ ಭಾವಂಗಳನ್ನು ತಣಿಸಿ ಜನಾನುರಾಗದ ಮೂಲಕ ಹಿತಮಿತ ನಡೆನುಡಿಯ ಶರಣ ಧರ್ಮದ ಆದರ್ಶ ಶರಣ ಶಾಸ್ತ್ರಿಗಳಾಗಿ ಸಕಲರಿಗೆ ಲೇಸನೆ ಬಯಸುವ ವಿಶ್ವವೈಶಾಲ್ಯದ ಹೃದಯ ಹದುಳರಾದ ಧೀಮಂತ ವ್ಯಕ್ತಿತ್ವ ತಮ್ಮದು. ರಾಜಹಾಸ್ಯ, ಸಂಗೀತ, ಸಾಹಿತ್ಯಗಳೊಂದಿಗೆ ಜನಸಾಮಾನ್ಯರ ಮನವನ್ನಪಹರಿಸಿ ಧರ್ಮ ಸಂಸ್ಕಾರದ ಬಂಧನದಲ್ಲಿರಿಸುವ ತಮ್ಮ ಕೀರ್ತನ ಕಲೆಯು ನಿಜವಾಗಿಯೂ ನವ್ಯ ಹಾಗೂ ಲಭ್ಯವಾದುದು. ಈ ಕಲೆ ತಮಗೊಬ್ಬರಿಗೆ ಕರಗತವಾದುದೊಂದು ವಿಶೇಷ. ಈ ಕಾರಣಕ್ಕಾಗಿಯೇ ತಾವು ಕೇಂದ್ರ ಹಾಗೂ ರಾಜ್ಯಗಳ ಎಲ್ಲ ಬಿರುದು-ಬಾವಲಿಗಳೊಂದಿಗ ಮಾನ-ಸನ್ಮಾನಕ್ಕೆ ಅರ್ಹರು. ಈ ದಿಸೆಯಲ್ಲಿ ರಾಜ್ಯ ಸಂಗೀತ, ನೃತ್ಯ

ಅಕೆಡೆಮಿಯ ಪುರಸ್ಕಾರ ಪ್ರಶಸ್ತಿಗಳೊಂದಿಗೆ ತಮ್ಮನ್ನು ಗೌರವಿಸುವುದು ಆದ್ಯ ಕರ್ತವ್ಯವಾಗಿದೆ. ಹಾಗೆ ಮಾಡುವಲ್ಲಿ ಅಕೆಡೆಮಿಯು ತನ್ನನ್ನು ತಾನೇ ಗೌರವಿಸಿ ಕೊಂಡಂತಾಗುತ್ತದೆಂಬುವದರಲ್ಲಿ ಸಂದೇಹವಿಲ್ಲ.

ಆದ್ದರಿಂದ ತಮ್ಮ ಭಕ್ತಿ. ಪ್ರೀತಿ, ವಿಶ್ವಾಸಾರ್ಹ ಸೇವೆಗೆ ನಾವೆಲ್ಲ ತುಂಬು ಹೃದಯದ ಕೃತಜ್ಞತೆಗಳನ್ನು ಸಲ್ಲಿಸುತ್ತೇವಲ್ಲದೆ ತಮ್ಮ ಉತ್ತರೋತ್ತರ ಪ್ರಗತಿಗೆ ಜಗದ್ಗುರು ಗುರುಸಿದ್ಧೇಶನ ಹಂಗೂ ಸರ್ವೇಶ್ವರನಾದ ಸಾಲೇಶ್ವರನು ಸಕಲ ಸಮೃದ್ಧಿಯುತ ಸನ್ಮಾನಗಳೊಂದಿಗೆ ಹಾರೈಸಲೆಂದು ಪ್ರಾರ್ಥಿಸಿ ಈ ಸನ್ಮಾನ ಪತ್ರವನ್ನು ಆದರದಿಂದ ಅರ್ಪಿಸುತ್ತೇವೆ.

ತಮ್ಮ

ಶರಣ ಅಡಿವೆಪ್ಪನವರು ತಾಂಡೂರ.
ಅಧ್ಯಕ್ಷರು,
ಶ್ರೀ ವೀರಶೈವ ಪಟ್ಟಸಾಲಿ ಸಮಾಜ
ಯುವಕ ಸಂಘ, ಗುಳೇದಗುಡ್ಡ

ಶರಣ ಈಶ್ವರಪ್ಪನವರು ರಾಜನಾಳ,
ಅಧ್ಯಕ್ಷರು,
ಕೀರ್ತನ ಸಮಿತಿ

ಶರಣ ರವಿ ಗೌಡರ,
ಕಾರ್ಯದರ್ಶಿ,
ಕೀರ್ತನ ಸಮಿತಿ

॥ ಸಿರಿಗನ್ನಡಂ ಗೆಲ್ಗೆ ॥

ವಿಜಾಪೂರ ಜಿಲ್ಲೆಯ ಹೊನವಾಡ ಗ್ರಾಮದ ಮಿತ್ರಮಂಡಳಿಯ
ವತಿಯಿಂದ

ಶರಣ ಸಾಹಿತಿಗಳಾದ
ಶ್ರೀಮಾನ್ಯ ದಾನಪ್ಪ ಜತ್ತಿ, ತಿಕೋಟಾ
ಇವರಿಗೆ ಗೌರವ ಪೂರ್ವಕವಾಗಿ ಅರ್ಪಿಸುವ

# ಸನ್ಮಾನ ಪತ್ರ

ಮಾನ್ಯರೆ,

ನೀವು ನಿಮ್ಮ ಪರಮ ಗುರುಗಳಾದ ಪೂಜ್ಯ ಶ್ರೀ ಮ. ನಿ. ಪ್ರ. ಮಹಾಂತ ಸ್ವಾಮಿಗಳು, ಚಿತ್ತರಗಿ ಸಂಸ್ಥಾನಮಠ, ಇಲಕಲ್ಲ ಅವರ ಅಪ್ಪಣೆಯ ಮೇರೆಗೆ ನಾಡಿನ ಉದ್ದಗಲಕ್ಕೂ ಸಂಚರಿಸಿ, ಧರ್ಮ ಪ್ರಸಾರ ಮಹಾಕಾರ್ಯ ಮಾಡುತ್ತ ಜನಮನದ ಕಾಳಿಕೆ ಕಳೆದು ಜನರ ನೈತಿಕ, ಸಾಮಾಜಿಕ ಪ್ರಜ್ಞೆ ಬೆಳೆಯುವಂತೆ ಹಾಗೂ ಭಾವೈಕ್ಯತೆ ಮೂಡಿಬರಲು ಶ್ರಮಿಸುತ್ತಿರುವಿರಿ.

ವಿಜಾಪೂರ ಜಿಲ್ಲೆಯ ತಿಕೋಟಾ ಗ್ರಾಮದ ಜತ್ತಿ ಮನೆತನದ ಸಿದ್ರಾಮಪ್ಪ, ದೊಡ್ಡವ್ವ ಈ ದಂಪತಿಗಳ ಪುಣ್ಯ ಗರ್ಭದಿಂದ ೧೯೩೮ರಲ್ಲಿ ಜನ್ಮ ತಳೆದ ನಿಮ್ಮ ಪ್ರವಾಹ – ಕಲೆ. ಸಾಹಿತ್ಯ, ಸಾಮಾಜಿಕ. ರಾಜಕೀಯ ಮುಂತಾದ ವಿವಿಧ ರಂಗ ಗಳಲ್ಲಿ ಹರಿದುಬಂದು ಇಂದು ಪ್ರವಚನ. ಕೀರ್ತನ ವೇದಿಕೆಗೆ ಬಂದು, ಹಲವಾರು ವರ್ಷ ಕಳೆದಿದೆ. 'ಪ್ರವಚನ ಕಲಾ ಪ್ರವೀಣ' ಪಡೆದ ನೀವು ನಮ್ಮ ಹೊನವಾಡ ಗ್ರಾಮದಲ್ಲಿ ದಿನಾಂಕ ೨೩–೯–೧೯೮೨ರಿಂದ ದಿನಾಂಕ ೪–೧೦–೧೯೮೨ರ ವರೆಗೆ ಸಂಗೀತ, ಸಾಹಿತ್ಯದೊಡನೆ ಪ್ರವಚನವನ್ನು ಹೇಳಿ ನಮ್ಮ ಗ್ರಾಮದ ಜನತೆಯನ್ನು ಜಾಗ್ರತಗೊಳಿಸಿರುವಿರಿ.

ಅದರ ದ್ಯೋತಕವಾಗಿ ನಮ್ಮ ಗ್ರಾಮದ ಪರವಾಗಿ ನಮ್ಮ ಮಿತ್ರಮಂಡಳಿ ಯವರು ಇಂದು ತಮಗೆ ಸನ್ಮಾನ ಪತ್ರ ನೀಡಿ ಗೌರವಿಸುತ್ತೇವೆ.

ಪರಮಾತ್ಮನು ನಿಮಗೆ ಹೆಚ್ಚಿನ ಆಯುರಾರೋಗ್ಯವನ್ನು, ಜನಸೇವೆ ಮಾಡುವ ಶಕ್ತಿ– ಸಾಮರ್ಥ್ಯವನ್ನು ಕೊಟ್ಟು ಕರುಣಿಸಲೆಂದು ಪ್ರಾರ್ಥಿಸುತ್ತೇವೆ.

ಹೊನವಾಡ,
ದಿ. ೪–೧೦–೧೯೮೨

ಜಕ್ಕಪ್ಪ ಕುಟೆ, ರಾಮಣ್ಣಾ ಗೊರವರ,
ಮಿತ್ರಮಂಡಳಿ

ಗೊಳಸಂಗಿ ಜಾನಪದ ಪ್ರತಿಭಾ ಪ್ರಕಾಶನ ಹಾಗೂ ಕ್ರೀಡಾ ಹವ್ಯಾಸಿ ಗೆಳೆಯರ ಬಳಗದ ಆಶ್ರಯದಲ್ಲಿ

ಶ್ರೀ ದಾನಪ್ಪ (ಶಾಸ್ತ್ರಿ) ಜತ್ತಿ ತಿಕೋಟಾ ಅವರಿಗೆ

## ಸನ್ಮಾನ ಪತ್ರ ಸಮರ್ಪಣೆ

ಇವತ್ತಿನ ಈ ಸನ್ಮಾನ ಸಮಾರಂಭದ ಅಧ್ಯಕ್ಷರೇ. ಅತಿಥಿಗಳೇ. ಗ್ರಾಮಸ್ಥರೇ.

ಬಿಜಾಪುರ ಜಿಲ್ಲೆಯ ತಿಕೋಟಾ ಗ್ರಾಮದ ಸುಸಂಸ್ಕೃತ ಮನೆತನದಲ್ಲಿ ಜನಿಸಿ. ಬಾಲ್ಯದಿಂದಲೂ ಕಲೆಯ ಆರಾಧಕರಾಗಿ, ಸಮಾಜ ಸೇವಕರಾಗಿ. ಕವಿಗಳಾಗಿ. ಸಾಹಿತಿಗಳಾಗಿ. ನಟರಾಗಿ, ಪುರಾಣ. ಪ್ರವಚನ ಕೀರ್ತನಕಾರರಾಗಿ ನಾಡಿನಾದ್ಯಂತ ಸಂಚರಿಸಿ ಶರಣ ಚರಿತಾಮೃತದ ಸವಿಯನ್ನು ಉಣಬಡಿಸುತ್ತ ಜನರ ಮನೋವಿಕಾಸದ ಜೊತೆಗೆ ಮನೋರಂಜನೆಯನ್ನು ಒದಗಿಸುವ ಬಹುಮುಖ ಪ್ರತಿಭೆಯ ಶ್ರೀ ದಾನಪ್ಪ (ಶಾಸ್ತ್ರಿ) ಜತ್ತಿ ಅವರಿಗೆ ಸನ್ಮಾನ ಮಾಡಲು ನಮಗೆ ತುಂಬಾ ಹರ್ಷವಾಗುತ್ತದೆ.

ಕಲೋಪಾಸಕರೇ,

ಕನ್ನಡ ರಂಗಭೂಮಿಯ ಕಲಾಜ್ಯೋತಿಯನ್ನು ಜಾಜ್ವಲ್ಯಮಾನವಾಗಿ ಬೆಳಗಿಸುವಲ್ಲಿ ತಮ್ಮ ಸೇವೆ ಚಿರಸ್ಮರಣೀಯ. ನಾಟಕ, ಬೈಲಾಟ. ರೇಡಿಯೋ ನಾಟಕ. ರೇಡಿಯೋ ಕೀರ್ತನ. 'ಭಾರತರತ್ನ'ದಂಥ ಚಲನ ಚಿತ್ರದಲ್ಲಿಯ ಪ್ರಬುದ್ಧ ಅಭಿನಯ ಜನಮನದಲ್ಲಿ ಅಚ್ಚಳಿಯದೆ ಉಳಿದಿರುವುದಕ್ಕೆ ತಮ್ಮ ಪರಕಾಯ ಪ್ರವೇಶದಂಥ ಪಾತ್ರಗಳೇ ಜೀವಂತ ಸಾಕ್ಷಿ.

ಸಮರ್ಥ ಸರಪಂಚರೇ,

೧೯೭೧ ರಿಂದ ೭೭ ರ ವರೆಗೆ ಅವಿರೋಧವಾಗಿ ಆಯ್ಕೆಯಾಗಿ, ತಿಕೋಟಾ ಗ್ರಾಮದ ಟೌನ್ ಪಂಚಾಯತಿ ಚೇರಮನ್‌ರಾಗಿ ಗ್ರಾಮದ ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸಿ. ಸಮಾಜ ಸೇವೆಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ಸೇವೆ ಸಲ್ಲಿಸಿದ್ದೀರಿ.

ಸಾಹಿತಿಗಳೇ,

ಕನ್ನಡ ಸಾರಸ್ವತ ಪ್ರಪಂಚಕ್ಕೆ ತಾವು ಸಲ್ಲಿಸಿದ ಸೇವೆ ಅಮೋಘ. ಅಮೂಲ್ಯ ಕಾಣಿಕೆ ಕಥಾಸಂಕಲನ, ಭಾವಸೌರಭ ಕವನ ಸಂಗ್ರಹ, ಶರಣರು ಸಕ್ಕಾಗ ಪ್ರಬಂಧ, ಬಸವ ತತ್ವ ದರ್ಶನ ಸಂಪಾದನಾ ವಚನಾಮೃತಗಳಂತಹ ಕೃತಿ ಕುಸುಮಗಳನ್ನು ಭಗವತಿ ಭಾರತೀಯ ಚರಣ ಕಮಲಗಳಿಗೆ ಅರ್ಪಿಸಿದ್ದೀರಿ.

ಪರಮ ಶಿಷ್ಯರೇ,

ಪರಮ ಪೂಜ್ಯ ನಿಡುಮಾಮಿಡಿ ಜಗದ್ಗುರುಗಳಾದ ಶ್ರೀ ಜ.ಚ.ನಿ. ಅವರಿಂದ ದೀಕ್ಷೆ ಹೊಂದಿದ್ದೀರಿ. ಶ್ರೀ ಮ.ನಿ.ಪ್ರ. ಮಹಾಂತ ಸ್ವಾಮಿಗಳು, ಇಲಕಲ್ಲ ಅವರ ಆಶೀರ್ವಚನದಿಂದ ಪುರಾಣ ಪ್ರವಚನ ಕೀರ್ತನೆಗೆ ಪ್ರೇರಣೆ ಪಡೆದಿರುವಿರಿ. ಶ್ರೀ ಶಂ. ಗು. ಬಿರಾದಾರ ಅವರು ಸಾಹಿತ್ಯಕ ಗುರುಗಳಾಗಿ ದೊರೆತು ಹೀಗೆ ತಮ್ಮ ಪ್ರತಿಭೆಯ ವಿಕಾಸಕ್ಕೆ ಮೂವರು ಪೂಜ್ಯ ಗುರುಗಳ ಕೃಪಾಶೀರ್ವಾದವೇ ಮೂಲ ಕಾರಣ.

ಸಮತಾವಾದಿಗಳೇ,

ಭಾರತ ದೇಶ ಹಲವು ಧರ್ಮಗಳ ನಾಡು. ಅನೇಕ ಶರಣರು ಉದಿಸಿದ ಬೀಡು. ತಮ್ಮ ಪ್ರವಚನಗಳಲ್ಲಿ ಸರ್ವಧರ್ಮ ಸಮನ್ವಯದ ಸಂಕೇತವಾಗಿ ಮಾನವೀಯ ಮೌಲ್ಯಗಳ ಉದಾತ್ತ ವಿಚಾರಗಳು ವಿವಿಧತೆಯಲ್ಲಿ ಏಕತೆಯನ್ನು ಸಾರಿ ಭಾವೈಕ್ಯದ ನಾಂದಿಯನ್ನು ಹಾಡುತ್ತಿವೆ.

ಕನ್ನಡ ಬಳಗದ ಅಧ್ಯಕ್ಷರೇ,

ಯುವಶಕ್ತಿಯ ಪ್ರಧಾನ ಸಂಘಟಕರಾದ ತಾವು ಕನ್ನಡ ಭಾಷೆಯ ಬೆಳವಣಿಗೆಗೆ ಗ್ರಾಮದಲ್ಲಿ ಸಾಹಿತ್ಯಕವಾಗಿ. ಸಾಂಸ್ಕೃತಿಕವಾಗಿ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ತನ್ಮೂಲಕ ಜನಜಾಗ್ರತೆಗೊಳಿಸುತ್ತಿದ್ದೀರಿ.

ಜಾನಪದ ಜಾಣರೇ,

ಪ್ರವಚನದ ಸಮಯದಲ್ಲಿ ಹಾವಭಾವದೊಂದಿಗೆ ಗ್ರಾಮ್ಯಭಾಷೆಯಲ್ಲಿ ಜನಮನಕ್ಕೆ ಮುಟ್ಟುವಂತೆ ಸಂದರ್ಭೋಚಿತವಾಗಿ ನೀತಿಬೋಧಕವಾದ ಜಾನಪದ ಕತೆಗಳನ್ನು, ಹಾಡುಗಳನ್ನು ಬಳಸಿ ಅಮೂಲ್ಯವಾದ ಜಾನಪದ ಸಾಹಿತ್ಯವನ್ನು ಉಳಿಸಿ ಬೆಳೆಸಿದ್ದೀರಿ.

ಸಹಕಾರಿಗಳೇ,

ನಮ್ಮ ಕರ್ನಾಟಕ ಸರಕಾರ ಸಮಗ್ರ ಗ್ರಾಮೀಣ ಅಭಿವೃದ್ಧಿಗಾಗಿ ಹಮ್ಮಿಕೊಂಡ ೨೦ ಅಂಶ ಕಾರ್ಯಕ್ರಮಗಳ ಸಂದೇಶವನ್ನು ಮನೆ ಮನೆಗೂ, ಮನ ಮನಕ್ಕೂ ತಲುಪಿಸುವಲ್ಲಿ ತಮ್ಮ ಕೀರ್ತನೆ ಮತ್ತು ಉಪನ್ಯಾಸಗಳು ತುಂಬಾ ಪರಿಣಾಮ ಬೀರುತ್ತವೆ. ಸರಕಾರವೂ ಕೂಡ ತಮ್ಮ ಪ್ರತಿಭೆಗೆ ಪುರಸ್ಕಾರ ರೂಪವಾಗಿ ಗೌರವಧನ ಕೊಡುತ್ತದೆ.

ಆತ್ಮೀಯರೇ.

ಜನಪ್ರಿಯ ಕೀರ್ತನಕಾರರಾದ ತಾವುಗಳು ಗೊಳಸಂಗಿ ಗ್ರಾಮಕ್ಕೆ ಶ್ರೀ ಬಸವ ಜಯಂತಿ ನಿಮಿತ್ತವಾಗಿ ಆಗಮಿಸಿ ನಾಲ್ಕು ದಿನಗಳಿಂದ ಶರಣರ ಚರಿತಾಮೃತವನ್ನು ಉಣಬಡಿಸಿ, ರಂಜಿಸಿ. ಸುಪ್ತಾವಸ್ಥೆಯಲ್ಲಿದ್ದ ಜನರ ಆಧ್ಯಾತ್ಮಿಕ ಶಕ್ತಿಯನ್ನು ಜಾಗ್ರತಗೊಳಿಸಿ ಭಕ್ತಿಮಾರ್ಗ ಉಳಿಸಿರುವಿರಿ. ಕಾರಣ ಗೊಳಸಂಗಿಯ ಸಮಸ್ತ ನಾಗರಿಕರು ತಮ್ಮನ್ನು ತುಂಬು ಹೃದಯದಿಂದ ಸನ್ಮಾನಿಸುತ್ತೇವೆ.

ಇದೇ ರೀತಿ ನಾಡು ನುಡಿಯ ಸೇವೆಸಲ್ಲಿಸಲು ಪರಮಾತ್ಮನು ತಮಗೆ ಹಾಗೂ ತಮ್ಮ ಪರಿವಾರಕ್ಕೆ ಆಯುರಾರೋಗ್ಯವನ್ನು ಸದಾ ದಯಪಾಲಿಸಲಿ.

ಅಧ್ಯಕ್ಷರು,
ಡಾ. ಕೆ. ಬಿ. ಪುರೋಹಿತ,
ಶ್ರೀ ವ್ಹಿ. ಬಿ. ಕಣಗಿ,
ಕ್ರೀಡಾ ಹವ್ಯಾಸಿ ಗೆಳೆಯರ ಬಳಗ.
ಗೊಳಸಂಗಿ

ಸಂಪಾದಕರು,
ಪ್ರೊ. ಬಿ. ಎಂ. ತೆಳಗಡಿ.
ಶ್ರೀ ಕಾ. ಹು. ಬಿಜಾಪೂರ.
ಜಾನಪದ ಪ್ರತಿಭಾ ಪ್ರಕಾಶನ.
ಗೊಳಸಂಗಿ

ಹಾಗೂ ಗೊಳಸಂಗಿ ಗ್ರಾಮದ ಸಮಸ್ತ ನಾಗರಿಕರು

॥ ಶ್ರೀ ಮುರದುಂಡೀಶ್ವರ ಪ್ರಸನ್ನ ॥

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಶ್ರೀ ಶಿವಮೂರ್ತಿ
ಮುರಘರಾಜೇಂದ್ರ ಮಹಾಸ್ವಾಮಿಗಳು, ಶ್ರೀಮಚ್ಚಿನ್ಮೂಲಾದ್ರಿ
ಬೃಹನ್ಮಠ, ಚಿತ್ರದುರ್ಗ ಅವರ ದಿವ್ಯ ಸನ್ನಿಧಿಯಲ್ಲಿ

ಅರಭಾಂವಿ ಪುಣ್ಯಾರಣ್ಯದ ಶ್ರೀ ಮುರದುಂಡೀಶ್ವರ ಸಿದ್ಧ ಸಂಸ್ಥಾನಮಠದ ಪೀಠಾಧಿಪತಿಗಳಾದ ಶ್ರೀ ನಿ.ಪ್ರ.ಸ್ವ. ಸಿದ್ಧಲಿಂಗ ಮಹಾಸ್ವಾಮಿಗಳವರ ಅಪೇಕ್ಷೆಯಂತೆ, ತಿಕೋಟಾದ ಶರಣ ಶ್ರೀ ದಾನಪ್ಪ ಜತ್ತಿ ಶಾಸ್ತ್ರಿಗಳಿಗೆ

ಬಿರುದಿನೊಂದಿಗೆ ಆಶೀರ್ವದಿಸಿದ

# ಪ್ರಶಸ್ತಿ ಪತ್ರ

ಶರಣ ಶ್ರೀ ದಾನಪ್ಪ ಜತ್ತಿ ಶಾಸ್ತ್ರಿಯವರೇ, ನೀವು ಬಸವಾದಿ ಪ್ರಮಥರ ಚರಿತ್ರೆಗಳನ್ನು ಕಳೆದ ಇಪ್ಪತ್ತು ಸಂವತ್ಸರಗಳಿಂದ ಪುರಾಣ, ಪ್ರವಚನ, ಕೀರ್ತನಗಳ ಮುಖಾಂತರ ಬಿತ್ತರಿಸಿ ಶರಣ ಸಂಸ್ಕೃತಿಯ ಜ್ಯೋತಿಯನ್ನು ಬೆಳಗಿಸಿ ಮಹದುಪಕಾರ ಮಾಡುತ್ತಿದ್ದೀರಿ.

ನಿಮ್ಮ ಅಸ್ಖಲಿತ ವಾಣಿ, ಅಂಗಿತಾಭಿನಯ, ಭಾವಾಭಿನಯಪೂರಿತ, ಸುರಿತ ಹರಿತ ಶೈಲಿ, ಶ್ರೋತೃಗಳ ಹೃದಯ ಹೂವಾಗಿ ಅರಳುವಂತಹ ನವಿರಾದ ಹಾಸ್ಯ, ಕ್ಲಿಷ್ಟವಾದ ಧರ್ಮ ತತ್ತ್ವಗಳನ್ನು ರಂಜನೀಯವಾಗಿ ತಿಳಿಸುವಂತಹ ದೃಷ್ಟಾಂತ, ನಿಮ್ಮನ್ನು ಕನ್ನಡನಾಡಿನ ಶ್ರೇಷ್ಠ ಮಟ್ಟದ ಪ್ರವಚನಕಾರರನ್ನಾಗಿ ಮಾಡಿರುವುದು ನಮಗೆ ಅಭಿಮಾನದ ಸಂಗತಿಯಾಗಿದೆ.

'ಕಾವ್ಯಾನಂದ'ರ ಶರಣ ಚರಿತಾಮೃತವನ್ನು ಓದಿ, ಪಠಿಸಿ, ಅರಗಿಸಿ ಕೊಂಡಿರುವ ನೀವು ಶರಣ ಸಂಸ್ಕೃತಿಯ ಸುಧೆಯನ್ನು ಮಾನುಕುಲಕ್ಕೆ ಉಣಬಡಿಸುವ ಮಹಾನ್ ಪುಣ್ಯದ ಕಾರ್ಯವನ್ನು ಕೈಕೊಂಡಿದ್ದೀರಿ.

ನಿಮ್ಮನ್ನು ಪ್ರವಚನಕ್ಕೆ ಆಮಂತ್ರಿಸದಿರುವ ಮಠಗಳು, ಯಾತ್ರೆ ಉತ್ಸವಗಳು, ಶಿವಾನುಭವ ಸಂಘ ಸಂಸ್ಥೆಗಳು, ಸಭೆಗಳು ಬಹುತರವಾಗಿ ಕರ್ನಾಟಕದಲ್ಲಿ ಇಲ್ಲವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಪ್ರಶಾಂತ ಸ್ವಭಾವದ ಶ್ರೀ ರಾಚಯ್ಯ ಹಿರೇಮಠ, ತೊದಲಬಾಗಿಯವರಂತಹ ಹಾರ್ಮೋನಿಯಂ ವಾದಕರನ್ನು, ನಿರಂತರ ಚಟುವಟಿಕೆಯ ಶ್ರೀ ಗಣೇಶ ಕಮ್ಮಾರ,

ತಿಕೋಟಾರಂತಹ ತಬಲಾ ವಾದಕರನ್ನು ಸಾಥಿದಾರರನ್ನಾಗಿಯೂ ಹೊಂದಿರುವ ನೀವು ಸುದೈವಿಗಳಾಗಿದ್ದೀರಿ.

ಈ ಜಗದ ಅಸ್ತಿತ್ವಕ್ಕೆ ಹರಿಹರಬ್ರಹ್ಮರು ಕಾರಣರಾಗಿರುವಂತೆ ಶರಣ ಸಂಸ್ಕೃತಿ ಪ್ರಚಾರಕ್ಕೆ ನೀವು ಮೂವರೂ ಕಾರಣರಾಗಿರುವುದು ನಮಗೆ ಹರುಷವನ್ನುಂಟು ಮಾಡಿದೆ. ನಿಮ್ಮ ಈ ಬಹುಮೂಲ್ಯವಾದ ಈ ಪವಿತ್ರ ಸೇವೆ ಶತಶತಮಾನದುದ್ದಕ್ಕೂ ಸಾಗಿ ಸಮಾಜಕ್ಕೆ ದಾರಿ ದೀಪವಾಗಿ ಬೆಳಗಲಿ ! ಎಂದು ಹಾರೈಸುತ್ತೇವೆ.

ಶ್ರೀ ದಾನಪ್ಪನವರೇ, ನೀವು ಜಗಜ್ಯೋತಿ ಶ್ರೀ ಬಸವ ಮಹಾಪುರಾಣವನ್ನು ಯಶಸ್ವಿಯಾಗಿ ಪ್ರವಚನ ಮಾಡುವ ಕೆಚ್ಚನ್ನು ಪಡೆದ ಕರ್ನಾಟಕದ ಏಕಮಾತ್ರ ಪ್ರವಚನ ಪಟುವಾಗಿದ್ದೀರಿ. ಕರ್ತೃ ಶ್ರೀ ದುರದುಂಡೀಶ್ವರರ ಯಾತ್ರಾ ಮಹೋತ್ಸವದ ಪವಿತ್ರ ದಿನದಂದು ನಿಮಗೆ,

ಪ್ರವಚನ ಪ್ರಭಾಕರ

ಎಂಬ ಬಿರುದಿನೊಂದಿಗೆ ಈ ಪ್ರಶಸ್ತಿ ಪತ್ರವನ್ನು ಆಶೀರ್ವದಿಸಲಾಗಿದೆ.

ಭದ್ರಂ ಶುಭಂ ಮಂಗಲಂ

ಅರಭಾಂವಿಮಠ,<br>ದಿ. ೫-೪-೧೯೭೨

ಪ್ರವಚನ ಪ್ರಭಾಕರರಿಗೆ ಅಭಿನಂದನೆಗಳು<br>ಜಗಜ್ಯೋತಿ ಶ್ರೀ ಬಸವೇಶ್ವರ ಪುರಾಣ ಮಹೋತ್ಸವ<br>ಸಮಿತಿ, ಅರಭಾಂವಿಮಠ ಹಾಗೂ ಸಮಸ್ತ ಸದ್ಭಕ್ತರು

## ಶ್ರೀ ದಾನಪ್ಪ ಜತ್ತಿ ಅವರ ಸತ್ಕಾರ ಸಮಿತಿ
## ಬನ್ನೂರ

ಸನ್ಮಾನ್ಯ ಪ್ರವಚನ ಪ್ರವೀಣ ಪೂರ್ಣತ್ವಕಾರರಾದ
ಶ್ರೀ ದಾನಪ್ಪ ಜತ್ತಿ ಅವರೆ.

ಬಹುಮುಖ ಪ್ರತಿಭೆಯ ಮೇಧಾವಿಗಳಾದ ತಮ್ಮನ್ನು ಸತ್ಕರಿಸುವ ಅವಕಾಶ ಬನ್ನೂರಿನ ಶ್ರೀ ಬಸವೇಶ್ವರ ನಾಟ್ಯ ಸಂಘದವರಿಗೆ ಈಗ ದೊರೆತುದಕ್ಕೆ ಹೆಮ್ಮೆ ಆಗುತ್ತಿದೆ. ಈ ಸಂದರ್ಭದಲ್ಲಿ ತಮ್ಮನ್ನು ಕುರಿತು ಒಂದೆರಡು ಮಾತುಗಳನ್ನಾಡಲು ಅನುಮತಿ ಕೇಳುತ್ತಿದ್ದೇವೆ.

ಅಮೂಲ್ಯ ಕಾಣಿಕೆ. ಭಾವಸೌರಭ. ಬಸವತತ್ತ್ವ ದರ್ಶನ ಮತ್ತು ವಚನಾಮೃತದಂತಹ ಅಮೂಲ್ಯ ಕೃತಿರತ್ನಗಳನ್ನು ಹೊರತಂದು ಕನ್ನಡದ ಜನರ ಮನಸೆಳೆದಿರುವಿರಿ. ನಗರಸಭಾಧ್ಯಕ್ಷರಾಗಿ ತಾವು ಕಾರ್ಯ ನಿರ್ವಹಿಸಿದ ದಕ್ಷ ಆಡಳಿತಗಾರರೂ ಅಹುದು.

ಡಾ. ಜ.ಚ.ನಿ. ಯವರ ಆಶೀರ್ವಾದದ ತಾರೆಯಾಗಿ ಬೆಳಗುತಿರುವಿರಿ. ತಿಮ್ಮನ ಭಾಷೆಯ ದೃಷ್ಟಾಂತಗಳ ಮೂಲಕ ಪ್ರವಚನ ನೀಡಿ ಜನರಿಗೆ ರಸದೂಟ ನೀಡುತ್ತಿರುವಿರಿ. ಜನ್ಮತಃ ಸಾಹಿತಿಗಳಾದ ನೀವು ಚಿತ್ರರಂಗದಲ್ಲಿಯೂ ಗಾಢವಾದ ಆಸಕ್ತಿಯನ್ನು ತಳೆದಿದ್ದೀರಿ.

ಸೃಷ್ಟಿಯ ಪದರುಗಳನ್ನು ಗುರುತಿಸಿದ ನೀವು ಆಸಕ್ತಿವಹಿಸದ ವಿಷಯವಿಲ್ಲ. ಕಾರ್ಯಾಚರಣೆಗೆ ಕೈಹಾಕದ ಕ್ಷೇತ್ರವಿಲ್ಲ. ಕನ್ನಡದ ಜನತೆಯಲ್ಲಿ ತಾಯ್ನುಡಿಯ ಮೂಲಕವೇ ಪ್ರಜ್ಞೆಯನ್ನು ಮೂಡಿಸುವ ಅಗತ್ಯತೆಯನ್ನು ಕಂಡುಕೊಂಡವರು.

ವೀರಶೈವ ಧರ್ಮಪ್ರಚಾರಕರಲ್ಲಿ ಒಬ್ಬರಾದ ತಮ್ಮ ನಡೆ–ನುಡಿಯಲ್ಲಿ ಸಮಾನತೆ ಎದ್ದುಕಾಣುತ್ತಿದೆ. ಸಾದಾ ಜೀವನದ, ಉಚ್ಚ ವಿಚಾರದ ವ್ಯಕ್ತಿಯಾದ ತಮಗೆ ಸುಖವನ್ನು, ಶ್ರೇಯಸ್ಸನ್ನು ಹಾಗೂ ಆಯುರಾರೋಗ್ಯವನ್ನು ಶ್ರೀ ಬಸವೇಶ್ವರನು ದಯಪಾಲಿಸಲೆಂದು ಪ್ರಾರ್ಥಿಸಿ ಈ ಸನ್ಮಾನ ಪತ್ರವನ್ನು ನಾವೆಲ್ಲರೂ ತಮಗೆ ಅರ್ಪಿಸುತ್ತಿದ್ದೇವೆ.

ಬನ್ನೂರ, ಶ್ರೀ ಬಸವೇಶ್ವರ ನಾಟ್ಯ ಸಂಘ, ಸತ್ಕಾರ ಸಮಿತಿ
೨೬–೫–೧೯೮೦

॥ ಶ್ರೀ ವಿಜಯ ಮಹಾಂತೇಶ ಕೃಪೆ ॥

ವಿಜಾಪೂರ ಜಿಲ್ಲೆಯ ಹುನಗುಂದ ತಾಲೂಕಿನ ಬೆಳಗಲ್ಲ ಗ್ರಾಮದ ಚಿತ್ತರಗಿ ಶ್ರೀ ವಿಜಯಮಹಾಂತೇಶ ಸಂಸ್ಥಾನದ ೫೭ನೇ ಶಾಖಾ ಮಠದಲ್ಲಿ ಶ್ರೀಮನ್ನೃಪ ಶಾಲಿವಾಹನ ಶಕೆ ೧೮೯೯ ಪಿಂಗಳನಾಮ ಸಂವತ್ಸರ ಶ್ರಾವಣ ಮಾಸದಲ್ಲಿ ಶರಣ ಚರಿತಾಮೃತ ಪ್ರವಚನ ನಡೆಸಿದ ವಚನ ರಚನಾ ಚತುರ ಬಿರುದಾಂಕಿತರಾದ

ತಿಕೋಟಾದ ಶ್ರೀ ದಾಸಪ್ಪ ಜತ್ತಿ ಅವರಿಗೆ

ಪ್ರವಚನ ಮಂಗಲ ಮಹಾ ಸಮಯದಲ್ಲಿ

ಶ್ರೀ ಮ. ನಿ. ಪ್ರ. ಹಾನಗಲ್ಲ ಸದಾಶಿವ ಮಹಾಸ್ವಾಮಿಗಳು, ಶಿವಯೋಗಮಂದಿರ
ಅವರ ಘನ ಅಧ್ಯಕ್ಷತೆಯಲ್ಲಿ

ಶಿವಾನುಭವ ಚರವರ್ಯ ಶ್ರೀ ಮ.ನಿ.ಪ್ರ. ಮಹಾಂತ ಸ್ವಾಮಿಗಳು
ಚಿತ್ತರಗಿ – ಇಲಕಲ್ಲ ಪೀಠಾಧ್ಯಕ್ಷರು
ಅವರ ಅಮೃತ ಹಸ್ತದಿಂದ ಸಮರ್ಪಿಸಿದ

# ಪ್ರವಚನ ಕಲಾ ಪ್ರಶಸ್ತಿ ಪತ್ರಿಕೆ

ಸದ್ಭಕ್ತಿಯ ಜತ್ತಿಯವರೆ,

ನೀವು ತಾರೀಖು ೩೦–೮–೧೯೩೮ರಲ್ಲಿ ತಿಕೋಟಾದಲ್ಲಿ ಪ್ರಸಿದ್ಧ ಮನೆತನದ ಶ್ರೀ ಸಿದ್ರಾಮಪ್ಪ ಜತ್ತಿ ಹಾಗೂ ಶ್ರೀಮತಿ ದೊಡ್ಡಮ್ಮ ಅವರ ಪುಣ್ಯಗರ್ಭದಲ್ಲಿ ಹುಟ್ಟಿ ಬೆಳೆದು ತಾಯ್ನುಡಿ ಕನ್ನಡ ಪ್ರಾಥಮಿಕ ಅಭ್ಯಾಸವನ್ನು ಪೂರೈಸಿದಿರಿ. ಬಳಿಕ ಸುಸಂಸ್ಕೃತರಾಗಿ, ಸಾತ್ವಿಕ ಮನೋಭಾವಿಗಳಾಗಿ, ಕಲಾಪ್ರೇಮಿಗಳಾಗಿ. ಮಿಗಿಲಾಗಿ ಸಾಹಿತ್ಯೋಪಾಸಕರಾಗಿ ಬೆಳೆದು ಬೆಳಗಿದಿರಿ. ಅಮೂಲ್ಯ ಕಾಣಿಕೆ (ಕಥಾ ಸಂಕಲನ), ಬಸವತತ್ತ್ವ ದರ್ಶನ (ಸಂಪಾದಿತ), ಭಾವ ಸೌರಭ (ಕವನ ಸಂಕಲನ), ವಚನಾಮೃತ (ವಚನ ಸಂಕಲನ) ಗಳನ್ನು ಬರೆದು ಬೆಳಕಿಗೆ ತಂದು ಹೆಸರಾಂತ ರಾಗಿರುವಿರಿ.

ಅಭಿನಯ ಚತುರರೆ,

ಧಾರವಾಡ ಬಾನುಲಿಯಲ್ಲಿ, 'ಭಾರತ ರತ್ನ' ಚಲನಚಿತ್ರದಲ್ಲಿ ಮತ್ತು ರಂಗ ಭೂಮಿಯ ನಾಟಕ, ಬಯಲಾಟಗಳಲ್ಲಿ ಅಭಿನಯಿಸಿ ಪ್ರಾವೀಣ್ಯತೆ ಪಡೆದ ಕಲಾವಿದ ರೆನಿಸಿದ್ದೀರಿ.

ದೀಪ್ತವಾಣಿಯ ದಾನಪ್ಪನವರೇ,

ಈಚೆಗೆ ನೀವು ಕವಿಗುರು ವಚನಬ್ರಹ್ಮ ಅದ್ಯತನ ಗದ್ಯಗೀತಾಚಾರ್ಯರೆಂದು ಹೆಸರಾಂತ ಡಾ. ಜ.ಚ.ನಿ. ಅವರ ಕರಸಂಜಾತರಾಗಿ ಪ್ರವಚನ ಕಲೆಯಲ್ಲಿ ಪ್ರಾವೀಣ್ಯತೆಯನ್ನು ಪಡೆದುದರಿಂದ ಇಂದು ನಾವೆಲ್ಲರೂ ಸಂತೋಷಗೊಂಡು "ಪ್ರವಚನ ಕಲಾ ಪ್ರವೀಣ" ಎಂದು ಪ್ರಶಸ್ತಿ ಸಮರ್ಪಿಸಲು ಹೆಮ್ಮೆ ಪಡುತ್ತೇವೆ.

ಚಿತ್ತರಗಿ ಶ್ರೀ ವಿಜಯ ಮಹಾಂತೇಶನು ನಿಮಗೆ ಪ್ರವಚನ ಕಲೆ ಉತ್ತರೋತ್ತರ ಅಭಿವೃದ್ಧಿಪಡಿಸಲು ಚಿರಾಯುರಾರೋಗ್ಯ ಅನುಗ್ರಹಿಸಲೆಂದು ಹೃದಯಾರೆ ಹಾರೈಸುತ್ತೇವೆ.

ಬೆಳಗಲ್ಲ,
೧೭–೯–೧೯೭೭

ಶ್ರೀ ವಿಜಯಮಹಾಂತೇಶ ಮಠದ ಹಾಗೂ
ಸುತ್ತಮುತ್ತಲಿನ ಗ್ರಾಮದ ಸದ್ಭಕ್ತರು



ಶ್ರೀ ದಾನಪ್ಪ ಜತ್ತಿಯವರ ಕುಟುಂಬ
ಶಾಂತಮ್ಮ (ಪತ್ನಿ) ಸೋಮಶೇಖರ (ಮಗ)
ಸರೋಜಿನಿ (ಸೊಸೆ) ಸಿದ್ಧರಾಮ (ಮೊಮ್ಮಗ)
ದೊಡ್ಡಮ್ಮ (ಮೊಮ್ಮಗಳು)

ಸಹಕಲಾವಿದರಾದ ಶ್ರೀ ರಾಚಯ್ಯಸ್ವಾಮಿ ಹಿರೇಮಠ (ಹಾರ್ಮೋನಿಯಂ)
ಶ್ರೀ ದ್ಯಾವಪ್ಪ ಮ. ಪೂಜಾರಿ (ತಬಲಾ)
ಅವರೊಂದಿಗೆ ಪ್ರವಚನ ಮಾಡುತ್ತಿರುವ ಶ್ರೀ ದಾನಪ್ಪ ಜತ್ತಿಯವರು



ಹಿಂದಿನ ಸಹಕಲಾವಿದರಾದ (ಹಾರ್ಮೋನಿಯಂ) ಹೊಸಟ್ಟಿಯ
ಭೀಮಶಾ ಚಮಕೇರಿ ಅವರೊಂದಿಗೆ
ಶ್ರೀ ದಾನಪ್ಪ ಜತ್ತಿಯವರು

## ದಾನಪ್ಪ ಜತ್ತಿ ಶಾಸ್ತ್ರಿ, ತಿಕೋಟಾ

ವಿಜಾಪೂರದ ಪಶ್ಚಿಮಕ್ಕೆ ೨೦ ಕಿ.ಮಿ. ದೂರದಲ್ಲಿರುವುದೇ ತಿಕೋಟಾ. ಅತ್ತ ಪಟ್ಟಣವೂ ಅಲ್ಲದ ಇತ್ತ ಹಳ್ಳಿಯೂ ಅಲ್ಲದ ಒಂದು ಗ್ರಾಮ. ಸ್ವಾತಂತ್ರ್ಯಪೂರ್ವದಲ್ಲಿ ತಾಲೂಕಾ ಸ್ಥಾನವಾಗಿದ್ದ ತಿಕೋಟಾ ಇಂದಿಗೂ ಅನೇಕ ರಂಗಗಳಲ್ಲಿ ಹೆಸರು ಪಡೆದು ನಿಂತಿದೆ.

ಕಲಾತ್ಮಕ ಕಸರತ್ತಿನ ಸರ್ಕಸ್ಸನ್ನು ಭಾರತದಲ್ಲಿ ಮೊತ್ತಮೊದಲಿಗೆ ಪ್ರಾರಂಭಿಸಿದವರು ತಿಕೋಟಾದ ಶ್ರೀ ಕಾಶೀನಾಥ ಛತ್ರೆಯವರು. ಶ್ರೀ ಸಿದ್ಧಾರೂಢ ಅಪ್ಪಾ ಅವರ ಕೃಪೆಗೆ ಪಾತ್ರರಾದ ಅವರು ಆ ಕಲೆಯಲ್ಲಿ ಅಂತರರಾಷ್ಟ್ರೀಯ ಮಟ್ಟದ ಕೀರ್ತಿ ಪಡೆದವರು.

ಜಗತ್ತಿನ ಸೋಜಿಗದ ಕಟ್ಟಡಗಳಲ್ಲಿ ಒಂದಾದ ಗೋಳಗುಮ್ಮಟದ ಶಿಲ್ಪಿ, ಸಂತನೂ ಆದ ಸಂದಲ ಮಲೀಕನ ಸಮಾಧಿ ಕೂಡ ತಿಕೋಟಾದಲ್ಲಿರುವುದು ಹೆಮ್ಮೆಯ ವಿಷಯ.

ಶ್ರೀರಾಮನು ವನವಾಸ ಸಮಯದಲ್ಲಿ ಇಲ್ಲಿಗೆ ಬಂದು ಒಂದು ಲಿಂಗವನ್ನು ಸ್ಥಾಪಿಸಿ, ತ್ರಿಕೂಟೇಶ್ವರನೆಂದು ಹೆಸರಿಟ್ಟು ಪೂಜಿಸಿದುದರ ಪ್ರತೀಕವಾಗಿ ಈ ಗ್ರಾಮಕ್ಕೆ 'ತಿಕೋಟಾ' ಎಂಬ ಹೆಸರು ಬಂದಿತು ಎನ್ನುವ ಪ್ರತೀತಿ ಕೂಡ ಹಚ್ಚ ಹಸಿರಾಗಿದೆ. ಅದಕ್ಕೆ ಸಾಕ್ಷಿಯಾಗಿ ರಾಮೇಶ್ವರ ದೇವಾಲಯವೆಂದು ಅದು ಈಗ ಹೆಸರು ಪಡೆದಿದೆ.

'ಔರಸಂಗ' ಎಂಬ ಹೆಸರು ಕೂಡ ಈ ಗ್ರಾಮಕ್ಕೆ ಮೊದಲಿತ್ತು. ಕೆಲ ಕಾಲದ ಹಿಂದೆ ಜನರು ಇದಕ್ಕೆ 'ಔರಸಂಗ'ವೆಂದೇ ಕರೆಯುತ್ತಿದ್ದರು. ಐವರ ಸಂಘ–ಅವರ ಸಂಘ–ಔರಸಂಗ ಆಗಿರಬೇಕೆಂಬ ಊಹೆಯಿದೆ.

ಇಲ್ಲಿನ 'ವಾಡೆ' ವಿಜಾಪೂರ ಆದಿಲ್‌ಶಾ ಆಳ್ವಿಕೆಯ ಅಚ್ಚಳಿಯದ ಕುರುಹು. ತಿಕೋಟಾಕ್ಕೆ ಬಂದ ಪರಕೀಯ ಪಯಣಿಗರ ಗಮನ ಸೆಳೆಯುತ್ತದೆ. ಆ ಕಾಲದಲ್ಲಿಯೇ ತಿಕೋಟಾದಲ್ಲಿರುವ ದಬ್ಬ ಎಂಬ ಬ್ರಾಹ್ಮಣ ಮನೆತನದ ಸೊಸೆ ತಾರಾಬಾಯಿ ಎಂಬ ಸಾಧ್ವಿಯ ತ್ಯಾಗ ಬಲಿದಾನದ ದ್ಯೋತಕವಾಗಿ ನಿರ್ಮಾಣಗೊಂಡ ಭಾವಿಯೊಂದು ಗ್ರಾಮದ ಮಧ್ಯದಲ್ಲಿದ್ದು ನಿರಂತರ ಜನಜೀವನಕ್ಕೆ ಆಧಾರವಾಗಿದೆ.

ವೀರಶೈವರ ಶ್ರೀ ಮಲ್ಲಿಕಾರ್ಜುನ ದೇವಾಲಯ. ನಂತರ ಪಾಂಡುರಂಗ, ಬ್ರಾಹ್ಮಣ ಸಮಾಜದ ಶ್ರೀರಾಮ ಮಂದಿರ, ಶ್ರೀ ರಾಘವೇಂದ್ರಸ್ವಾಮಿ ಬೃಂದಾವನ. ಪೇಟೆಯ ಲಕ್ಷ್ಮೀ ದೇವಾಲಯ, ಹಾಲುಮತದವರ ಭರಮದೇವರಗುಡಿ. ಲಕ್ಷ್ಮೀ ಗುಡಿ, ಜಕ್ಕಣ್ಣನ ಶಿಲ್ಪಕಲೆಯ ಕಲಾಬಸ್ತಿ ದೇವಾಲಯ. ಸರ್ವರಿಗೂ ಪ್ರಿಯವಾದ ಹನುಮಂತ ದೇವಾಲಯಗಳು. ಗ್ರಾಮದ ದಕ್ಷಿಣಕ್ಕೆ ಸ್ವಲ್ಪ ದೂರದಲ್ಲಿರುವ ಹಾಜಿಸಾಹೇಬ ಭಡಕಲ್ಲ ಸಾಹೇಬ ದರ್ಗಾ. ಹಿರೇಮಠ, ವಿರಕ್ತಮಠ, ಸಾಲಿಮಠ, ಕೊಳಲಮಠಗಳು ತಿಕೋಟಾದ ಭಾಗ್ಯದ ರಕ್ಷಾ ಕವಚಗಳೇ ಆಗಿವೆ.

ದ್ರಾಕ್ಷಿ ಮತ್ತು ಬಾಳೆಹಣ್ಣಿನ ಮೂಲಕ ಕೃಷಿ ಕ್ಷೇತ್ರಕ್ಕೆ; ಕಲೆ, ಸಾಹಿತ್ಯ, ಸಂಗೀತ, ತತ್ತ್ವಜ್ಞಾನದ ಮೂಲಕ ಸಾಂಸ್ಕೃತಿಕ ಲೋಕಕ್ಕೆ; ಹಬ್ಬ-ಹುಣ್ಣಿವೆ, ಜಾತ್ರೆ, ಉತ್ಸವಗಳ ಮೂಲಕ ಧಾರ್ಮಿಕ ಕ್ಷೇತ್ರಕ್ಕೆ ತನ್ನದೇ ಆದ ವೈಶಿಷ್ಟ್ಯದ ಬಣ್ಣ ಬಳಿದಿರುವ ತಿಕೋಟಾ ವಿವಿಧ ಧರ್ಮದವರ ವೈವಿಧ್ಯ ಬದುಕಿನ ಆಡುಂಬೊಲವಾಗಿದೆ. ಭಾವೈಕ್ಯತೆ ಇಲ್ಲಿಯ ಜನಜೀವನದ ಉಸಿರೇ ಆಗಿರುವುದು ಸಂತಸದ ವಿಷಯ.

ಇಂಥ ತಿಕೋಟದಲ್ಲಿ ಜತ್ತಿಯವರದು ಒಂದು ಪ್ರಸಿದ್ಧಿ ಮನೆತನ. ಶ್ರೀ ಮಲ್ಲಿಕಾರ್ಜುನ ದೇವಾಲಯದ ಎದುರಿಗೆ ಇರುವ ಆ ಮನೆತನದ ಹಿರಿಯರು ವೀರಪ್ಪ ಬಿಸಲಪ್ಪ ಜತ್ತಿಯವರು. ಮಹಾಲಿಂಗವ್ವ ಅವರ ಧರ್ಮಪತ್ನಿ. ಈ ದಂಪತಿಗಳಿಗೆ ಬಿಸಲಪ್ಪ-ಸಿದ್ರಾಮಪ್ಪ ಎಂಬಿಬ್ಬರು ಗಂಡು ಮಕ್ಕಳು. ದಾನವ್ವ, ಗಿರಜವ್ವ, ರಾಚವ್ವ ಎಂಬ ಮೂರು ಜನ ಹೆಣ್ಣುಮಕ್ಕಳು.

ದಾನವ್ವ ಇವರ ಪತಿ ವಿರೂಪಾಕ್ಷಪ್ಪ ಬಂದಿ, ಗಿರಜವ್ವ ಇವರ ಪತಿ ಗುರಪಾದಪ್ಪ ಬಂದಿ, ರಾಚವ್ವ ಇವರ ಪತಿ ಮಲ್ಲಪ್ಪ ಕನ್ನೂರ. ಬಿಸಲಪ್ಪನವರ ಧರ್ಮಪತ್ನಿ ದಾನವ್ವನವರು ತಿಕೋಟಾದ ಕೋರಿ ಮನೆತನದವರು. ಬಿಸಲಪ್ಪ-ದಾನವ್ವ ಈ ದಂಪತಿಗಳಿಗೆ ಸಿದ್ಧಪ್ಪ ಹಾಗೂ ಭಾಗೀರಥಿ ಎಂಬ ಇಬ್ಬರು ಮಕ್ಕಳು. ಭಾಗೀರಥಿಯವರ ಪತಿ ಈಶ್ವರಪ್ಪ ಬಂದಿ. ಸಿದ್ಧಪ್ಪ ಜತ್ತಿಯವರ ಧರ್ಮಪತ್ನಿ ಶಾಂತಮ್ಮನವರು, ತೇರದಾಳದ ಯಾದವಾಡ ಮನೆತನದವರು.

ವಿವಿಧ ರಂಗಗಳಲ್ಲಿ ಪ್ರಸಿದ್ಧಿಯನ್ನು ಪಡೆದ ಜಮಖಂಡಿ ತಾಲೂಕಿನ ಬನಹಟ್ಟಿ ನನ್ನ ತಾಯಿಯ ತವರೂರು. ಅಲ್ಲಿ ಸೋಮವಾರಪೇಟೆಯಲ್ಲಿ ಇರುವ ಬಂದಿ ಮನೆತನದ ವೀರಸಂಗಪ್ಪ ಅವರ ಧರ್ಮಪತ್ನಿ ಗುರವ್ವ ಇವರಿಗೆ ಕ್ರಮವಾಗಿ ಪಂಚಾಕ್ಷರಪ್ಪ, ದೊಡ್ಡಮ್ಮ, ಈಶ್ವರಪ್ಪ, ಭಾಗೀರಥಿ, ಮುರಗೆಪ್ಪ ಎಂಬ ಐವರು ಮಕ್ಕಳು.

ದೊಡ್ಡಮ್ಮ ನನ್ನ ತಾಯಿ, ಸಿದ್ರಾಮಪ್ಪ ನನ್ನ ತಂದೆ. ಈ ಪುಣ್ಯ ದಂಪತಿಗಳಿಗೆ ನಾನು ೩೧-೮-೧೯೩೮ ರಂದು ಮಗನಾಗಿ ಹುಟ್ಟಿದೆ. ನೀಲವ್ವ ನನ್ನ ಅಕ್ಕ,

ಅವಳ ಬೆನ್ನಹಿಂದೆ ನಾನು ಹುಟ್ಟಿದ್ದು. "ಗುಡ್ಡಾಪೂರ ದಾನಮ್ಮ" ನಮ್ಮ ಮನೆಯ ಆರಾಧ್ಯದೇವಿ. ನಮ್ಮ ತಾಯಿ ಪ್ರತಿ ತಿಂಗಳು ಅಮಾವಾಸ್ಯೆಗೆ ಗುಡ್ಡಾಪೂರಕ್ಕೆ ಹೋಗುವ ವಾಡಿಕೆ. ಅದರ ಪ್ರತಿಫಲವೇನೋ ನಾನು ಹುಟ್ಟಿದೆ. ಅದಕ್ಕೆ ದಾನಮ್ಮನ ಹರಕೆಯು ಕಂದನೆಂಬ ಕಾರಣಕ್ಕಾಗಿ ನನಗೆ ದಾನಪ್ಪನೆಂದು ಹೆಸರಿಟ್ಟರು. ಮಹಾಲಿಂಗಪ್ಪ ನನ್ನ ತಂಗಿ. ಒಬ್ಬ ತಂಗಿ ಪಾರ್ವತಿ, ತಮ್ಮ ವೀರಪ್ಪ ಬಾಲ್ಯದಲ್ಲಿಯೇ ತೀರಿಕೊಂಡರು. ಕೊನೆಯ ತಂಗಿ ಮಹಾದೇವಿ.

ನೀಲಕ್ಕನನ್ನು ನಮ್ಮ ಸೋದರತ್ತೆಯ ಮಗ ಮಹಾಂತಪ್ಪ ಬಂದಿ ಅವರಿಗೆ ಕೊಟ್ಟಿತು. ಚಂದ್ರಶೇಖರ, ಗುರುಪಾದ, ದಾಕ್ಷಾಯಣಿ ಈ ಮೂರು ಮಕ್ಕಳಾದ ಮೇಲೆ ಮಹಾಂತಪ್ಪ ಮಾವನವರು ಶಿವಾಧೀನರಾದರು. ನನ್ನ ಅಕ್ಕ ತಿಕೋಟಾದಲ್ಲಿಯೇ ಉಳಿದರು. ಅವರ ಮಗ ಚಂದ್ರಶೇಖರ ಪೋಲಿಸ್ ಡಿಪಾರ್ಟ್‌ಮೆಂಟಿನಲ್ಲಿದ್ದಾರೆ. ಗುರುಪಾದ ಊರಿನಲ್ಲಿಯೇ ಇರುತ್ತಾನೆ. ದಾಕ್ಷಾಯಣಿಯನ್ನು ಬಬಲೇಶ್ವರದ ಮಲ್ಲಿಕಾರ್ಜುನ ಮಂಗಳವೇಡೆ ಇವರಿಗೆ ಕೊಟ್ಟಿದ್ದು ಸರ್ವರೂ ಸುಖಿ ಜೀವನ ಸಾಗಿಸುತ್ತಿದ್ದಾರೆ.

ತಂಗಿ ಮಹಾಲಿಂಗಪ್ಪಳನ್ನು ಇಂಡಿ ತಾಲೂಕಿನ ಹೊರ್ತಿ ಗ್ರಾಮದ ಡೊಳ್ಳಿ ಅವರ ಮನೆತನದ ಬಸಣ್ಣನಿಗೆ ಕೊಟ್ಟಿತು. ಈ ದಂಪತಿಗಳಿಗೆ ಶ್ರೀದೇವಿ, ಸುರೇಶ, ಸರೋಜಿನಿದೇವಿ ಎಂಬ ಮೂವರು ಮಕ್ಕಳು. ಶ್ರೀದೇವಿಯು ವಿಜಾಪೂರದ ಪಾಲಿಯವರ ಮನೆಯ ಸೊಸೆಯಾಗಿದ್ದಾಳೆ. ಸುರೇಶನೂ ಮದುವೆಯಾಗಿದ್ದು ಕುಟುಂಬ ಸಮೇತ ವಿಜಾಪೂರದಲ್ಲಿಯೇ ವಾಸವಾಗಿದ್ದಾನೆ.

ನನ್ನ ಸೋದರತ್ತೆ ರಾಚಪ್ಪ ಅವರ ಪತಿ ಮಲ್ಲಪ್ಪ ಕನ್ನೂರ ಈ ದಂಪತಿಗಳ ಮಗಳಾದ ಶಾಂತಾ ನನ್ನ ಪತ್ನಿ—ನನ್ನ ಹಾಗೂ ನನ್ನ ತಂಗಿ ಮಹಾಲಿಂಗಪ್ಪನ ಮದುವೆ ೬–೫–೧೯೫೮ ರಲ್ಲಿ ಒಂದೇ ವೇಳೆಗೆ ತಿಕೋಟಾದಲ್ಲಿ ನಡೆಯಿತು. ಸೋಮಶೇಖರ ನನ್ನ ಏಕೈಕ ಸುಪುತ್ರ. ಮಹಾಲಿಂಗಪ್ಪನ ಮಗಳಾದ ಸರೋಜಿನಿದೇವಿಯನ್ನು ಸೋಮಶೇಖರನಿಗೆ ತಂದುಕೊಂಡೆ. ಅವರಿಗೆ ದೊಡ್ಡಮ್ಮ, ಸಿದ್ಧರಾಮ ಎಂಬ ಇಬ್ಬರು ಮಕ್ಕಳು. ಒಟ್ಟಿನಲ್ಲಿ ನನ್ನದು ಬಳ್ಳಿಯಂತೆ ಹಬ್ಬಿರುವ ಕುಟುಂಬ. ಅದರ ತುಂಬ ಹೂವು ಅರಳಿದೆ. ಪರಿಮಳ ಹರಡಿದೆ. ಇದು ನನಗೆ ಸಂತೃಪ್ತಿ ತಂದಿದೆ.

### ನ್ಯಶ್ತಿ-ಪ್ರವೃತ್ತಿಗಳ ಮಧ್ಯೆ......

ನನ್ನ ತಾಯಿ-ತಂದೆಗೆ ನಾನೊಬ್ಬನೇ ಗಂಡುಮಗುವಾದ ಕಾರಣವೋ ಅಥವಾ ಹೆತ್ತವರ ಅಧಿಕ ವಾತ್ಸಲ್ಯದ ಫಲವೋ ನಾನು ಅಕ್ಕರೆಯಲ್ಲಿ ಬೆಳೆದೆ. ತಿಕೋಟಾದಲ್ಲಿಯೇ ನನ್ನ ವಿದ್ಯಾಭ್ಯಾಸಕ್ಕೆ ನಾಂದಿಯಾಯಿತು. ೧೯೫೩ ರಲ್ಲಿ ೭ನೆಯ ವರ್ಗದ ಪರೀಕ್ಷೆಗೆಂದು ವಿಜಾಪೂರಕ್ಕೆ ಹೋಗಿ ಪೇಪರ್ ಬರೆದುಬಂದೆ. ಆದರೆ ಅವರ

ಪ್ರತಿಫಲ ಶೂನ್ಯವಾಯಿತು. ಆದರೆ ೯ ತಿಂಗಳ ಪರೀಕ್ಷೆಯಲ್ಲಿ ಪಾಸಾಗಿದ್ದುದರ ಪರಿಣಾಮ ನನಗೆ ಮುಂದೆ ಓದುವ ಅವಕಾಶ ಸಿಕ್ಕಿತು. ವಿಜಾಪೂರದ ಎಸ್. ಎಸ್. ಹೈಸ್ಕೂಲಿಗೆ ೮ನೆಯ ವರ್ಗಕ್ಕೆ ಸೇರಿಕೊಂಡೆ. ಆದರೆ ನನ್ನ ಓದು ಒಕ್ಕಾಲಾಯಿತು. ಮೊದಲಿನಿಂದಲೂ ನನಗೆ ವಿದ್ಯಾಭ್ಯಾಸದ ಕಡೆಗೆ ಆಸಕ್ತಿಯೇ ಇರಲಿಲ್ಲ. ನನ್ನ ಗಮನವೆಲ್ಲ ನಾಟಕ, ಸಿನೇಮಾದ ಕಡೆಗೆ ಇತ್ತು. ಆ ಆಸಕ್ತಿಯ ಕಾರಣದಿಂದ ೬ ತಿಂಗಳಲ್ಲಿಯೇ ಹೈಸ್ಕೂಲು ಬಿಟ್ಟೆ.

ರಾಜಕೀಯ, ಸಾಮಾಜಿಕ ರಂಗಗಳಲ್ಲಿ ಹೆಸರು ಪಡೆದ ನಮ್ಮ ತಂದೆಯವರು ಧಾರ್ಮಿಕ ಮನೋಭಾವದವರು, ಆರ್ಥಿಕವಾಗಿ ಅನುಕೂಲಸ್ಥರು. ಕಿರಾಣಿ ಅಂಗಡಿ, ಅರಿವೆ ಅಂಗಡಿ, ಒಕ್ಕಲುತನವನ್ನು ನಿಭಾಯಿಸುತ್ತಿದ್ದರು. ಶಾಲೆ ಬಿಟ್ಟ ನನ್ನನ್ನು ಕಿರಾಣಿ ಮತ್ತು ಅರಿವೆ ಅಂಗಡಿಗಳಲ್ಲಿ ಕುಳ್ಳಿರಿಸಿದರು. ಆದರೆ ವ್ಯವಹಾರ ಬುದ್ಧಿ ನನ್ನ ಮಿದುಳಿನಲ್ಲಿ ಚಿಗಿತುಕೊಳ್ಳಲೇ ಇಲ್ಲ. ಕಲಾಸಕ್ತಿ ಮಾತ್ರ ನನ್ನ ಅನೇಕ ಹವ್ಯಾಸ ಗಳಿಗೆ ಸತ್ವನೀಡಿತ್ತು.

ಕನ್ನಡ ಶಾಲೆಯಲ್ಲಿ ಇದ್ದಾಗಲೇ ಆಗಷ್ಟ ೧೫ – ಜನವರಿ ೨೬ ಈ ಸಂದರ್ಭದಲ್ಲಿ ನಾಟಕ ಮಾಡುವಾಗ ಅಭಿನಯದ ಮೂಲಕ ನಾನೇ ಎಲ್ಲರ ಗಮನ ಸೆಳೆಯುತ್ತಿದ್ದೆ. ನಾನು ಶಾಲೆಯಲ್ಲಿರುವಾಗ ಕೆಲವು ಆತ್ಮೀಯ ಕಲಾವಿದರು "ಹೇಮರಡ್ಡಿ ಮಲ್ಲಮ್ಮ" ನಾಟಕದ ಪೂಜೆ ಮಾಡಿದರು. ಆಗ ನನ್ನನ್ನು ಕರೆದು 'ನಾಗಮ್ಮ'ನ ಪಾತ್ರ ಕೊಟ್ಟರು. ಬಹಳ ಉತ್ಸಾಹದಿಂದ ಆ ಪಾತ್ರ ನಿರ್ವಹಿಸಿ ಎಲ್ಲರ ಮೆಚ್ಚುಗೆ ಗಳಿಸಿದೆ. ಅವರ ಉತ್ತೇಜನ ನನಗೆ ಹುಚ್ಚು ಹಿಡಿಸಿತು. ನಾನು ಕಲಾದೇವತೆಯ ಆರಾಧಕ ನಾದೆ. ಮುಂದೆ ನನ್ನ ಸೋದರ ಮನೋಹರ ಜತ್ತಿ ಅವರ ಪ್ರೇರಣೆಯಿಂದ "ಬಾಲಚಂದ್ರ" ನಾಟಕವಾಡಿದೆವು.

ನನ್ನ ವೃತ್ತಿಯ ಲಾಭವೆಲ್ಲ ಪ್ರವೃತ್ತಿಗಳಿಗೆ ಹೆಚ್ಚು ಪಾಲು ಹೋಗುತ್ತಿದ್ದರೂ ಅದರ ಬಗ್ಗೆ ಕಿಂಚಿತ್ ಚಿಂತಿಸದೆ ನನ್ನ ಹವ್ಯಾಸಗಳಿಗೆ ನೀರು, ಗೊಬ್ಬರ ಹನಿಸ ತೊಡಗಿದೆ. ಈವೊಂದು ಸಂದರ್ಭ ೨೬–೪–೧೯೬೨ ರಂದು ನನ್ನ ತಂದೆಯವರು ಶಿವಾಧೀನರಾದರು. ಕಂಗಾಲಾದ ನನ್ನ ಮೇಲೆ ಮನೆತನದ ಭಾರಬಿದ್ದಿತು. ತಾಯಿ, ಹೆಂಡತಿ, ಚಿಕ್ಕತಂಗಿ–ಮಗ ಇವರ ಪಾಲನೆ–ಪೋಷಣೆ ನನ್ನ ಕರ್ತವ್ಯವಾಯಿತು. ವೃತ್ತಿ–ಪ್ರವೃತ್ತಿಗಳ ಮಧ್ಯೆ ಹೋರಾಟ ನಡೆಸಿದೆ. ಎರಡರಿಂದಲೂ ವಿಮುಖವಾಗದ ಜವಾಬ್ದಾರಿ. ಆರ್ಥಿಕ ಸಂಕಟ ಶುರುವಾಯಿತು. ಸಂಗೀತ–ಸಾಹಿತ್ಯ–ಅಭಿನಯಗಳ ಅಭಿರುಚಿಯಿಂದಾಗಿ ನನ್ನ ಸಂಸಾರದ ಆರ್ಥಿಕ ಸ್ಥಿತಿ ಶೋಚನೀಯವಾಯಿತು. ಆದರೆ ಸೋಲಲಿಲ್ಲ. ವೃತ್ತಿಯಲ್ಲಿ ಹೆಜ್ಜೆ ತಪ್ಪಿದರೂ, ಪ್ರವೃತ್ತಿಯ ಗೆಜ್ಜೆಯ ನಾದ ದೂರಾಗಲಿಲ್ಲ. ಅದು ಇನ್ನಷ್ಟು ಆಕರ್ಷಿತವಾಯಿತು.

ಸರ್ವಶ್ರೀ ಯಮುನಪ್ಪ ಹಲವೆಗಾರ, ವೀರಪ್ಪ ಇಜೇರಿ, ಗುರುಲಿಂಗಪ್ಪ ಜುಮನಾಳ, ಸಂಗಪ್ಪ ಮಮದಾಪೂರ, ವಿರುಪಾಕ್ಷಪ್ಪ ಕೋರಿ, ಬಸವ ಆವಟಿ, ಶಿವಗೊಂಡ ಪಾಟೀಲ, ಎಂ. ಬಿ. ಪಾಟೀಲ, ಹಾಜಪ್ಪ ಕಂಬಾರ, ಹಾಜಪ್ಪ ಕುಂಬಾರ, ನಾನಾಸಾಹೇಬ ಕಳಾವಂತ, ವೀರಯ್ಯ ಸಾಲಿಮಠ, ಘೂಳಪ್ಪ ಆವಟಿ ಇವರೊಂದಿಗೆ ಕೂಡಿಕೊಂಡು 'ಅರಣೋದಯ ನಾಟ್ಯ ಸಂಘ'ವೊಂದನ್ನು ಕಟ್ಟಿದೆವು. ಪ್ರತಿ ವರುಷ ನಮ್ಮೂರ ಜಾತ್ರೆಗೆ ನಾಟಕವಾಡಲಾರಂಭಿಸಿದೆವು.

ನಮ್ಮ ಸಂಘದ ಮೊದಲ ನಾಟಕ 'ಕಾರಸ್ಥಾನ'. ಅದರಲ್ಲಿ ನನ್ನದು 'ಕಮಲಾ' ಎಂಬ ಸ್ತ್ರೀಪಾತ್ರ. ಅದು ನನಗೆ ಅಭಿನಯದಲ್ಲಿ ಆಸಕ್ತಿ ತುಂಬಿತು. ಮುಂದೆ 'ದಸರಾ' ನಾಟಕದಲ್ಲಿ 'ಸುಶೀಲಾ'ನ ಪಾತ್ರ ನನಗೆ ಹೆಸರು ತಂದಿತು. ಮುಂದೆ 'ದೀಪಾವಳಿ', 'ಅಣ್ಣತಂಗಿ', 'ಆದರ್ಶಪ್ರೇಮ', 'ಬದುಕು ಬಂಗಾರವಾಯ್ತು', 'ಹುಲಿಮಗಳು' ಹೀಗೆ ಅನೇಕ ನಾಟಕಗಳಲ್ಲಿ ಸ್ತ್ರೀಪಾತ್ರ ವಹಿಸುತ್ತಿದ್ದೆ. ನಮ್ಮ ಹವ್ಯಾಸಿ ಬಳಗದ ಸಂಘ ಮುಂದೆ ತಟಸ್ಥಗೊಂಡರೂ ನನ್ನ ಅಭಿನಯದಲ್ಲಿನ ಆಸಕ್ತಿ ಕಮರಲಿಲ್ಲ. ಸುತ್ತಮುತ್ತಲಿನ ಗ್ರಾಮದ ಜನರು ನನ್ನನ್ನು ಪಾತ್ರ ಮಾಡಲು, ನಾಟಕದ ನಿರ್ದೇಶನ ಮಾಡಲು ಆಹ್ವಾನಿಸತೊಡಗಿದರು. ಈ ಎರಡೂ ಕೆಲಸಗಳಲ್ಲಿ ನಾನು ಶ್ರದ್ಧೆಯಿಂದ ಯಶಸ್ಸು ಪಡೆದೆ.

ಬಹುದಿನ ಕಳೆದಮೇಲೆ ನಮ್ಮೂರಿನಲ್ಲಿ ವೀರಪ್ಪ ಇಜೇರಿ ಅವರ ನಿರ್ದೇಶನ ದಲ್ಲಿ "ದೇವರಿಗೆ ನೆನಪಿಲ್ಲ" ಎಂಬ ನಾಟಕ ಆಡಿದೆವು. ಅದರಲ್ಲಿ ನನ್ನದು 'ಬಟಾಟಿ' ಎಂಬ ಪುರುಷ ಪಾತ್ರ. ಅದು ಹಾಸ್ಯ ರಸದೂಟವನ್ನೇ ಉಣಬಡಿಸಿತು ಜನರಿಗೆ. ಯಾವುದೇ ವೃತ್ತಿನಾಟಕ ಕಂಪನಿಗಳು ನಮ್ಮೂರಿಗೆ ಬಂದರೂ ಅವರ ನಾಟಕಗಳಲ್ಲಿ ನನಗೊಂದು ಪಾತ್ರ ಸಿಗುತ್ತಿತ್ತು.

ಮುಂದೊಮ್ಮೆ ನಮ್ಮೂರಿನ ಕಲಾವಿದರು "ಶ್ರೀಕೃಷ್ಣ ಪಾರಿಜಾತ" ಕಲಿತರು. ಅದರಲ್ಲಿ ನನ್ನದು ಗೊಲ್ಲತಿಯ ಪಾತ್ರ. ವೀರಪ್ಪ ಇಜೇರಿ ಅವರದು ಭಾಗವತ ಪಾತ್ರ. ಇದರ ಅನೇಕ ಪ್ರಯೋಗಗಳು ಯಶಸ್ವಿಯಾದವು.

ಅಭಿನಯವಿಲ್ಲದೆ ಹೊತ್ತುಗಳೆಯುವ ಮನಸ್ಸಾಗಲಿಲ್ಲ. ರೇಡಿಯೋ ನಾಟಕ ಗಳಲ್ಲಿ ಅಭಿನಯಿಸುವ ಬಯಕೆ ಬಲಿಯಿತು. ಆಕಾಶವಾಣಿ ಧಾರವಾಡಕ್ಕೆ ಅರ್ಜಿ ಹಾಕಿದೆ. ಸಂದರ್ಶನಕ್ಕೆ ಕರೆದರು. ಯಶಸ್ಸು ಸಿಗಲಿಲ್ಲ. ಹಲವಾರು ಸಲ ಪ್ರಯತ್ನಿಸಿ ವಿಫಲ ನಾದೆ. ೨೪–೧೦–೧೯೬೭ರಲ್ಲಿ ನಾನು ಅಭಿನಯಿಸಿದ "ಕಿತ್ತೂರ ಚೆನ್ನಮ್ಮ" ನಾಟಕ ಆಕಾಶವಾಣಿ ಧಾರವಾಡ–ಗುಲಬರ್ಗಾ ಕೇಂದ್ರದಿಂದ ಪ್ರಸಾರವಾಯಿತು. ಆ ಮೂಲಕ ಸತತವಾಗಿ ೧೦ ವರುಷ ರೇಡಿಯೋ ನಾಟಕಗಳಲ್ಲಿ ನಾನು ಅಭಿನಯಿಸಿದೆ. ಮುಂದೆ ೧೯೭೪ರಲ್ಲಿ "ಭಾರತ ರತ್ನ" ಎನ್ನುವ ಕನ್ನಡ ಚಲನಚಿತ್ರವಲ್ಲಿ ಒಂದು

ಚಿಕ್ಕ ಪಾತ್ರದಲ್ಲಿ ಅಭಿನಯಿಸಿದೆ. ರಂಗಭೂಮಿ – ರೇಡಿಯೋ ನಾಟಕ – ಬೈಲಾಟ. ಸಿನೆಮಾ ಅಭಿನಯ ನನಗೆ ತೃಪ್ತಿ ತಂದಿತು.

ಈಗ ನನ್ನ ಅಭಿರುಚಿ ಸಾಹಿತ್ಯದ ಕಡೆಗೆ ತಿರುಗಿತು. ಇದಕ್ಕೆ ಕಾರಣರಾದವರು ನಮ್ಮೂರಿಗೆ ಮೆಡಿಕಲ್ ಆಫೀಸರಾಗಿ ಬಂದ ಡಾ. ಎಚ್. ಜಿ. ಎಸ್. ರಾಜನ್. ಅವರು ಪ್ರೀತಿ ಔದಾರ್ಯದಿಂದ ನನ್ನಲ್ಲಿ ಸಾಹಿತ್ಯ ಕಲೆಗೆ ಸಮೃದ್ಧಿ ಸತ್ವ ತುಂಬಿದರು. ಶಾಲೆಯಲ್ಲಿದ್ದಾಗ ಓದು ಎಂದರೆ ವಾಕರಿಕೆ ಎನ್ನುತ್ತಿದ್ದ ನಾನು. ಈಗ ಅಂಗಡಿಯಲ್ಲಿ ಕುಳಿತು ವ್ಯಾಪಾರ ಮಾಡುತ್ತಿದ್ದರೂ ಓದುವ ಕಡೆಗೆ ನನ್ನ ಗಮನ ಹರಿಯ ತೊಡಗಿತು.

ಕನ್ನಡ ಸಾಹಿತ್ಯ. ಕಾವ್ಯ. ವಿಮರ್ಶೆ ಓದಿದೆ. ಶರಣ ಸಾಹಿತ್ಯವನ್ನು ಓದಿದೆ. ೧೨ ವರ್ಷದ ಸತತ ವಾಙ್ಮಯ ತಪಸ್ಸಿನ ಫಲವಾಗಿ ಕಥೆ. ಲೇಖನ. ಕವನ ಬರೆಯಲು ಆರಂಭಿಸಿದೆ. ನನ್ನ ಸಾಹಿತ್ಯ ಕೃತಿ ಜೀವದುಂಬಿಗೊಳ್ಳುವ ಸಮಯಕ್ಕೆ ಸರಿಯಾಗಿ ಶ್ರೀ ಶಂ. ಗು. ಬಿರಾದಾರ ಅವರು ಶಿಕ್ಷಕರಾಗಿ ನಮ್ಮ ಗ್ರಾಮಕ್ಕೆ ಬಂದರು. ಅವರಿಂದ ನನಗೆ ಸ್ಫೂರ್ತಿ ಸಿಕ್ಕಿತು. ನಾನು ಬರೆದಿಟ್ಟ ಕಥೆಗಳನ್ನು ತೋರಿಸಿದೆ. ಅವರು ಬಹುವಾಗಿ ಮೆಚ್ಚಿಕೊಂಡು ಉತ್ತೇಜಿಸಿದರಷ್ಟೇ ಅಲ್ಲ ಅವುಗಳ ಪ್ರಕಟಣೆಗಾಗಿ ವಿಜಾಪೂರಕ್ಕೆ ಒಯ್ದು ಶ್ರೀ ಪಿಸು ಸಂಗಮೇಶ ಅವರ ಶಕ್ತಿ ಮುದ್ರಣಾಲಯದಲ್ಲಿ ಕೊಟ್ಟರು. 'ಅಮೂಲ್ಯ ಕಾಣಿಕೆ' ಎಂಬ ನನ್ನ ಕಥಾಸಂಕಲನ ಅಚ್ಚುಗೊಂಡಿತು. ಈ ಕೃತಿ ಪ್ರಸಿದ್ಧ ಕಾದಂಬರಿಕಾರ ಡಿ. ಮಿರ್ಜಿ ಅಣ್ಣಾರಾಯರಿಂದ ೧–೩–೧೯೬೪ ರಂದು ಬಿಡುಗಡೆಗೊಂಡಿತು.

ಮುಂದೆ ಶಂ. ಗು. ಬಿರಾದಾರ ಅವರ ಒಡನಾಟದಲ್ಲಿ ಅನೇಕ ಸಾಹಿತಿಗಳ ಪರಿಚಯವಾಗಿ, ಸಾಹಿತ್ಯ ಸಭೆ, ಸಮ್ಮೇಲನಗಳಲ್ಲಿ ಭಾಗವಹಿಸುವ ಕ್ರಿಯೆ ನಡೆಯಿತು. ಡಾ. ಕೆ. ಮುದ್ದಣ್ಣ(ಸತ್ಯಾನಂದ) ಅವರು, ಪ್ರೊ. ಪಿ. ವ್ಹಿ. ವಜ್ರಮಟ್ಟಿ ಹಾಗೂ ಇನ್ನಿತರ ಅನೇಕ ಕವಿ. ಸಾಹಿತಿಗಳ ನಿಕಟ ಸಂಪರ್ಕ ಸಿಕ್ಕು ಸಾಹಿತ್ಯಾಭಿರುಚಿ ಅಧಿಕಗೊಂಡಿತು. ಇದರ ಪರಿಣಾಮವಾಗಿ ೧೨–೫–೭೭ರಲ್ಲಿ ನನ್ನ ಸಂಪಾದಿತ ಕೃತಿ 'ಬಸವತತ್ತ್ವ ದರ್ಶನ' ಪ್ರಕಟವಾಯಿತು.

೨೮–೩–೭೯ರಲ್ಲಿ ಕಾವ್ಯಾನಂದರ ಮುನ್ನುಡಿಯೊಂದಿಗೆ ಪ್ರಕಟವಾದ 'ಭಾವ ಸೌರಭ' ಕವನ ಸಂಕಲನ ಪೂಜ್ಯಶ್ರೀ ಬಂಥನಾಳ ಶಿವಯೋಗಿಗಳಿಂದ ಬಿಡುಗಡೆಯಾಯಿತು.

ಶಿವಯೋಗಿ ಸಿದ್ಧರಾಮ ಬಾಲಕನಾಗಿದ್ದಾಗ ಶ್ರೀಶೈಲ ಮಲ್ಲಿಕಾರ್ಜುನ ತಾನಾಗಿಯೇ ಸಾಗಿ ಬಂದಂತೆ, ನನ್ನ ಅರಿವಿನ ಗುರು ದಾರ್ಶನಿಕ ಸಾಹಿತಿ ಡಾ. ಜ.ಚ.ನಿ. ಅವರ ಸನ್ನಿಧಿ ನನಗೆ ಸಿಕ್ಕಿತು. ೨೪–೮–೭೨ ರಂದು ನೂಲಹುಣ್ಣಿಮೆ ದಿನ

ಪಾ. ಜ.ಚ.ನಿ. ಗುರುಗಳಿಂದ ಲಿಂಗಸಂಸ್ಕಾರ ನನಗೆ ಸಿಕ್ಕಿತು. ಪೂಜ್ಯರು ನನಗೆ ವಚನಗಳನ್ನು ಬರೆಯಲು ಪ್ರೇರಣೆ ನೀಡಿದರು. ಆ ಫಲವಾಗಿ ದಿನಾಂಕ ೪–೯–೭೨ ರಂದು ಪಾ. ಜ.ಚ.ನಿ. ಅವರ ಅಮೃತ ಹಸ್ತದಿಂದ "ವಚನಾಮೃತ" ವಚನ ಸಂಕಲನ ಬಿಡುಗಡೆಯಾಯಿತು.

ಹುಬ್ಬಳ್ಳಿ ಮೂರುಸಾವಿರ ಮಠದ ಉಪನ್ಯಾಸ ಗ್ರಂಥ ಮಾಲಿಕೆಯಲ್ಲಿ ನನ್ನ ಉಪನ್ಯಾಸ ಗ್ರಂಥ "ಶರಣರು ನಕ್ಕಾಗ" ಎಂಬ ಚಿಕ್ಕ ಪುಸ್ತಕ ೨೯–೪–೭೯ರಂದು ಶ್ರೀ ಎಸ್. ಎಸ್. ಒಡೆಯರ ಅವರಿಂದ ಹುಬ್ಬಳ್ಳಿಯ ಮೂರುಸಾವಿರ ಮಠದಲ್ಲಿ ಬಿಡುಗಡೆಯಾಯಿತು.

ಈ ಮಧ್ಯೆ ಮತ್ತು ಆಮೇಲೆ ಕನ್ನಡ ದಿನಪತ್ರಿಕೆಗಳಲ್ಲಿ ನನ್ನ ಲೇಖನ, ಕಥೆ, ಕವನ, ವಚನಗಳು ಪ್ರಕಟಗೊಂಡಿವೆ. ಸಾಹಿತ್ಯ ಕ್ರಿಯೆಗಳಲ್ಲಿ ಅದ್ವಿತೀಯನಾಗ ದಿದ್ದರೂ ನನ್ನ ಪ್ರತಿಭೆಗೆ ದಕ್ಕಿದ ವಿಚಾರವನ್ನು ಸಾಹಿತ್ಯರೂಪದಲ್ಲಿ ನೀಡಿ ಸಹೃದಯರ ಸಂಪ್ರೀತಿ. ಸ್ನೇಹವನ್ನು ಪಡೆದುಕೊಂಡ ನನಗೆ ಸಂತೃಪ್ತಿ ಸಿಕ್ಕಿದೆ.

**ರಾಜಕೀಯ – ಸಾಮಾಜಿಕ ದಾರಿಯಲ್ಲಿ :**

ಅಭಿನಯ. ಸಾಹಿತ್ಯ ರಂಗಗಳಲ್ಲಿ ಚೇತೋಹಾರಿಯಾಗಿದ್ದ ನಾನು ಅಚಾನಕ್ ರಾಜಕೀಯ ದಾರಿಯಲ್ಲಿ ನಡೆಯಬೇಕಾದುದರ ಪ್ರಮೇಯ ಉಂಟಾಯಿತು. ಬಹುಶಃ ನನ್ನ ಸ್ವಭಾವಕ್ಕೆ ಒಗ್ಗದ ಈ ಕ್ಷೇತ್ರ ತಿಕೋಟಾ ಜನರ ಪ್ರೀತಿ ಆದರದ ಉಡುಗೊರೆ ಯಾಗಿ ನನ್ನ ಪಾಲಿಗೆ ಬಂದಿತು. ಟೌನ ಪಂಚಾಯಿತಿಯ ಸಾಮಾನ್ಯ ಸದಸ್ಯತ್ವ ದಿಂದ ೨೨–೪–೭೧ ರಂದು ನಡೆದ ಉಪ ಚುನಾವಣೆಯಲ್ಲಿ ಟೌನ್ ಪಂಚಾಯಿತಿಯ ಚೇರಮನ್ನನಾಗಿ ಅವಿರೋಧದಿಂದ ಆಯ್ಕೆಯಾದೆ. ೬ ವರುಷಗಳ ದೀರ್ಘ ಅವಧಿಯವರೆಗೆ ಈ ಹುದ್ದೆಯಲ್ಲಿದ್ದುಕೊಂಡು ಜನರ ಹಿತಕ್ಕಾಗಿ, ಊರಿನ ಸಮೃದ್ಧಿ ಗಾಗಿ, ಸಮಾಜದ ಉನ್ನತಿಗಾಗಿ ಹೋರಾಡಿದೆ – ಶ್ರಮಿಸಿದೆ. ಆದರೆ ರಾಜಕೀಯ ನನ್ನನ್ನು ಮತ್ತಗ ಮಾಡಿತೆನ್ನಬೇಕು. ದಿನ ದಿನಕ್ಕೂ ತನ್ನ ಮೌಲ್ಯ ಕಳೆದು ಕೊಳ್ಳುತ್ತ ಕ್ಷುಲ್ಲಕವಾಗುತ್ತಿರುವ ರಾಜಕೀಯ ಕ್ಷೇತ್ರದ ಬಗ್ಗೆ ಹೆಚ್ಚಾಗಿ ನೋವು ಅನು ಭವಿಸಿದ ನಾನು ೨೧–೫–೭೭ರಂದು ಚೇರಮನ್ ಸ್ಥಾನಕ್ಕೆ ರಾಜೀನಾಮೆ ನೀಡಿ ನಿಶ್ಚಿಂತನಾದೆ.

೨೨–೪–೭೧ ರಿಂದ ಬಾಲಚಂದ್ರ ವಾಚನಾಲಯದ ಚೇರಮನ್ ಆಗಿದ್ದ ನಾನು ೨೬-೩-೭೮ರಲ್ಲಿ ಆ ವಾಚನಾಲಯವನ್ನು ಕೇಂದ್ರ ಗ್ರಂಥಾಲಯವನ್ನಾಗಿ ಮಾಡುವಲ್ಲಿ ಪ್ರಯತ್ನಿಸಿ ಸಫಲನಾದೆ. ರಾಜಕೀಯವಾಗಿ ಸೋತ ನಾನು ಸಾಮಾಜಿಕವಾಗಿ ಅದರಲ್ಲೂ ಜನತೆಗೆ ಜ್ಞಾನದಾಹಕ್ಕೆ ಸಂತೃಪ್ತಿ ನೀಡುವ, ಓದುವ ಹವ್ಯಾಸಕ್ಕೆ ದಾರಿ ಮಾಡಿಕೊಡುವ ನಿಟ್ಟಿನಲ್ಲಿ ಈ ಗ್ರಂಥಾಲಯವನ್ನು ಶಾಶ್ವತವಾಗಿ ನಿಲ್ಲಿಸುವಂತೆ

ಮಾಡಿದ ಕೆಲಸದಿಂದ ನಾನು ತೃಪ್ತನಾದೆ. ಕೋಟ್ಯಾಳದ ಶ್ರೀ ವಿಠ್ಠಲ ಡೋಣಿ ಯವರು ಸಹಾಯಕ ಗ್ರಂಥಾಧಿಕಾರಿಯಾಗಿ ಮೊಟ್ಟಮೊದಲಿಗೆ ಬಂದರು. ಅವರು ಸ್ನೇಹಜೀವಿಗಳಾಗಿ ನನ್ನ ಆಕಾಂಕ್ಷೆಗಳನ್ನು ಅರಳಿಸಿದರು. ಇಂದಿಗೂ ಆ ಗ್ರಂಥಾಲಯ ಜನತೆಗೆ ನೆಮ್ಮದಿಯ. ಜ್ಞಾನದ ದೇವಾಲಯವಾಗಿರುವುದು ಅಭಿಮಾನದ ವಿಷಯ.

**ಪ್ರವಚನ ಪ್ರಪಂಚಕ್ಕೆ :**

ತ್ರಿಕೋಟಾದ ಮಲ್ಲಿಕಾರ್ಜುನ ದೇವಾಲಯ ಒಂದು ಕಾಲಕ್ಕೆ ಹಾಳಾಗಿತ್ತು. ಇಲ್ಲ ಸಲ್ಲದ ಕಾರ್ಯಗಳಿಗೆ ಗೂಡಾಗಿತ್ತು. ಈ ಬಗ್ಗೆ ನೊಂದುಕೊಂಡ ಸಾಲಿಮಠದ ವೇ. ವಿರೂಪಾಕ್ಷಯ್ಯನವರು, ಶ್ರೀ ವೀರಪ್ಪ ಇಜೇರಿಯವರು ಧಾರ್ಮಿಕ ನೆಲೆಯ ಮೂಲಕ ದೇವಾಲಯಕ್ಕೊಂದು ಹೊಸರೂಪ ನೀಡಿದರು. ಸಮಾಜ. ಧರ್ಮದ ಬಗ್ಗೆ ಕಾಳಜಿಹೊಂದಿದ, ಸಂಗೀತವನ್ನು ಬಲ್ಲ ವಿರೂಪಾಕ್ಷಯ್ಯನವರ ಹಿರಿತನದಲ್ಲಿ. ಶ್ರೀ ವೀರಪ್ಪನವರ ಅಭಿರುಚಿಯಲ್ಲಿ ಅಲ್ಲಿ ನಿತ್ಯ ಭಜನೆ ಆರಂಭಗೊಂಡು ಅದು ದಿನಚರಿಯಾಯಿತು. ಶ್ರಾವಣ ಬಂದೊಡನೆ ವೀರಪ್ಪನವರು ಪುರಾಣ ಹೇಳುತ್ತಿದ್ದರು. ನನಗೂ ಆಸಕ್ತಿ. ನಾನು ದೇವಾಲಯಕ್ಕೆ ಹೋಗಿ ಕೇಳುತ್ತ ಕುಳಿತುಕೊಳ್ಳುತ್ತಿದ್ದೆ. ನನ್ನ ಆತ್ಮೀಯ ಬಂಧುಗಳಾದ, ನನ್ನ ಚೇತನವೇ ಆದ ವೀರಪ್ಪನವರು ಒಂದು ದಿನ ನನ್ನನ್ನು ಪುರಾಣದ ವೇದಿಕೆಯ ಮೇಲೆ ಕೂಡ್ರಿಸಿದರು. ಪುರಾಣ ಹೇಳಲು ಪ್ರೇರೇಪಿಸಿದರು. ಅದು ೧೯೭೦ರ ಕಾಲ. ನನ್ನ ಬದುಕಿನಲ್ಲಿ ಹೊಸ ಅಧ್ಯಾಯಕ್ಕೆ ನಾಂದಿ ಯಾದ ಸಮಯ – ನಾನು ಪುರಾಣದತ್ತ ಆಸಕ್ತಿ ಹೊರಳಿಸಿದೆ. ವೀರಪ್ಪ ಇಜೇರಿ ಯವರು ನನ್ನನ್ನು ಪ್ರವಚನ ಪ್ರಪಂಚಕ್ಕೆ ಎಳೆದು ತಂದ ಆದಿ ಗುರುವಾದರು. ಆ ದಿಸೆಯಲ್ಲಿ ನಾನು ಅಧ್ಯಯನಶೀಲನಾದೆ.

೧೯೭೧ರಲ್ಲಿ ವೀರಪ್ಪನವರೇ ಶ್ರಾವಣ ಮಾಸದಲ್ಲಿ ಬಾಬಾನಗರಕ್ಕೆ ಪ್ರವಚನ ಕ್ಕೆಂದು ಕಳಿಸಿದರು. ಆ ದಾರಿಯಲ್ಲಿ ನಡೆಯಲಾರಂಭಿಸಿದೆ. ಮುಂದೆ ಪೂಜ್ಯ ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು ಶ್ರೀ ಸಿದ್ಧಲಿಂಗೇಶ್ವರ ಮಹಾಸನ್ನಿಧಿ, ತೋಂಟದಾರ್ಯಮಠ. ಗದಗ ಅವರ ಅಪ್ಪಣೆಯ ಪ್ರಕಾರ ಒಮ್ಮೆ ಅಣ್ಣಿಗೇರಿಯಲ್ಲಿ ಪ್ರವಚನ ಸಾಗಿತ್ತು – ನೀನು ಪುರಾಣವನ್ನು ಹೇಳಬೇಕು. ಇದರ ಮಾರ್ಗದರ್ಶನ ಕ್ಕಾಗಿ ಶ್ರೀ ವೇ. ಸಿದ್ಲಿಂಗಯ್ಯನವರು ಹೊಸಮಠ ಅವರ ಬಳಿಗೆ ಕಳಿಸಲು ಸನ್ನಿಧಿಯ ಅಪ್ಪಣೆಯಾಯಿತು.

ಪಂಡಿತರೂ. ಸರಳ. ನಿರಾಡಂಬರ ಜೀವಿಗಳೂ ಆದ ಶ್ರೀ ಸಿದ್ಲಿಂಗಯ್ಯ ನವರು ನನಗೆ ಪುರಾಣ ಹೇಳುವ ಕಲೆಯನ್ನಷ್ಟೇ ಅಲ್ಲ. ಪುರಾಣಿಕರು ಹೋದಲ್ಲೆಲ್ಲ ಕರೆಯಿಸಿಕೊಂಡ ಜನರಿಗೆ ಭಾರವಾಗದಂತೆ. ತಲೆಬೇನೆಯಾಗದಂತೆ ಹೇಗಿರಬೇಕು

ಎಂಬುದನ್ನು ನುಡಿದು ಅಲ್ಲ ನಡೆದು ಕಲಿಸಿದರು. ಅವರ ಮಾರ್ಗದರ್ಶನದ ಫಲವಾಗಿ ಪ್ರವಚಕನಾದ ನಾನು ಪುರಾಣಿಕನಾದೆ.

ಪ್ರವಚನ – ಪುರಾಣ – ಕೀರ್ತನೆ ಈ ಮೂರು ದಾರಿಗಳಲ್ಲಿ ನಡೆಯುತ್ತ ಬಂದೆ. ಈಗಲೂ ಈ ದಾರಿಯಲ್ಲಿ ನಡೆಯುತ್ತಿರುವೆ.

**ಬದುಕಿನ ಬೆಳಕಾದ "ಶರಣ ಚರಿತಾಮೃತ" :**

ಪೂಜ್ಯ ಶ್ರೀ ಸಂಗನಬಸವ ಶಿವಯೋಗಿಗಳ ಅಪ್ಪಣೆಯ ಮೇರೆಗೆ ಪ್ರತಿವರ್ಷ ಶಿವರಾತ್ರಿಗೆಂದು ಬಂಥನಾಳ ಜಾತ್ರೆಗೆ ಹೋಗುತ್ತಿದ್ದೆ. ಹೀಗೊಮ್ಮೆ ಹೋದಾಗ ಶಿಕ್ಷಕ ಸಾಹಿತಿಗಳಾದ ಶ್ರೀ ಈಶ್ವರಚಂದ್ರ ಚಿಂತಾಮಣಿಯವರೂ ಬಂದಿದ್ದರು. ಅವರು ನನಗೆ ತುಂಬ ಆತ್ಮೀಯರು. ಹಿತೈಷಿಗಳು. ನನ್ನ ಓದಿನ ಹಸಿವೆಗಾಗಿ ಯಾವ ಯಾವ ಪುಸ್ತಕಗಳನ್ನು ಓದಬೇಕೆಂದು ಅವರಿಗೆ ಕೇಳಿದೆ. ಅವರು "ಶರಣ ಚರಿತಾಮೃತ" ತೋರಿಸಿದರು. ಅದು ನನ್ನ ಗಮನವನ್ನು ತೀವ್ರವಾಗಿ ಸೆಳೆಯಿತು. ಶ್ರೀ ಸಿದ್ಧಯ್ಯ ಪುರಾಣಿಕ (ಕಾವ್ಯಾನಂದ)ರು ಬರೆದ ಶರಣ ಚರಿತಾಮೃತ ಅಂದಿನಿಂದ ನನ್ನ ಪ್ರವಚನ ವೃತ್ತಿಗೆ ಪಠ್ಯಪುಸ್ತಕವಾಯಿತು.

೧೯೭೭ರಲ್ಲಿ ಶ್ರಾವಣ ಮಾಸದ ಪುರಾಣಕ್ಕಾಗಿ ನನ್ನನ್ನು ಆತ್ಮೀಯ ಸ್ನೇಹಿತರಾದ ಶ್ರೀ ಜಿ. ಎಸ್. ಅನ್ನದಾನಿಯವರು ಬೆಳಗಲ್ಲಕ್ಕೆ ಕರೆದುಕೊಂಡು ಹೋದರು. ಒಂದು ತಿಂಗಳು ಪೂರ್ತಿ 'ಶರಣ ಚರಿತಾಮೃತ'ದ ಮೇಲೆ ಪ್ರವಚನ ಮಾಡಿದೆ. ಅದು ತುಂಬ ಯಶಸ್ವಿಯಾಯಿತು. ಅದು ನನ್ನ ಬದುಕಿಗೆ ಬಣ್ಣ ತೀಡಿತು. ನನ್ನ ಪುರಾಣ ಪ್ರವೃತ್ತಿಗೆ ಬೆಳಕಾಯಿತು. ಬಿಟ್ಟೂಬಿಡದ ಕಾರ್ಯಕ್ರಮಗಳಿಗೆ ಕಾರಣವಾಯಿತು.

ಬೆಳಗಲ್ಲಿನ ಪುರಾಣ ಮಂಗಲ ಸಮಾರಂಭಕ್ಕೆ ಮಠದ ಒಡೆಯರಾದ ಚಿತ್ತರಗಿ ಇಲಕಲ್ಲ ಸಂಸ್ಥಾನ ಮಠದ ಪೀಠಾಧಿಪತಿಗಳಾದ ಶ್ರೀ ಮ.ನಿ.ಪ್ರ.ಸ್ವ. ಮಹಾಂತ ಮಹಾಸ್ವಾಮಿಗಳು ಹಾಗೂ ಶಿವಯೋಗ ಮಂದಿರದ ಪೂಜ್ಯ ಶ್ರೀ ಮ.ನಿ.ಪ್ರ. ಸದಾಶಿವ ಮಹಾಸ್ವಾಮಿಗಳು, ಹಾನಗಲ್ಲ ಅವರು ಆಗಮಿಸಿದ್ದು, ಅಂದು ನನ್ನ ಭಾಗ್ಯದ ಬಾಗಿಲು ತೆರೆಯಿತು. ಶಿವಯೋಗ ಮಂದಿರಕ್ಕೆ ಪ್ರತಿ ಶಿವರಾತ್ರಿಗೆ ಬೆಳಗಿನ ಶಿವಾನುಭವಕ್ಕೆ ಬರಲು ಶ್ರೀ ಸದಾಶಿವ ಮಹಾಸ್ವಾಮಿಗಳ ಅಪ್ಪಣೆಯಾಯಿತು.

ಪ್ರತಿವರುಷ ಶಿವರಾತ್ರಿ ಸಮಯದಲ್ಲಿ ಶಿವಯೋಗ ಮಂದಿರದಲ್ಲಿ ನನ್ನ ಶಿವಾನುಭವ ಪ್ರವಚನ ನಡೆಯಲಾರಂಭಿಸಿತು. ಮಾತೃಸಂಸ್ಥೆಯಾದ ಆ ಪವಿತ್ರ ತಾಣಕ್ಕೆ ಅಲ್ಲಿ ಅಧ್ಯಯನ ಮಾಡಿದ ನಾಡಿನ ಪರಗುರು ಚರಮೂರ್ತಿಗಳು ಆಗಮಿಸುತ್ತಿದ್ದರು. ಅವರೆಲ್ಲರ ಸಾನ್ನಿಧ್ಯ, ಪರಿಚಯ ನನಗಾಗಿ, ನನ್ನ ಪ್ರವಚನ ಕಾರ್ಯಕ್ಕೆ

ಅನುಕೂಲವಾಯಿತು. ಬಹುಕಡೆಗಳಿಂದ ನನಗೆ ಕರೆ ಬರತೊಡಗಿದವು. ಪೂಜ್ಯ ವಿಜಯಮಹಾಂತ ಅಪ್ಪಾಜಿ ಅವರು ಮುಂದಿನ ಶ್ರಾವಣ ಇಲಕಲ್ಲದಲ್ಲಿ ಆಗಬೇಕೆಂದು ಅಪ್ಪಣೆ ಮಾಡಿದರು. ಆದರೆ ಶ್ರಾವಣಕ್ಕೆ ಮುಂಚೆ ನನ್ನ ಆರೋಗ್ಯ ಕೆಟ್ಟಿತು. ನಾನು ಕ್ಷಯರೋಗ ಪೀಡಿತನಾದೆ.

**ಅಭಯ ಹಸ್ತಗಳ ಮಡಿಲಲ್ಲಿ :**

ಕ್ಷಯರೋಗದ ಬಾಧೆ ಒಂದುಕಡೆಗಿದ್ದರೆ, ಆರ್ಥಿಕವಾದ ಯಾತನೆ ಮತ್ತೊಂದು ಕಡೆಗೆ ನನ್ನನ್ನು ಭಯಭೀತನನ್ನಾಗಿ ಮಾಡಿದವು. ರೋಗವನ್ನು ಲೆಕ್ಕಿಸದೆ ಲಚ್ಯಾಣ ಕಾರ್ಯಕ್ರಮಕ್ಕೆ ಹೋದೆ. ಅಲ್ಲಿ ಪರಮಪೂಜ್ಯರಾದ ಶ್ರೀ ಮ. ನಿ. ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು, ಮೂರುಸಾವಿರಮಠ, ಹುಬ್ಬಳ್ಳಿ ಅವರು ಹಾಗೂ ಚಿತ್ತರಗಿ-ಇಲಕಲ್ಲದ ಪೂಜ್ಯಶ್ರೀ ಮ.ನಿ.ಪ್ರ. ಮಹಾಂತಪ್ಪಗಳವರು ಅಲ್ಲದೆ ಪೂಜ್ಯಶ್ರೀ ಷ. ಬ್ರ. ಡಾ. ಗುರುಸಿದ್ಧ ಶಿವಾಚಾರ್ಯರು. ಸಂಸ್ಥಾನಮಠ, ಕೆಳದಿ ರಾಜಗುರುಗಳು ಬಂದಿದ್ದರು.

ನಾನು ಪೂಜ್ಯ ಕೆಳದಿ ಅಪ್ಪಗಳವರಲ್ಲಿ ನನ್ನ ಅನಾರೋಗ್ಯದ ಬಗೆಗೆ ಹೇಳಿದಾಗ ಕೂಡಲೇ ಹುಬ್ಬಳ್ಳಿ ಜಗದ್ಗುರು ಸನ್ನಿಧಿ ಅವರಿಗೆ ಹೇಳಿ, ಘಟಪ್ರಭಾದ ಗುರುಸಿದ್ಧೇಶ್ವರ ಆಸ್ಪತ್ರೆಯಲ್ಲಿ ಉಪಚಾರದ ವ್ಯವಸ್ಥೆ ಮಾಡಿದರು. ಒಂದು ತಿಂಗಳು ಘಟಪ್ರಭೆಯ ಆಸ್ಪತ್ರೆಯಲ್ಲಿ ಇದ್ದ ನನಗೆ ಉಚಿತವಾಗಿ ಔಷಧ ಉಪಚಾರ ದೊರೆಯಿತು. ಹೆಚ್ಚಿನ ವೆಚ್ಚಕ್ಕಾಗಿ ಇಲಕಲ್ಲದ ಪೂಜ್ಯ ಅಪ್ಪಾಜಿ ಹಣ ಕಳಿಸುತ್ತಿದ್ದರು.

ಒಂದೊಮ್ಮೆ ಊರಲ್ಲಿ ಶ್ರಾವಣಮಾಸದ ಪ್ರವಚನಕ್ಕೆಂದು ಚಡಚಣದ ಶ್ರೀ ಪ್ರಭು ದೇವ ದೇವಾಲಯದವರ ಆಮಂತ್ರಣದ ಮೇರೆಗೆ ಒಂದು ತಿಂಗಳು ಹೋಗಿದ್ದೆ. ಅಲ್ಲಿ ಖ್ಯಾತ ಸಾಹಿತಿಗಳಾದ ಶ್ರೀ ಸಿಂಪಿಲಿಂಗಣ್ಣ ಹಾಗೂ ಶ್ರೀ ಜಹಗೀರದಾರ ಗುರುಗಳ ಒಡನಾಟದೊಂದಿಗೆ ಶ್ರೀ ಬಸವರಾಜು ಯಂಕಂಚಿ ಅವರ ಪರಿಚಯವಾಗಿತ್ತು. ಬಸವರಾಜ ನನ್ನ ಆತ್ಮೀಯ ಬಂಧು ಸೋದರರಾಗಿದ್ದರು. ಅವರು ನನ್ನ ಕೆಟ್ಟಕಾಲದಲ್ಲಿ, ಅನಾರೋಗ್ಯ ಪೀಡಿತನಾಗಿದ್ದಾಗ ಹಣದ ಸಹಾಯಮಾಡಿ, ತಮ್ಮ ಹೃದಯ ಶ್ರೀಮಂತಿಕೆಯನ್ನು ಮೆರೆಯುವುದರ ಜೊತೆಗೆ ಇಂದಿನವರೆಗೂ ತಮ್ಮ ಶ್ರೀಮಂತ ಹೃದಯದ ಮಧುರ ಸ್ನೇಹವನ್ನು ಜೀವಂತವಾಗಿ ಉಳಿಸಿಕೊಂಡು ಬಂದಿದ್ದಾರೆ.

ಹೀಗೆ ಪೂಜ್ಯರ, ಸ್ನೇಹಿತರ ಅಭಯ ಹಸ್ತಗಳ ಮಡಿಲಲ್ಲಿ ನಾನು ಆಶ್ರಯ ಪಡೆದು ರೋಗದಿಂದ ಮುಕ್ತನಾದೆ. ಬದುಕಿನಲ್ಲಿ ಹೊಸತನ ಚಿಗುರಿತು. ಆತ್ಮೀಯ ಭರವಸೆ ಮೂಡಿತು. ಹೊಸ ಕ್ಷಣಗಳನ್ನು ಎಚ್ಚರಿಕೆಯಿಂದ, ಇಷ್ಟೇ ಉತ್ಸಾಹದಿಂದ ಸ್ವೀಕರಿಸಿದೆ.

**ಕರುಣೆಯ ಕೂಸು :**

೧೯೭೧ರಿಂದ ಪುರಾಣ, ಪ್ರವಚನ, ಕೀರ್ತನಕ್ಕಾಗಿ ವಿಜಾಪೂರ, ಬೆಳಗಾಂವ, ಧಾರವಾಡ, ಕಾರವಾರ, ಗುಲಬರ್ಗಾ, ರಾಯಚೂರ, ಬಳ್ಳಾರಿ ಈ ಎಲ್ಲ ಜಿಲ್ಲೆಗಳ ಅನೇಕ ಹಳ್ಳಿ–ಪಟ್ಟಣಗಳಲ್ಲಿ ಸಂಚರಿಸಿದ್ದೇನೆ. ಅನೇಕ ಪೂಜ್ಯರ, ಹರಗುರು ಚರ ಮೂರ್ತಿಗಳ ದರ್ಶನ, ಆಶೀರ್ವಾದ ದೊರಕಿದೆ. ಅನೇಕ ಕವಿ, ಸಾಹಿತಿ, ಕಲಾವಿದರ ಪರಿಚಯವಾಗಿದೆ. ಅವರ ಸ್ನೇಹಸುಗಂಧ ದೊರಕಿದೆ. ಆತ್ಮೀಯತೆಯ ಸುಖ ದೊರೆತಿದೆ. ಅವರಿಂದ ಸೌಲಭ್ಯವೂ ಸಿಕ್ಕಿದೆ.

ಪ್ರತಿಸಲ ಗಾನಯೋಗಿ ಶಿವಯೋಗಿ ಪಂ. ಪಂಚಾಕ್ಷರ ಗವಾಯಿಗಳವರ ಪುಣ್ಯಾರಾಧನೆಗೆ ಗದುಗಿಗೆ ಹೋಗುತ್ತೇನೆ. ಶ್ರೀ ವೀರೇಶ್ವರ ಪುಣ್ಯಾಶ್ರಮದಲ್ಲಿ ನಾನು ಸಂಗೀತ ಕಲಿತಿಲ್ಲ ನಿಜ. ಆದರೆ ಅಲ್ಲಿ ಕಲಿತ ಕಲಾವಿದರಕ್ಕಿಂತಲೂ ಪರಮಪೂಜ್ಯ, ತ್ರಿಭಾಷಾಕವಿ, ಸಂಗೀತಸಾಮ್ರಾಟ, ಪೂಜಾನಿಷ್ಠರಾದ, ಉಭಯ ಗಾಯನ ವಿಶಾರದರಾದ ಡಾ. ಪುಟ್ಟರಾಜ ಅಜ್ಜನವರಲ್ಲಿ ನಾನು ಶ್ರದ್ಧೆ ಭಕ್ತಿಯಿಟ್ಟು ಆರಾಧಿಸುತ್ತಿರುವೆ. ನನ್ನಂತರಂಗದ ಅರಿವಿಗೆ, ನಾನಾರಾಧಿಸುವ ಕಲೆಗೆ ಅವರೇ ಗುರುವೆಂದು ಭಾವಿಸಿ, ಪ್ರತಿವರುಷ ಪುಣ್ಯಾರಾಧನೆಗೆ ನಾನು ತಪ್ಪದೇ ಗದುಗಿಗೆ ಹೋಗಿ ದರ್ಶನ, ಆಶೀರ್ವಾದ ಪಡೆದುಕೊಳ್ಳುತ್ತೇನೆ.

ನಾನು ಇಷ್ಟೊಂದು ಬೆಳಕಿಗೆ ಬರಲು, ಸದೃಢವಾಗಿ ನೆಲೆಯೂರಿ ನಿಲ್ಲಲು, ಸಮೃದ್ಧಿಯಿಂದ ಬದುಕಲು ಪೂಜ್ಯಶ್ರೀಗಳ ಹಸಿರು ಹಾರೈಕೆಯೇ ಕಾರಣ. ಇಂಥ ಹಾರೈಕೆ ನೀಡುವಲ್ಲಿ ಸಿದ್ಧಹಸ್ತರಾದ ಪರಮಪೂಜ್ಯರಾದ ಶ್ರೀ ಮ. ನಿ. ಪ್ರ. ಸ್ವ. ಬಂಥನಾಳ ಶಿವಯೋಗಿಗಳು. ಪರಮಪೂಜ್ಯ ಲಿಂ. ಶ್ರೀ ಮ. ನಿ. ಪ್ರ. ಸದಾಶಿವ ಸ್ವಾಮಿಗಳು ಹಾನಗಲ್ಲ, ಶಿವಯೋಗಮಂದಿರ: ಶ್ರೀ ಮ. ನಿ. ಪ್ರ. ಸ್ವ. ಮಹಾಂತ ಮಹಾಸ್ವಾಮಿಗಳು, ಚಿತ್ತರಗಿ-ಇಲಕಲ್ಲ: ಶ್ರೀ ಮನ್ಮಹಾರಾಜ ನಿರಂಜನ ಜಗದ್ಗುರು ಸಿದ್ಧಲಿಂಗ ಮಹಾಸ್ವಾಮಿಗಳು. ಡಂಬಳ-ಗದಗ: ಶ್ರೀ ಮ. ನಿ. ಜಗದ್ಗುರು ಅನ್ನದಾನ ಮಹಾಸ್ವಾಮಿಗಳು. ಮುಂಡರಗಿ: ಶ್ರೀ ಮ. ನಿ. ಜಗದ್ಗುರು ಹೇಮಕೂಟ ಸಿಂಹಾಸನಾಧೀಶ್ವರ ಸಂಗನಬಸವ ಮಹಾಸ್ವಾಮಿಗಳು. ಹೊಸಪೇಟೆ-ಬಳ್ಳಾರಿ: ಅಭಿನವ ಅನ್ನದಾನ ಮಹಾಸ್ವಾಮಿಗಳು ಹಾಲಕೇರಿ. ಶ್ರೀ ಮ. ನಿ ಜಗದ್ಗುರು ಕುಮಾರ ರಾಜೇಂದ್ರಶಿವಲಿಂಗೇಶ್ವರ ಮಹಾಸ್ವಾಮಿಗಳು, ಸಾವಳಗಿ; ಶ್ರೀ ಮ. ನಿ. ಜಗದ್ಗುರು ಪಂಚಮ ಶಿವಲಿಂಗೇಶ್ವರ ಮಹಾಸ್ವಾಮಿಗಳು, ನಿಡಸೋಸಿ: ಪ್ರಭು ಸ್ವಾಮಿಗಳು ಚರಂತಿಮಠ, ಬಾಗಲಕೋಟ: ಪೂಜ್ಯಶ್ರೀ ಮ.ನಿ.ಪ್ರ. ಪ್ರಭುರಾಜೇಂದ್ರ ಮಹಾಸ್ವಾಮಿಗಳು, ಅಮೀನಗಡ; ಪೂಜ್ಯಶ್ರೀ ಮ. ನಿ. ಪ್ರ. ಸ್ವ. ನೀಲಕಂಠ ಮಹಾಸ್ವಾಮಿಗಳು, ಮುರಗೋಡ; ಶ್ರೀ ಮ.ನಿ.ಪ್ರ.ಸ್ವ. ಸಿದ್ಧಲಿಂಗ ಮಹಾಸ್ವಾಮಿ

ಗಳು. ಪುಣ್ಯಾರಣ್ಯ ಅರಭಾವಿಮಠ; ತ್ರಿವಿಧ ದಾಸೋಹಮೂರ್ತಿ ಶ್ರೀ ಮ. ನಿ. ಪ್ರ. ಮಹಾಂತ ಅಪ್ಪಗಳವರು ಮುರುಘಾಮಠ, ಧಾರವಾಡ; ಬಬಲೇಶ್ವರದ ಪೂಜ್ಯ ಲಿಂ. ಶಾಂತವೀರ ಮಹಾಸ್ವಾಮಿಗಳು, ಈಗಿರುವ ಶ್ರೀ ಷ. ಬ್ರ. ಮಹಾದೇವ ಸ್ವಾಮಿಗಳು, ಪೂಜ್ಯ ಡಾ. ಗುರುಸಿದ್ಧ ಶಿವಾಚಾರ್ಯರು. ರಾಜಗುರುಗಳು ಕೆಳದಿ, ಪೂಜ್ಯಶ್ರೀ ಷ. ಬ್ರ. ಸಂಗನಬಸವ ಶಿವಾಚಾರ್ಯರು. ಪಟ್ಟಿಕಂಥಿ ಹಿರೇಮಠ, ಮನಗೂಳಿ: ಪೂಜ್ಯಶ್ರೀ ಷ. ಬ್ರ. ಬಸವಲಿಂಗ ಪಟ್ಟಾಧ್ಯಕ್ಷರು ಹಿರೇಮಠ, ತೆಲಸಂಗ: ಪರಮಪೂಜ್ಯ ವೇದಾಂತ ಕೇಸರಿ ಲಿಂ. ಮಲ್ಲಿಕಾರ್ಜುನ ಮಹಾಸ್ವಾಮಿ ಗಳು ಜ್ಞಾನಯೋಗಾಶ್ರಮ, ವಿಜಾಪೂರ; ಪೂಜ್ಯಶ್ರೀ ಬ್ರ. ಶ್ರೀ ಚಿಕ್ಕಶಿವಪುತ್ರ ಸ್ವಾಮಿಗಳು ಶಾಂತಾಶ್ರಮ, ಹುಬ್ಬಳ್ಳಿ, ಷಣ್ಮುಖಾರೂಢಮಠ ವಿಜಾಪೂರ: ಪೂಜ್ಯಶ್ರೀ ಸಿದ್ಧೇಶ್ವರ ಸ್ವಾಮಿಗಳು (ಬುದ್ಧೀಜಿ) ಜ್ಞಾನ ಯೋಗಾಶ್ರಮ. ವಿಜಾಪೂರ. ಪರಮಪೂಜ್ಯ ಮೌನತಪಸ್ವಿ ಚಿಕ್ಕೇನಕೊಪ್ಪ ಶರಣರು ಬಳಗಾನೂರ.

ಈ ಎಲ್ಲ ಪೂಜ್ಯರ ಉಪಕಾರವನ್ನು ಸ್ಮರಿಸುವುದು ನನ್ನ ಆದ್ಯಕರ್ತವ್ಯ. ಅವರೆಲ್ಲರ ಕರುಣೆಯ ಕೂಸು ನಾನು. ಅವರ ಕೃಪಾಕಟಾಕ್ಷಕ್ಕಾಗಿ ಹಗಲಿರುಳು ಹಂಬಲಿಸುವೆ. ನನ್ನ ಕೊನೆಯ ಉಸಿರು ಇರುವವರೆಗೂ ಅವರಿಗೆ ಕೃತಜ್ಞನಾಗಿರುವೆ.

೧೯೯೨ ಜನೇವರಿ ೧೯ ರಿಂದ ಹತ್ತು ದಿನ ಪರಮ ಪೂಜ್ಯರಾದ ಶ್ರೀ ಶ್ರೀ ಶ್ರೀ ಷಡಕ್ಷರ ಶಿವಯೋಗಿ ಸಿದ್ಧರಾಮ ಮಹಾಸ್ವಾಮಿಗಳವರ ಸುಕ್ಷೇತ್ರ ಮುಗಳಖೋಡ ಅವರಿಂದ ಪೂಜ್ಯ ಶಿವಶರಣೆ ನೀಲಮ್ಮತಾಯಿ ಅಸುಂಡಿ ಅವರ ಸಹಕಾರದಲ್ಲಿ ನನಗೆ ಮುಗುಳಖೋಡ ಶ್ರೀಮಠದಲ್ಲಿ ಪ್ರವಚನಕ್ಕೆ ಕರೆ ಬಂದಿತು. ಬಹಳ ಸಂತೋಷ ದಿಂದ ಹತ್ತು ದಿನ ಸೇವೆ ಮಾಡಿದೆ. ಪೂಜ್ಯ ಅಪ್ಪಾಜಿಯವರ ಅಡಿದಾವರೆಗಳಲ್ಲಿ ಸೇವೆ ಮಾಡಿದ್ದುದರ ಫಲವಾಗಿ ನನ್ನ ಜೀವನದ ಭಾಗ್ಯದ ಬಾಗಿಲು ತೆರೆಯಿತು. ಕಲಾವಿದರಿಗೆ, ಶಾಸ್ತ್ರಿಗಳಿಗೆ ಅಪ್ಪಗಳವರು ಕೊಡುಗೈಯಿಂದ ಸಂಭಾವನೆ ಆಶೀರ್ವದಿ ಸುವುದನ್ನು ಕೇಳಿದ್ದೆ. ಅದನ್ನು ಈಗ ಅನುಭವಿಸಿದೆ. ನನ್ನನ್ನು ಬಹಳ ಅಕ್ಕರತೆಯಿಂದ ಕಂಡು, ವರ್ಣನೆಗೂ ಮೀರಿದ ಗೌರವ ಕಾಣಿಕೆ ನೀಡಿ ಆಶೀರ್ವದಿಸಿದರು. ಜೀವನದ ಕೊನೆಯವರೆಗೂ ಅಪ್ಪಾಜಿ ಅವರ ಕೃಪಾಶೀರ್ವಾದವನ್ನು ಕೋರುತ್ತ ಕೃತಜ್ಞತೆ ಯಿಂದ ಸ್ಮರಿಸುವೆ.

'ದಾನಸಿರಿ' ಈ ನನ್ನ ಅಭಿನಂದನ ಗ್ರಂಥವನ್ನು ನುಡಿ ನೈವೇದ್ಯವೆಂದು ಪೂಜ್ಯ ಅಪ್ಪಾಜಿ ಅವರ ಚರಣಾರವಿಂದಗಳಲ್ಲಿ ಸಲ್ಲಿಸಿದ್ದು ಸ್ತುತ್ಯವೆಂದು ನನ್ನ ಅಭಿಮತ. ಮುಗಳಖೋಡ, ಜಿಡಗಾ, ಅಡಲೇರಿ ಇವಲ್ಲದೆ ದೇಶದ ಅಸಂಖ್ಯ ಮಠಗಳ ಅಧಿಪತಿಯಾಗಿ ಬಾಳಿನಲ್ಲಿ ನೊಂದುಬೆಂದು ಬಂದ ಭಕ್ತರ ಕಣ್ಣೀರನ್ನು ಒರೆಸಿ ಅವರ ಕಷ್ಟ–ಸುಖಗಳಲ್ಲಿ ಸ್ಪಂದಿಸಿ ಜನಪ್ರಿಯತೆಯ ಉತ್ತುಂಗ ಶಿಖರದಲ್ಲಿ

ಶೋಭಿಸುವ ಅಪ್ಪಾಜಿ ಅವರ ಬಗೆಗೆ ಬರೆದು ಕೃತಜ್ಞತೆ ಅರ್ಪಿಸುವುದು ನನ್ನ ಜಡ ಲೇಖನಿಯಿಂದ ಆಗದೆಂದು ಮನಸ್ಸಾ ಒಪ್ಪಿಕೊಳ್ಳುವೆ. ಅವರನ್ನು ಮತ್ತೊಮ್ಮೆ ಸ್ಮರಿಸಿ, ಅವರ ಸಾನ್ನಿಧ್ಯದಲ್ಲಿರುವ ಶ್ರೀ ಮಲ್ಲನಗೌಡ ಕೋಳಿಗುಡ್ಡ, ಶ್ರೀ ರಾಮಣ್ಣ ಒಡೆಯರ, ಮೂಡಲಗಿ ಹಾಗೂ ಅನೇಕರ ಆತ್ಮೀಯತೆಯನ್ನು ನೆನೆಯುವೆ.

**ಹೂವೊಡಲಿನ ಕಲಾವಿದರು, ಸ್ನೇಹಿತರು :**

ನನ್ನೊಂದಿಗೆ ಅನೇಕ ಕಲಾವಿದರು ಸ್ಪಂದಿಸುತ್ತ ತಮ ಅಗಾಧ ಪ್ರೀತಿಯನ್ನು, ಪ್ರತಿಭಾವಂತ ಕಲೆಗಾರಿಕೆಯನ್ನು ಅಭಿವ್ಯಕ್ತಿಸಿದ್ದಾರೆ. ನಾನು ಪ್ರಾರಂಭದಲ್ಲಿ ನಾಟಕ ಮಾಡುವಾಗಿನಿಂದಲೂ ಶ್ರೀ ಭೀಮಶಾ ಚಯಕೇರಿ, ಹೊಸಟ್ಟಿ ಅವರು ಹಾರ್ಮೋನಿಯಮ್ ಸಾಥಿಯಾಗಿ ಇದ್ದವರು. ಅವರೇ ಮುಂದೆ ನನ್ನ ಪ್ರವಚನ, ಪುರಾಣಕ್ಕೆ ಸಂಗೀತ ಸಂಯೋಜನೆ ನೀಡುತ್ತಿದ್ದರು. ತುಂಬ ಸಾತ್ವಿಕರೆಂದು, ಭೀಮಕವಿಗಳೆಂದು ಕರೆಯಿಸಿಕೊಳ್ಳುತ್ತಿದ್ದ ಅವರು ಒಳ್ಳೆಯ ಗವಾಯಿಗಳು ಕೂಡ. ಶ್ರೀ ಶಿವಕುಮಾರ ಹಿರೇಮಠ ಸಂಗೀತ ಶಿಕ್ಷಕರು, ಬಾಲಕಿಯರ ಪ. ಪೂ. ಮಹಾವಿದ್ಯಾಲಯ, ಜಮಖಂಡಿ ಇವರು ಕೂಡ ನನ್ನೊಂದಿಗೆ ಸಂಗೀತ ಸಾಥ ನೀಡಿದ್ದಾರೆ. ಈಗಲೂ ಆಗಾಗ ನೀಡುತ್ತಿದ್ದಾರೆ.

ಶ್ರೀ ಕೆ. ಕೆ. ಮಹಾದಾನಶೆಟ್ಟಿ ಕೆಲೂರ ಇವರು ಏಳು ವರುಷ ನನಗೆ ಸಂಗೀತ ಸಾಥ ನೀಡಿದ ಗವಾಯಿಗಳು. ಇದೀಗ ಐದು ವರ್ಷಗಳಿಂದಲೂ ಜಮಖಂಡಿ ತಾಲೂಕಿನ ತೊದಲಬಾಗಿಯ ಶ್ರೀ ರಾಚಯ್ಯಸ್ವಾಮಿಗಳು ಹಿರೇಮಠ ಕರ್ನಾಟಕ ರಾಜ್ಯ ಜಾನಪದ ಅಕಾಡೆಮಿಯ ಪ್ರಶಸ್ತಿ ವಿಜೇತರು. ಒಳ್ಳೆಯ ಗವಾಯಿಗಳಾದ ಇವರು ನನ್ನ ಪುರಾಣ–ಪ್ರವಚನ–ಕೀರ್ತನಗಳಿಗೆ ಸಂಗೀತ ಸಾಥ ನೀಡುತ್ತಿದ್ದಾರೆ. ಅವರು ಎಷ್ಟು ದೊಡ್ಡ ಕಲಾವಿದರೋ ಅಷ್ಟೇ ಒಳ್ಳೆಯವರು, ನಡೆ–ನುಡಿ, ವ್ಯವಹಾರ ಎಲ್ಲವೂ ಉತ್ತಮ – ಸಹೃದಯರೂ, ಸಾತ್ವಿಕರೂ ಆದ ಅವರು ಜೊತೆ ಕಲಾವಿದರಾಗಿ ದೊರೆತದ್ದು, ನನ್ನ ವೃತ್ತಿ ಜೀವನಕ್ಕೆ ಏನೆಲ್ಲ ಬಂದಿದೆ.

ನನ್ನ ಇಪ್ಪತ್ತು ವರ್ಷದ ವೃತ್ತಿಯಲ್ಲಿ ಅನೇಕರು ತಬಲಾವಾದಕರಾಗಿ ಸಾಥ ನೀಡಿದ್ದಾರೆ. ಅವರಲ್ಲಿ ಗಣಪತಿ ಕಂಬಾರ, ಶಿಕೋಟಾ; ರಾಮಣ್ಣ ಗೊರವ, ಆಲಗೂರ, ನಜೀರ ಅಹಮದ್ ಮುಲ್ಲಾ ಸೌದಿ, ಅಶೋಕ ಬಾಳಿಗೇರಿ, ಚಂದ್ರಕಾಂತ ಹೂಗಾರ, ಬಿಸನಾಳ, ರಾಜು ಮಿರ್ಜಿ, ಗೋಕಾಕ: ಬಸವರಾಜ ನಾಗರದಿನ್ನಿ, ಬಸವರಾಜ ಬಾಡನ್ನವರ, ಹುಲ್ಯಾಳ; ವಿರೂಪಾಕ್ಷಪ್ಪ ಅಕ್ಕಿ ಕುಡತಿನಿ, ಬಸಪ್ಪ ಹೂಗಾರ, ತೇರದಾಳ; ಶ್ರೀ ನಿಜಗುಣ ಸ್ವಾಮಿಗಳು ಹಿರೇಮಠ, ನಿಡೋಣಿ ಇವರೆಲ್ಲರೂ ಹಾಗೂ ಇನ್ನು ಅನೇಕಾನೇಕ ಕಲಾವಿದರು ತಬಲಾ ಸಾಥ ನೀಡಿ, ನನ್ನ ಪ್ರವಚನಕ್ಕೆ ಮೆರುಗು ತಂದಿದ್ದಾರೆ. ಇದೀಗ ಹೆಸರಾಂತ ತಬಲಾವಾದಕರಾದ ಶ್ರೀ ದೇವಪ್ಪ ಪೂಜೇರಿ

(ಹೊಸಗನಪ್ಪ) ಮುನಗೂಳಿ ಇವರು ನನ್ನ ಜೊತೆಗೆ ತಬಲಾ ಸಾಥ ಮಾಡುತ್ತಿದ್ದಾರೆ. ಹೆಸರಾಂತ ಸಹೃದಯ ಕಲಾವಿದರಾದ ಇವರು ಅನೇಕ ನಾಟಕ–ಆಟಗಳಲ್ಲಿ ಜನಪ್ರಿಯ ತಬಲಾವಾದಕರೆಂದು ಪ್ರಸಿದ್ಧಿ ಪಡೆದಿದ್ದಾರೆ.

ಕೀರ್ತನೆ ಮಾಡಲು ನಾನು ಆಕಾಶವಾಣಿ ನಿಲಯಕ್ಕೆ ಹೋಗುತ್ತಿದ್ದೆ. ಈಗಲೂ ಕರೆಬಂದಾಗ ಹೋಗುತ್ತಿರುತ್ತೇನೆ. ೨೭–೫–೧೯೮೪ ರಲ್ಲಿ ನನ್ನ ಮೊದಲ ಕೀರ್ತನೆ "ಶಿವಯೋಗಿ ಸಿದ್ಧರಾಮ" ಆಕಾಶವಾಣಿ ಧಾರವಾಡ, ಗುಲಬರ್ಗಾ ಕೇಂದ್ರದಿಂದ ಪ್ರಸಾರವಾಯಿತು. ಇಂದಿಗೂ ಪ್ರಸಾರವಾಗುವ ಕೀರ್ತನೆಗಳಿಗೆ ಸರ್ವಶ್ರೀ ವಸಂತ ಕನಕಾಪೂರ, ಬಸವರಾಜ ಗೋನ್ಹಾಳ, ಚಂದ್ರಶೇಖರ ಪುರಾಣಿಕಮಠ, ಕಬಾಡಿ, ಚವ್ಹಾಣ, ಬಿ. ಎಸ್. ಮಠ, ಅರ್ಜುನಸಾ ನಾಕೋಡ, ಬಾಲಚಂದ್ರ ನಾಕೋಡ, ರಘುನಾಥ ನಾಕೋಡ, ಶಂಕರ ಕವಡಿಮಟ್ಟಿ, ಸೂರಜ ಪುರಂಧರೆ – ಹೀಗೆ ಅನೇಕ ಶ್ರೇಷ್ಠ ಕಲಾವಿದರು ಸಹಕಲಾವಿದರಾಗಿ ನನ್ನ ಕಲೆಗೊಂದು ಮೆರಗು ತಂದಿದ್ದಾರೆ.

ಶ್ರೀ ಬಾನಂದೂರ ಕೆಂಪಯ್ಯನವರು ನನ್ನ ತತ್ವಪದಗಳನ್ನು, ಜಾನಪದ ಗೀತಗಳನ್ನು ಪ್ರಸಾರ ಮಾಡಿದ್ದಾರೆ. ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದ ಪ್ರಸಾರಾಂಗದಿಂದ ನಡೆಯುವ ಉಪನ್ಯಾಸ ಮಾಲಿಕೆ ನಮ್ಮ ತಿಕೋಟಾ ಗ್ರಾಮದಲ್ಲಿ ಎರಡು ಸಲ ಏರ್ಪಡಿಸಿದ್ದರು. ಈ ಸಂದರ್ಭದಲ್ಲಿ ಪರಿಚಿತರಾದ ಕನ್ನಡದ ಪ್ರಸಿದ್ಧಕವಿ, ವಿಮರ್ಶಕ, ಪ್ರಸಾರಾಂಗದ ನಿರ್ದೇಶಕರಾಗಿದ್ದ ಚನ್ನವೀರ ಕಣವಿ ಅವರು ನನ್ನನ್ನು ಕರೆದು ಆಂಧ್ರಪ್ರದೇಶದ ಗುಳ್ಯದಲ್ಲಿ ನಡೆದ ಉಪನ್ಯಾಸ ಮಾಲೆಯಲ್ಲಿ ನನಗೆ "ಪ್ರಪಂಚವನ್ನು ಕಂಡು ನಕ್ಕವರು" ಎಂಬ ವಿಷಯದ ಮೇಲೆ ಮಾತನಾಡಲು ಅವಕಾಶ ಕೊಟ್ಟರು. ಅವರ ಉಪಕಾರವನ್ನು ನಾನು ನಿತ್ಯ ಸ್ಮರಿಸುವೆನು.

ನನ್ನ ವೃತ್ತಿಯಿಂದ ಅನೇಕ ಒಳ್ಳೆಯ ವ್ಯಕ್ತಿಗಳ ಪರಿಚಯವಾಗಿದೆ. ಅವರ ಮೂಮನಸ್ಸು ನನ್ನ ಸಂವೇದನೆಗಳೊಂದಿಗೆ ಸ್ಪಂದಿಸುತ್ತ ಪ್ರೀತಿಯ, ವಾತ್ಸಲ್ಯದ, ಔದಾರ್ಯದ, ತುಂಬು ಅಭಿಮಾನದ ಪ್ರತೀಕವಾಗಿ ನಿಂತಿದೆ. ಇದು ನನ್ನ ಬದುಕಿನ ದೊಡ್ಡ ಭಾಗ್ಯವನ್ನದೆ ಗತ್ಯಂತರವಿಲ್ಲ. ಚಡಚಣ ಪ್ರವಚನದಲ್ಲಿ ಬಸವರಾಜ ಯಂಕಂಚಿ ತಮ್ಮನಾಗಿ ದೊರೆತರೆ, ಚಿಂಚಣಿಯಲ್ಲಿ ಪುರಾಣ ಸಮಯ ಸುಮಿತ್ರಾ ಕುಂಬಾರ ತಂಗಿಯಾಗಿ ದೊರೆತಳು. ಮುರಗೋಡದಲ್ಲಿ 'ಬಸವಪುರಾಣ' ನಡೆದಾಗ ಶಾಂತಲಾ ಯೋಗೀಶ ಯಡ್ರಾವಿ ಸಹೋದರಿಯಾಗಿ ಲಭಿಸಿದಳು.

ಗುಳೇದಗುಡ್ಡಕ್ಕೆ ಪುರಾಣಕ್ಕೆಂದು ಹೋದಾಗ ಡಾ. ಅಶೋಕ ಸಮಗಂಡಿ ಹಾಗೂ ಅಬ್ಬಾಸ ಮೇಲಿನಮನಿ ಆತ್ಮೀಯ ಅಭಿಮಾನಿಗಳಾಗಿ ದೊರೆತರು. ಶಿವಣಗಿಗೆ ಹೋದಾಗ ರೇವಣಸಿದ್ಧ ಬಿರಾದಾರ, ಅವರಾದಿ ಸಂಗಮೇಶ ಇತರ ಆತ್ಮೀಯ ಬಳಗ ಸಿಕ್ಕಿತು. ಮುಸಬಿನಾಳದಲ್ಲಿ ಶ್ರೀ ಶಿವಯ್ಯ ಚೌಕಿಮಠ ಹಾಗೂ

ಗೆಳೆಯರ ಬಳಗ. ಅರಭಾವಿಯಲ್ಲಿ ಎಸ್.ಆರ್. ಗೋಕಾಕ. ಮುರಗೋಡದಲ್ಲಿ ಶ್ರೀ ಮಂಡಯ್ಯ ದುರದುಂಡಿಮಠ ಹಾಗೂ ಮಹಾಂತೇಶ ದೇಸಾಯಿ ಫಣೇರು ಆತ್ಮೀಯರಾದರು. ಮೂಡಲಗಿಯಲ್ಲಿ ಶ್ರೀ ಶಿವಪುತ್ರಯ್ಯ ಸ್ವಾಮಿಗಳು ಮಠಪತಿ ಹಾಗೂ ಬಸವಬಳಗದವರೆಲ್ಲ ಒಡನಾಡಿಗಳಾದರು. ಗೂಡೂರ "ಬಸವಪುರಾಣ"ದಲ್ಲಿ ಶಿವಾನುಭವಿಗಳು, ಬಸವತತ್ವ ನಿಷ್ಠರು ಆದ ಡಾ. ಶಿವಕುಮಾರ ಮಾಲಗಿತ್ತಿಮಠ ಅವರು ಬಂಧುಗಳಾಗಿ ದೊರೆತರು. ಪ್ರಭುದೇವ ಶಿವಕುಮಾರ ಮಕ್ಕಳಾಗಿ ದೊರೆತರು.

ಈ ದೀರ್ಘ ಅವಧಿಯ ದಿನಗಳ ವೃತ್ತಿ ಸಮಯದಲ್ಲಿ ಬಹಳಷ್ಟು ಜನರ ಪರಿಚಯವಾಗಿದೆ. ಅವರ ಹೂವೊಡಲಿನ ಮಾಧುರ್ಯ ದೊರೆತಿದೆ. ಆತ್ಮೀಯ ಶ್ರೀಗಂಧ ಮೈತುಂಬಿದೆ. ನನ್ನ ಜ್ಞಾನಗಂಗೋತ್ರಿಗೆ ಒಂದು ರೀತಿಯ ಲಾಸ್ಯತಂದವರು, ಅವರು ಸೊಬಗು ನೀಡಿದವರು. ನನ್ನ ಕಷ್ಟ–ಸುಖದ ಗಳಿಗೆಯನ್ನು ಅರ್ಥೈಸಿ ಕೊಂಡು, ನನ್ನೊಂದಿಗೆ ಒಂದಾಗಿ, ಸ್ವಚ್ಛಂದವಾಗಿ, ಈಗಲೂ ಅಭಿಮಾನ ಉಳಿಸಿ ಕೊಂಡು, ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದಾರೆ. ಅವರ ಅಂತಃಕರಣದ ಔದಾರ್ಯದ ಪ್ರತೀಕ ನನ್ನ ಬದುಕಿಗೆ ಬಣ್ಣ ತೀಡಿದೆ ಎಂದು ನಾನು ಹೃದಯಾರೆ ಹೇಳುವೆ.

**ನನ್ನ ಆತ್ಮೀಯರು :**

ನನ್ನ ಬದುಕಿನ ಉದ್ದಕ್ಕೂ ನೋವಿನೊಂದಿಗೆ ನೋವಾಗಿ, ಗೆಲುವಿನೊಂದಿಗೆ ಗೆಲುವಾಗಿ ಹೃದಯತುಂಬಿದ ಆತ್ಮೀಯ ಬಳಗ ನನಗಿರುವುದು. ತಿಕೋಟಾದ ಮನೋಹರ ಜತ್ತಿ, ಚಂದ್ರಶೇಖರ ಜುಮನಾಳ, ಶ್ರೀ ಜಿ. ಕೆ. ಪಾಟೀಲ, ಶ್ರೀ ಸಿ. ಬಿ. ಪಾಟೀಲ (ಅಪ್ಪುಗೌಡರ). ಶ್ರೀ ಮಲ್ಲನಗೌಡ ಪಾಟೀಲ. ಶ್ರೀ ಬಾಪು ಗೌಡ ತಿಮ್ಮನಗೌಡ ಪಾಟೀಲ, ಶ್ರೀ ಸೈದಪ್ಪ ಶಿರಹಟ್ಟಿ, ಶ್ರೀ ವೀರಯ್ಯಸ್ವಾಮಿಗಳು ಸಾಲಿಮಠ. ಶ್ರೀ ಭೀಮು ಮರತುಗಿ, ಶ್ರೀ ನಾರಾಯಣ ಮೋಹಿತೆ, ಸಂತೋಷ ಟೇಲರ್, ಶ್ರೀ ಮಲ್ಲಿಕಾರ್ಜುನ ಭಕ್ತಮಂಡಳಿ ತಿಕೋಟಾ ಅವರ ಪ್ರೀತಿ ಔದಾರ್ಯಕ್ಕೆ ಸಾಟಿಯಿಲ್ಲ.

ಅಂತೆಯೇ ಕೋಟ್ಯಾಳದ ಪೂಜ್ಯಶ್ರೀ ಶಿಗೇನಿ ಅಪ್ಪಾ ಅವರು ನನ್ನ ಮೇಲೆ ತೋರಿದ ಕೃಪೆ ದೊಡ್ಡದು. ಅಲ್ಲಿಯ ಎಂ. ಬಿ. ಪಾಟೀಲ, ಸಿದ್ದಣ್ಣ ಪಾಚ್ಚಾಪೂರ, ಗದ್ಯಾಳ ಬಂಧುಗಳ ಆತ್ಮೀಯತೆಯನ್ನು ನನ್ನಿಂದ ವರ್ಣಿಸಲಾಗದು.

ಸದಾ ನನ್ನ ಭಾವನೆಗಳೊಂದಿಗೆ ಆತ್ಮೀಯವಾಗಿ ಸ್ಪಂದಿಸುತ್ತ ನನ್ನ ಕೀರ್ತಿಗೆ ಭಾಜನರಾಗಿರುವ ವಿಜಾಪೂರದ ಪ್ರಾಚಾರ್ಯ ಸಿ. ಎಂ. ನುಚ್ಚಿ, ಶ್ರೀ ಬಿ. ವಿ. ಹಂಪನಗೌಡ್ರು, ಶ್ರೀ ಬಿ. ಆರ್. ಗಡಶೆಟ್ಟಿ ಸಹಾಯಕ ನಿರ್ದೇಶಕರು ಕನ್ನಡ

ಮತ್ತು ಸಂಸ್ಕೃತಿ ಇಲಾಖೆ ಹಾಗೂ ಶ್ರೀ ಸಿದ್ಧಣ್ಣ ವಡಗೇರಿ ಅವರಿಗೆ ನಾನೆಂದೂ ಕೃತಜ್ಞನಾಗಿರುವೆ.

**ಬಂಧುಗಳ ಬಾಂಧವ್ಯದಲ್ಲಿ :**

ನನ್ನ ಜೀವನದಲ್ಲಿ ಸಂತೋಷದ ಕ್ಷಣಗಳನ್ನು ಸೃಷ್ಟಿಮಾಡಿದ ಅಪಾರ ಸ್ನೇಹಿತ ರಂತೆ. ನನ್ನ ಬಂಧು ಬಳಗದವರು ಕೂಡ ಬಳ್ಳಿಯಂತೆ ಹರಡಿಕೊಂಡಿದ್ದಾರೆ. ಹೂಗಂಧ ತೀಡಿದ್ದಾರೆ. ನನ್ನ ಧರ್ಮಪತ್ನಿ ಸೌ. ರಾಂತಾ ಹೆಸರಿಗೆ ತಕ್ಕಂತೆ ಗೃಹ ಶಾಂತಿಯನ್ನು ಕಾಪಾಡಿಕೊಂಡು ನನ್ನ ಯಶಸ್ಸಿಗೆ ಕಾರಣವಾದರೆ. ನನ್ನ ಒಬ್ಬನೇ ಮಗನಾದ ಸೋಮಶೇಖರ, ಸರಳ ಸ್ವಭಾವದ, ಗುಣಶೀಲನಾದ. ನನ್ನಲ್ಲಿ ಅವರ ವಾತ್ಸಲ್ಯವಿರಿಸಿಕೊಂಡ. ಸುಸಂಸ್ಕೃತನಾಗಿದ್ದಾನೆ. ನನ್ನ ತಂಗಿ ಮಹಾಲಿಂಗಪ್ಪನ ಮಗಳಾದ ಸರೋಜನಿದೇವಿ ನನ್ನ ಮುದ್ದು ಸೊಸೆಯಾಗಿ ಮನೆಗೆ ಬೆಳಕು ತರುವುದರ ಜೊತೆಗೆ ಹಾಲಿನಂಥ ದೊಡ್ಡಮ್ಮ, ಸಿದ್ರಾಮಪ್ಪ ಎಂಬ ಇಬ್ಬರು ಮುದ್ದು ಮೊಮ್ಮಕ್ಕಳನ್ನು ನೀಡಿ ಮನೆಗೆ ನಂದನ ತಂದಿದ್ದಾಳೆ.

ಅಕ್ಕ ನೀಲಕ್ಕ. ತಂಗಿ ಮಹಾದೇವಿ. ಇನ್ನೊಬ್ಬ ಅಕ್ಕ ಭಾಗೀರಥಿ, ಅಣ್ಣ ಸಿದ್ಧಪ್ಪ. ಅತ್ತಿಗೆ ಶಾಂತಮ್ಮ. ಅಣ್ಣನ ಮಕ್ಕಳಾದ ಬಿಸಲಪ್ಪ. ಮಲ್ಲಿಕಾರ್ಜುನ. ಶಿವಲೀಲಾ. ಅನ್ನಕ್ಕ ಇವರೆಲ್ಲರೂ ನನ್ನಲ್ಲಿ ಅನ್ಯೋನ್ಯ ಪ್ರೀತಿಯಿರಿಸಿಕೊಂಡಿದ್ದಾರೆ. ನಮ್ಮ ಅಣ್ಣನ ಮನೆಯಲ್ಲಿ ಮಹಾದೇವಿ. ಉಮಾದೇವಿ ಇವರು ಸುಶೀಲರೂ. ಸುಸಂಸ್ಕೃತ ಸೊಸೆಯರಾಗಿ ನನ್ನ ಬಗ್ಗೆ ಗೌರವವಿರಿಸಿಕೊಂಡಿದ್ದಾರೆ.

ಮಹಾಲಿಂಗಪೂರದಲ್ಲಿರುವ ಕಟಗಿಯವರ ಮನೆತನದ ನನ್ನ ಭಾಗೀರಥಿ ಚಿಕ್ಕಮ್ಮ ತಾಯಿಯ ಅಕ್ಕರತೆ ನೀಡಿದರೆ, ಅವರ ಪತಿ ಮಲ್ಲಿಕಾರ್ಜುನಪ್ಪ ತಂದೆಯ ವಾತ್ಸಲ್ಯ ಧಾರೆಯೆರೆಯುತ್ತಿದ್ದಾರೆ. ಅವರ ಮಕ್ಕಳಾದ ಚೆನ್ನಗಿರಿ, ಮಹಾಲಿಂಗಪ್ಪ, ಮಲ್ಲೇಶಿ, ಮುರಗೆಪ್ಪ, ನಾಗಪ್ಪ ನನ್ನನ್ನು ಪ್ರೀತಿಯಿಂದ ಆದರಿಸುವ ಸಹೋದರ ರಾಗಿದ್ದಾರೆ.

ನನ್ನ ತಾಯಿಯ ತವರಿನ ಬನಹಟ್ಟಿಯ ಸೋದರಮಾವನ ಮಕ್ಕಳಾದ ಡಾ. ಮಹಾಂತೇಶ ಬಂದಿ ಸೋದರರು, ಷಡಕ್ಷರಿ ಬಂದಿ ಸೋದರರು. ಪ್ರಕಾಶ ಬಂದಿ ಸೋದರರು ನನ್ನಲ್ಲಿ ಅಕ್ಕರತೆ ಇರಿಸಿಕೊಂಡಿದ್ದಾರೆ. ಸುಮಿತ್ರಾ ಮುರಗೆಪ್ಪ ಬಂದಿ ಇವರು ಅಕ್ಕನ ಹಾಲು ಸಕ್ಕರೆ ನೀಡಿ ಚೇತನ ತುಂಬುತ್ತಾರೆ. ಹಾರುಗೇರೆ ಯಲ್ಲಿರುವ ನನ್ನ ಚಿಕ್ಕಮ್ಮ ಮಲ್ಲಮ್ಮ, ಚಿಕ್ಕಪ್ಪ ಮಲ್ಲಪ್ಪ. ಬಾಗೇವಾಡಿ ಹಾಗೂ ಬಳಿಗದವರು, ಬಬಲೇಶ್ವರದ ಚಿಕ್ಕಪ್ಪ ರಾಚಪ್ಪ ಮಂಗಳವೇಡೆ ಹಾಗೂ ಬಳಗದವರು, ವಿಜಾಪೂರ ತಾಲೂಕಿನ ಹೊಸೂರ ಗ್ರಾಮದ ನನ್ನ ತಂಗಿಯ ಪತಿಯಾದ ಈಶ್ವರಪ್ಪ ಮಮದಾಪೂರ, ಭಾವ - ಮಲ್ಲಣ್ಣ, ಮೈದುನ ಶಂಕರ. ಜಂಬಗಿಯ

ಮಲ್ಲಿಕಾರ್ಜುನ ಮಮದಾಪೂರ. ತಿಕೋಟಾದಲ್ಲಿ ಮಹಾಲಿಂಗಪ್ಪ ಬಂದಿ, ವಿರೂಪಾಕ್ಷ ಬಂದಿ. ಅಕ್ಕನ ಮಕ್ಕಳಾದ ಚಂದ್ರಶೇಖರ. ಗುರುಪಾದ ಬಂದಿ – ಸೌ. ಶೋಭಾ ನನ್ನಲ್ಲಿ ಗೌರವವಿರಿಸಿಕೊಂಡಿದ್ದಾರೆ. ಶ್ರೀ ಬಸವರಾಜ ಕನ್ನೂರ (ಕೃಷಿ ಸಹಾಯಕ) ನನ್ನ ಅಳಿಯ, ಇವರ ಪ್ರೀತಿ ಅಸದಳ. ಹೀಗೆ ಎಲ್ಲಾ ಕಡೆಗೂ ನನ್ನ ಬಳಗದ ರಸಬಳ್ಳಿ ಹರಡಿದೆ. ಅವರ ಹಸಿರು ಪ್ರೀತಿಗೆ, ತೋರುವ ಅಕ್ಕರತೆಗೆ. ನೀಡುವ ವಾತ್ಸಲ್ಯಕ್ಕೆ, ಇರಿಸಿಕೊಂಡ ಗೌರವ, ಆದರಕ್ಕೆ ನಾನು ಕೃತಜ್ಞನಾಗಿರುವೆ. ಅವರೆಲ್ಲರ ಆ ತಂಪು ಕಂಪಿನ ನೆರಳಿನಲ್ಲಿ ನೆಮ್ಮದಿಯಿಂದ ನಾನಿರುವೆ.

**ಸಮಯ ಪ್ರಜ್ಞೆಯ ಚೈತನ್ಯದಲ್ಲಿ :**

ನಾನು ಈ ಪುರಾಣ – ಪ್ರವಚನ ಕೀರ್ತನೆ ಪ್ರಪಂಚಕ್ಕೆ ಕಾಲಿರಿಸಿದಾಗಿನಿಂದ ನನ್ನ ಬದುಕನ್ನು ಒಂದು ಕಟ್ಟುನಿಟ್ಟಿಗೆ ಅಳವಡಿಸಿಕೊಂಡಿದ್ದೇನೆ. ನಿಷ್ಠುರ ಹಾಗೂ ಮಗುವಿನ ಸ್ವಭಾವವಿದೆ. ಎಲ್ಲಕ್ಕಿಂತಲೂ ಮೇಲಾಗಿ ಸಮಯಪ್ರಜ್ಞೆ ನನ್ನ ಜೀವ ನಾಡಿಯಾಗಿದೆ. ಎಂಥ ಅವಸ್ಥೆಯಲ್ಲೂ ನಾನು ಈ ಸಮಯ ಪ್ರಜ್ಞೆಯಿಂದ ಜಾರಿ ಕೊಳ್ಳುವುದಿಲ್ಲ. ಇದು ಕೆಲವರಿಗೆ ನಿಷ್ಠುರವೆನಿಸಬಹುದಾದರೂ ಅದು ನನ್ನ ಬದುಕಿಗೆ ಚೈತನ್ಯ ನೀಡಿದೆ – ಅದನ್ನು ನಾನು ಗೌರವಿಸುತ್ತೇನೆ ಮತ್ತು ಹೃದಯಾಂತ ರಾಳದಿಂದ ಆರಾಧಿಸುತ್ತೇನೆ. ಸರಿಯಾದ ವೇಳೆಗೆ ನಿದ್ದೆ, ನಿತ್ಯ ಕರ್ಮಾಚರಣೆಗಳು. ಊಟ, ಕಾರ್ಯಕ್ರಮ ನನಗೀಗ ರೂಢಿಗತವಾಗಿ ಬಿಟ್ಟಿವೆ.

ಹಿರೇಪಡಸಲಗಿಯಲ್ಲಿ ಹೀಗೊಂದು ದಿನ ಪ್ರವಚನ ನಡೆದ ವೇಳೆಯಲ್ಲಿ ನನ್ನನ್ನು ಪರೀಕ್ಷೆಗೆ ಒಳಪಡಿಸುವ ಘಟನೆ ಜರುಗಿತು. ನನ್ನ ತಂಗಿ ಮಹಾಲಿಂಗವ್ವ ವಿಜಾಪೂರದ ಆಸ್ಪತ್ರೆಯಲ್ಲಿ ನಿಧನಳಾದ ವಿಷಯ ಪ್ರವಚನ ಹೇಳುವ ಸಮಯಕ್ಕೆ ಬಂದಿತು. ಸಮಯಪ್ರಜ್ಞೆಯಂತೆ ಪುರಾಣ ಕೆಲಸ ಮುಗಿಸಿ, ಕೂಡಲೇ ಅಂತ್ಯಸಂಸ್ಕಾರಕ್ಕೆ ಹೋದೆ. ಆದರೆ ಅಂತ್ಯದರ್ಶನ ಸಿಗಲಿಲ್ಲ, ದುಃಖಿಸಿದೆ. ಕೆಲವೇ ಕ್ಷಣಗಳಲ್ಲಿ ಅದೆಲ್ಲವನ್ನು ಮರೆತು ಮರುದಿನ ವೇಳೆಗೆ ಸರಿಯಾಗಿ ಪುರಾಣ ಹೇಳಲು ವೇದಿಕೆಯ ಮೇಲೆ ಕುಳಿತೆ.

ಗೂಡೂರದಲ್ಲಿ 'ಬಸವ ಪುರಾಣ' ನಡೆದಾಗ ತಿಕೋಟಾದಲ್ಲಿ ನನ್ನ ಸೋದರತ್ತೆ ರಾಚವ್ವ ಕೆಲದಿನಗಳ ನಂತರ ಸೋದರಮಾವ ಈಶ್ವರಪ್ಪ ಬಂದಿ ತೀರಿಕೊಂಡಾಗ ಕರ್ತವ್ಯ ಪ್ರಜ್ಞೆಯಿಂದ ನುಣುಚಿಕೊಳ್ಳದೆ – ಅಂತರಂಗದಲ್ಲೇ ಪರಿತಪಿಸಿದೆ.

ಈ ಸಮಯಪ್ರಜ್ಞೆಯ ಕಾರಣದಿಂದಲೇ ಇರಬಹುದು ನನಗೆ ಬಿಟ್ಟೂಬಿಡದೆ ಕಾರ್ಯಕ್ರಮಗಳು ದೊರೆಯುತ್ತವೆ. ಯಾವುದೇ ಗ್ರಾಮಗಳಿಂದ ಕರೆಬಂದರೂ ನಾನು ಕಾರ್ಯಕ್ರಮಕ್ಕೆ ಹೋಗುತ್ತೇನೆ. ಅಲ್ಲಿ ಎಲ್ಲರ ಜೊತೆಗೆ ಹೊಂದಿಕೊಂಡು ಅವಧಿ ಕಳೆಯುತ್ತೇನೆ. ಕರೆಯಿಸಿದವರಿಗೆ ತಲೆನೋವು ಆಗುವುದಿಲ್ಲ. ಅವರ ಶೋಷಣೆ

ಮಾಡುವುದಿಲ್ಲ. ಅದು ಬೇಕು-ಇದು ಬೇಕೆಂದು ಇಚ್ಛಿಸುವುದಿಲ್ಲ. ಹೀಗಾಗಿ ಹಲವಾರು ಕಡೆಗೆ ಜನ ನನ್ನನ್ನು ಪ್ರೀತಿಸಿ, ಗೌರವಿಸಿ ಬಹುಮಾನ, ಪ್ರಶಸ್ತಿ ಪತ್ರಗಳನ್ನು ಕೊಟ್ಟಿದ್ದಾರೆ. ಅವರ ಅಭಿಮಾನಕ್ಕೆ ಬೆಕ್ಕಸ ಬೆರಗಾಗಿದ್ದೇನೆ. ಇನ್ನು ಕೆಲವು ಊರುಗಳಲ್ಲಿ ಜನ ನನಗೆ ನೋಟು ನೀಡಿದ್ದಾರೆ. ಆದರೆ ಅದನ್ನು ಕೂಡ ನಾನು ಸ್ವೀಕರಿಸಿದ್ದೇನೆ. ಸಿಹಿ-ಕಹಿ ಎರಡು ಕೂಡಿದ್ದೇ ನಿಜವಾದ ಬದುಕೆಂದು ಅರಿತುಕೊಂಡಿದ್ದೇನೆ.

'ದಾನಸಿರಿ' ಈ ಹೊತ್ತಿಗೆಯನ್ನು ಕೈಗೆತ್ತಿಕೊಂಡಾಗ ಎಲ್ಲರೂ ನನ್ನ ಕಲಾ ಸೇವೆಯನ್ನು, ಸ್ವಭಾವದ ವರ್ಣನೆಯನ್ನು ಹೊಗಳಿ, ಕೊಂಡಾಡಿ ಬರೆದದ್ದನ್ನು ಓದುತ್ತೀರಿ. ಅಂದಮಾತ್ರಕ್ಕೆ ನಾನು ದೇವರಲ್ಲ. ಸಾಮಾನ್ಯ ಮನುಷ್ಯ. ಮಾನವನಿಗೆ ಇರಬೇಕಾದ ಸಹಜ ಲೋಪ-ದೋಷಗಳೂ ಇವೆ. ಆಟ, ನಾಟಕ ಮಾಡುವಾಗ ದುಷ್ಟ ಚಟಗಳು ನನ್ನಲ್ಲಿ ಸ್ನೇಹ ಮಾಡಿದ್ದವು. ಮನೋದೌರ್ಬಲ್ಯದಿಂದ ವಿಷಯಾಸಕ್ತನೂ ಆಗಿದ್ದೆ. ಆರ್ಥಿಕವಾಗಿ ಬೆಳೆಯುತ್ತಿರುವಾಗ ವ್ಯವಹಾರ ಸರಿಯಿರಲಿಲ್ಲ. ಈಗ ಕ್ರಮೇಣ ಸುಧಾರಿಸಿಕೊಂಡಿರುವೆ. ಇನ್ನೂ ಪರಿಶುದ್ಧನಾಗಿರದಿದ್ದರೂ ಆ ಗುರಿಯೆಡೆಗೆ ಸಾಗುವ ಹಂಬಲದಲ್ಲಿರುವೆ.

ನನ್ನ ಸಮಯಪ್ರಜ್ಞೆ, ಶಿಸ್ತು, ನಿಷ್ಠುರ ಸ್ವಭಾವ, ಹೊಂದಾಣಿಕೆಯ ಮನೋಭಾವ ಮುಪ್ಪಿಗೆ ನನ್ನ ಬದುಕಿಗೆ ಒಂದು ಹೊಸ ಆಯಾಮ ನೀಡುತ್ತಿವೆ. ನನ್ನನ್ನು ಪ್ರೀತಿಸುವ, ಗೌರವಿಸುವ, ಅನುಸರಿಸುವವರ ರಕ್ಷಾಕವಚದಿಂದ ನನ್ನನ್ನು ನಾನು ಅರಿತುಕೊಂಡು ನಡೆಯುವ ಪ್ರಜ್ಞೆ ಜಾಗ್ರತವಾಗಿರುತ್ತದೆ. ನನ್ನನ್ನು ಮನುಷ್ಯನನ್ನಾಗಿ ಮಾಡಿದ ಪ್ರಾಜ್ಞರಿಗೆ, ಸ್ನೇಹಿತರಿಗೆ, ಬಂಧು-ಬಳಗದವರಿಗೆ ಋಣಿಯಾಗಿರುವೆ.

'ದಾನಸಿರಿ'ಯ ಹಿನ್ನೆಲೆ :

ನಾನು ಗೋಕಾಕ ತಾಲೂಕಿನ ಅರಭಾವಿ ಪುಣ್ಯಾರಣ್ಯ ಮಠದಲ್ಲಿ ೧೯೯೨ ಜನೇವರಿ ೨೯ ರಿಂದ ಏಪ್ರಿಲ್ ೪ರವರೆಗೆ 'ಬಸವಪುರಾಣ'ವನ್ನು ನಡೆಸಿದೆ. ಅದು ಅದ್ದೂರಿಯಾಗಿತ್ತು. ಆ ಸಮಯದಲ್ಲಿ ಅನೇಕ ಆತ್ಮೀಯರು, ಸ್ನೇಹಿತರು, ಬಂಧುಗಳು, ಮಿತ್ರರುಗಳು ಅರಭಾವಿ ಮಠಕ್ಕೆ ಆಗಮಿಸಿದರು. ಆ ಸಂದರ್ಭದಲ್ಲಿ ಗುಳೇದಗುಡ್ಡದಿಂದ 'ಹನಿಗವನ', 'ಮುಕ್ತಕ'ಗಳಲ್ಲಿ ಹೆಸರು ಮಾಡಿದ, ಪತ್ರಕರ್ತರಾದ, ನನ್ನ ಆತ್ಮೀಯರಾದ ಡಾ. ಅಶೋಕ ಸಮಗಂಡಿ, ಕಥೆಗಳಲ್ಲಿ ಹೆಸರು ಮಾಡಿದ ಅಧ್ಯಾಪಕರೂ ಆದ ಅಬ್ಬಾಸ ಮೇಲಿನಮನಿ ಅವರೂ ಬಂದರು. ಕಾರ್ಯಕ್ರಮದ ನಂತರ ರಾತ್ರಿ ಊಟವಾದ ಮೇಲೆ ಹೀಗೆ ಮಾತನಾಡುತ್ತ ಕುಳಿತಾಗ, ಮಧ್ಯದಲ್ಲಿ "ನಿಮಗೆ ವಯಸ್ಸು ಎಷ್ಟು?" ಎಂದು ಕೇಳಿದರು.

"೧-೯-೯೨ಕ್ಕೆ ೫೫ರಲ್ಲಿ ಪಾದಾರ್ಪಣೆ ಮಾಡುತ್ತೇನೆ" ಎಂದೆ. ಅವರು,

"ನಿಮ್ಮ ೫೫ರ ಸವಿನೆನಪಿಗಾಗಿ ಒಂದು ಅಭಿನಂದನ ಗ್ರಂಥವನ್ನು ಸಮರ್ಪಿಸುತ್ತೇವೆ" ಎಂದರು. ಅವರ ಮಾತು ಕೇಳಿ ಆಶ್ಚರ್ಯವಾಯಿತು ನನಗೆ.

"ನಾನು ದೊಡ್ಡ ಸಾಹಿತಿಯೇ ? ಕಲಾವಿದನೇ ? ಕವಿಯೇ ? ನನಗೇಕೆ ಇಂಥ ದೊಡ್ಡ ಸನ್ಮಾನ ?" ಎಂದು ಮೆಲ್ಲಗೆ ಅವರ ಋಣಭಾರದಿಂದ ಕಳಚಿಕೊಳ್ಳಲು ಯತ್ನಿಸಿದೆ.

"ನೀವು ಒಬ್ಬ ಪ್ರಸಿದ್ಧ ಪುರಾಣಿಕರು, ಪ್ರವಚನಕಾರರು ಅಷ್ಟೇ ಅಲ್ಲ, ಒಳ್ಳೆಯ ಕಥೆಗಾರರು, ವಚನಕಾರರು, ಕವಿಗಳು, ಲೇಖಕರೂ, ನಟರೂ ಆಗಿದ್ದೀರಿ. ಜನರಿಗೆ ನಿಮ್ಮ ಒಂದು ಮುಖದ ಪರಿಚಯ ಈಗಿದೆ. ಅದರ ಇನ್ನೊಂದು ಮುಖದೊಂದಿಗೆ, ನಿಮ್ಮ ವ್ಯಕ್ತಿತ್ವದ ಸಂಪೂರ್ಣ ಪರಿಚಯ ಮಾಡಿಕೊಡುವ ಉದ್ದೇಶ ನಮ್ಮದು. ಅದರೊಂದಿಗೆ ನಿಮ್ಮ ಯಶಸ್ಸಿಗೆ ಅಭಿನಂದಿಸುವುದು ನಮ್ಮ ಇಚ್ಛೆ" ಎಂದರು.

ಅವರ ಅಭಿಮಾನದ ಮಾತಿಗೆ ಹೃದಯ ತುಂಬಿ ಬಂದಿತು. ನಾನು ಮೌನವಾದೆ. ದೊಡ್ಡ ದೊಡ್ಡ ಕಲಾವಿದರಿಗೆ, ಸಾಹಿತಿಗಳಿಗೆ, ಸಮಾಜ ಕಾರ್ಯಕರ್ತರಿಗೆ ಇಂಥ ಅಭಿನಂದನ ಗ್ರಂಥ ಸಮರ್ಪಿಸುವ ವಿಚಾರ ಕೇಳಿದ್ದೆ. ನೋಡಿದ್ದೆ. ಪುರಾಣ ಪ್ರಪಂಚದಲ್ಲಿನ ವ್ಯಕ್ತಿಗಳಿಗೆ ಇಂಥ ಸನ್ಮಾನ ನೀಡುವುದು ಅಪೂರ್ವ ಎನಿಸಿತು. ಇದು ಒಂದು ಹೊಸ ಇತಿಹಾಸವೇ ಎಂದು ತಿಳಿಯಿತು. ಇದು ದಾಖಲೆಯಾಗಲಿ ಎಂದು ಮೌನ ಸಮ್ಮತಿ ಸೂಚಿಸಿದೆ.

ಡಾ. ಅಶೋಕ ಸಮುಗಂಡಿ ಹಾಗೂ ಅಬ್ಬಾಸ ಮೇಲಿನಮನಿ ಸಂಪಾದಕರಾದರು. ಅವರಿಬ್ಬರೂ ಶ್ರೇಷ್ಠ ಕಲಾವಿದರೂ, ಕರ್ನಾಟಕ ರಾಜ್ಯ ಲಲಿತ ಕಲಾ ಅಕೆಡೆಮಿಯ ಸದಸ್ಯರೂ. "ಕನ್ನಡ ಹಸ್ತಪ್ರತಿಗಳು : ಒಂದು ಅಧ್ಯಯನ" ಎಂಬ ಮಹಾಪ್ರಬಂಧ ಬರೆದು ಡಾಕ್ಟರೇಟ್ ಪಡೆದ ಸಹೃದಯರೂ, ಪೂಜ್ಯರೂ ಆದ ಡಾ. ಬಿ. ಕೆ. ಹಿರೇಮಠ ಅವರ ಮಾರ್ಗದರ್ಶನದಲ್ಲಿ ಮುನ್ನಡೆದರು.

ಹಗಲಿರುಳು ನಿದ್ದೆ-ನೀರಡಿಕೆ ಇಲ್ಲದೆ ಅಭಿನಂದನ ಗ್ರಂಥದ ರೂಪರೇಷೆಯನ್ನು ಅಚ್ಚುಕಟ್ಟಾಗಿ ಪೂರೈಸಿ, ಗ್ರಂಥಕ್ಕೆ ಸಾಕಾರತೆ ನೀಡಿದರು. ಡಾ. ಬಿ. ಕೆ. ಹಿರೇಮಠ ಅವರು ಆ ಗ್ರಂಥಕ್ಕೆ 'ದಾನಸಿರಿ' ಎಂಬ ಔಚಿತ್ಯಪೂರ್ಣ ಹೆಸರು ಕೊಟ್ಟರು. ಒಟ್ಟಾರೆ 'ದಾನಸಿರಿ' ವೈಶಿಷ್ಟ್ಯಪೂರ್ಣವಾಗಿ, ಸುಂದರವಾಗಿ ಮೂಡಿಬರಲು ಡಾ. ಬಿ. ಕೆ. ಹಿರೇಮಠ ಅವರು, ಸಂಪಾದಕರಾದ ಡಾ. ಅಶೋಕ ಸಮುಗಂಡಿ ಹಾಗೂ ಅಬ್ಬಾಸ ಮೇಲಿನಮನಿ ಅವರು ಅಂತಃಕರಣದಿಂದ ಶ್ರಮಿಸಿದ್ದಾರೆ. ಈ ಗ್ರಂಥದ ಶ್ರೇಯಸ್ಸು ಈ ಮೂವರು ಮಹಾನುಭಾವರಿಗೆ ಸಲ್ಲಬೇಕು.

ಈ ಮೂರೂ ಆತ್ಮೀಯ ಹೃದಯಗಳಿಗೆ ನಾನು ಯಾವ ಶಬ್ದಗಳಿಂದ ಕೃತಜ್ಞತೆ ಸಲ್ಲಿಸಬೇಕೋ ತಿಳಿಯೆ. ಆದರೆ ಹೃದಯಾಂತರಾಳದಿಂದ ಧನ್ಯತೆಯ ಪ್ರಣಾಮಗಳನ್ನು ಮಾತ್ರ ಸಲ್ಲಿಸುವೆ.

ನನ್ನನ್ನು ಅಭಿನಂದಿಸುವ ಈ ಗ್ರಂಥದ ಬಗ್ಗೆ ಕೇಳಿ ಸಂತೋಷಗೊಂಡಿರುವ ನನ್ನ ತಿಕೋಟಾದ ಗೆಳೆಯರು. ಆತ್ಮೀಯರು, ಹಿರಿಯರು, ಅಣ್ಣಂದಿರಾದ ಸಿದ್ದಪ್ಪ ಜತ್ತಿ, ಮಾವಂದಿರಾದ ವೀರಪ್ಪ ಇಜೇರಿ. ಬಂಧುಗಳಾದ ಸಿದ್ರಾಮಪ್ಪ ಹಿಂಚಗೇರಿ, ಸ್ನೇಹಿತರಾದ ಜಿ. ಎಂ. ಪಾಟೀಲ (ಅಣ್ಣಪ್ಪಗೌಡರು), ಬಿ. ಬಿ. ಪಾಟೀಲರು. ಅಪ್ಪಾಸಾಹೇಬ ಬಿರಾದಾರ (ದಾಸ್ಯಾಳ) ಹಾಜಪ್ಪ ಕಂಬಾರ, ಧೋಂಡಿಬಾ ಕಪಟಕರ, ಹಿರಿಯರಾದ ಯಮುನಪ್ಪ ಅಣ್ಣಾ ಕೋಷ್ಟಿ, ಪ್ರೊ. ಎಸ್. ಬಿ. ಮಾಳಿ, ಬಾಗಲಕೋಟ. ಶ್ರೀ ವಿಠ್ಠಲ ಡೋಣಿ, ಈ ಗ್ರಂಥವನ್ನು ಅಂದವಾಗಿ ಮುದ್ರಿಸಿರುವ, ಆತ್ಮೀಯರೂ ಆದ ಪ್ರಭು ಪ್ರಿಂಟಿಂಗ ಪ್ರೆಸ್ಸಿನ ಶ್ರೀ ಶಾಂತವೀರ ಜಂಗಮಸಿ ಹಾಗೂ ಸಿಬ್ಬಂದಿಯವರನ್ನು ನಾನು ಕೃತಜ್ಞತೆಯಿಂದ ಸ್ಮರಿಸುವೆ.

ನನ್ನ ಮೇಲಿನ ಅಭಿಮಾನದಿಂದ, ವಾತ್ಸಲ್ಯದಿಂದ, ಪ್ರೀತಿಯಿಂದ ಅನೇಕ ಪೂಜ್ಯಶ್ರೀಗಳವರು, ಕೃಪಾಶೀರ್ವಾದ ಲೇಖನಗಳನ್ನು; ಅಭಿಮಾನಿಗಳು, ಹಿರಿಯ ಕವಿಗಳು, ವಿಮರ್ಶಕರು ಆತ್ಮೀಯ ಬರಹಗಳನ್ನು ಬರೆದು ಕಳಿಸಿದ್ದಾರೆ. ಕವನ ಕಳಿಸಿದ್ದಾರೆ. ಅನೇಕ ಪೂಜ್ಯರು 'ದಾನಸಿರಿ' ಪ್ರಕಟಣೆಗೆ ತುಂಬುಹೃದಯದ ಕಾಣಿಕೆ ನೀಡಿದ್ದಾರೆ. ಅಭಿಮಾನಿಗಳು ಆರ್ಥಿಕ ಸಹಾಯ ಸಲ್ಲಿಸಿದ್ದಾರೆ. ಅವರೆಲ್ಲರಿಗೂ ನಾನು ಋಣಿಯಾಗಿರುವೆ.

"ಎನಿತು ಜನ್ಮದಲಿ ಎನಿತು ಜೀವರಿಗೆ
ಎನಿತು ನಾವು ಋಣಿಯೊ
ತಿಳಿದು ನೋಡಿದರೆ ಬಾಳು ಎಂಬುದು
ಋಣದ ರತ್ನಗಣಿಯೊ"

ಎಂದು ಕವಿ ಜಿ. ಎಸ್. ಶಿವರುದ್ರಪ್ಪನವರು ಹೇಳಿದಂತೆ ಎನಿತು ಜನರಿಗೆ ನಾನು ಧನ್ಯವಾದಗಳನ್ನು ಹೇಳಬೇಕೋ ತಿಳಿಯದಾಗಿದೆ.

ಅವರ ಋಣಭಾರಕ್ಕೆ ವಂದನೆಗಳನ್ನು ಅರ್ಪಿಸುತ್ತ, ನನ್ನ ಜೀವನದ ಕೊನೆಯ ಉಸಿರಿನವರೆಗೂ ಅಧ್ಯಯನ ಮಾಡುತ್ತ, ಚಿಂತನಶೀಲನಾಗಿ, ರಾಷ್ಟ್ರೀಯ ಪ್ರಜ್ಞೆ, ಭಾವೈಕ್ಯತೆ, ವೈಜ್ಞಾನಿಕ ದೃಷ್ಟಿಕೋನದ ಮೇಲೆ ಪ್ರವಚನ, ಪುರಾಣ. ಕೀರ್ತನ ಮಾಡುತ್ತ, ಸಂಚರಿಸುವ ಪ್ರತಿಜ್ಞೆ ಮಾಡುತ್ತ, ಎಲ್ಲರ ಪ್ರೀತಿಯ, ಅಭಿಮಾನದ ಶ್ರೀರಕ್ಷೆಯನ್ನು ಯಾಚಿಸುವೆ.

# ದಾನಸಿರಿಯ ಲೇಖಕರು

೧. ಡಾ. ಸಿದ್ದಯ್ಯ ಪುರಾಣಿಕ,
ಶ್ರೀಗಿರಿ, ೪೫/ಎ (ಮಹಡಿ),
ಅಲಿ ಅಸ್ಕರ ರಸ್ತೆ, ಬೆಂಗಳೂರು – ೫೨

೨. ಶ್ರೀ ಜಗದ್ಗುರು ಅನ್ನದಾನೀಶ್ವರ ಮಹಾಸ್ವಾಮಿಗಳವರು ಸಂಸ್ಥಾನಮಠ,
ಮುಂಡರಗಿ – ೫೮೨ ೧೧೮ ಧಾರವಾಡ ಜಿಲ್ಲೆ

೩. ಸಂಗಪ್ಪ ಹೂಗಾರ, ಆಕಾಶವಾಣಿ ಹಾಗೂ ದೂರದರ್ಶನ ಕಲಾವಿದರು,
ಶ್ರೀ ಶಾರದಾ ಕರಡಿ ಮಜಲು ಸಂಘ, ಕೆಲೂರು – ೫೮೭ ೧೩೯
ವಿಜಾಪೂರ ಜಿಲ್ಲೆ

೪. ಪ್ರೊ. ಮಲ್ಲಿಕಾರ್ಜುನ ಹುಲಗಬಾಳಿ, ಅಧ್ಯಕ್ಷರು ಜಮಖಂಡಿ ತಾಲೂಕಾ
ಕನ್ನಡ ಸಾಹಿತ್ಯ ಪರಿಷತ್ತು, 'ಬಸವ ಸಂಪದ' ಬನಹಟ್ಟಿ – ೫೮೭ ೩೧೧
ವಿಜಾಪೂರ ಜಿಲ್ಲೆ

೫. ಡಾ. ಸಿ. ಪಿ. ಕೆ. (ಸಿ. ಪಿ. ಕೃಷ್ಣಕುಮಾರ್), ಪ್ರಾಧ್ಯಾಪಕರು,
ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ,
ಮೈಸೂರು ವಿಶ್ವವಿದ್ಯಾಲಯ, ಮೈಸೂರು – ೬

೬. ರಮೇಶ ಬಿ. ಕುಲಕರ್ಣಿ, ಧೂಳಖೇಡ – ೫೮೬ ೨೦೭, ವಿಜಾಪೂರ ಜಿಲ್ಲೆ

೭. ಬಸವರಾಜ ಹೂಗಾರ, ಹಿರೇಸಿಂಗನಗುತ್ತಿ – ೫೮೭ ೧೫೪, ವಿಜಾಪೂರ ಜಿಲ್ಲೆ

೮. ಮಹಾಲಿಂಗ ಮಂಗಿ, ಪತ್ರಕರ್ತ ೮೧/೪, ಗೋಕಾಕ ಫಾಲ್ಸ – ೫೯೧ ೩೦೮
ಬೆಳಗಾವಿ ಜಿಲ್ಲೆ

೯. ಡಾ. ಎಚ್. ತಿಪ್ಪೇರುದ್ರಸ್ವಾಮಿ,
೨೨೩, ೧೨ನೇ ಮೇನ್, ಸರಸ್ವತಿಪುರಂ, ಮೈಸೂರು – ೯

೧೦. ಬ. ಗಿ. ಯಲ್ಲಟ್ಟಿ, 'ಬಸವ ನಿಲಯ' ಬನಹಟ್ಟಿ – ೫೮೭ ೩೧೧
ವಿಜಾಪೂರ ಜಿಲ್ಲೆ

೧೧. ಸುಭಾಸ ಯಾದವಾಡ, ಅಧ್ಯಕ್ಷರು ವಿಜಾಪೂರ ತಾಲೂಕಾ ಕನ್ನಡ ಸಾಹಿತ್ಯ
ಸಂಪತ್ತು, ಅಂಕಿ ಸಂಖ್ಯಾ ಸಹಾಯಕ, ಭಾರತೀಯ ಕುಟುಂಬ ಯೋಜನಾ
ಸಂಘ, ಫ. ಗು. ಹಳಕಟ್ಟಿ ಮಾರ್ಗ, ಶರಣ ನಗರ,
ವಿಜಾಪೂರ – ೫೮೬ ೧೦೩.

೧೨. ಡಾ. ಕೆ. ಮುದ್ದಣ್ಣ, ನಂ. ೧೮. ಹೌಸಿಂಗ ಕಾಲನಿ, 'ಪ್ರಭಾ ಕಿರಣ'
ದಿವಾನ – ೯ – ಶಾಹಿ, ಗುಲಬುರ್ಗಾ – ೨

೧೩. ಬಸವರಾಜ ಯಂಕಂಚಿ, ಚಡಚಣ – ೫೮೬ ೨೦೫ ವಿಜಾಪೂರ ಜಿಲ್ಲೆ

೧೪. ಈಶ್ವರಚಂದ್ರ ಚಿಂತಾಮಣಿ, ಮಾಜಿ ಅಧ್ಯಕ್ಷರು, ಜಿಲ್ಲಾ ಕನ್ನಡ ಸಾಹಿತ್ಯ
ಪರಿಷತ್ತು, ಗೋಡಬೋಲೆ ಮಾಳಾ, ವಿಜಾಪೂರ – ೫೮೬ ೧೦೦

೧೫. ಚೆನ್ನವೀರ ಕಣವಿ, 'ಚೆಂಬೆಳಕು' ಕಲ್ಯಾಣ ನಗರ, ಧಾರವಾಡ – ೭

೧೬. ಪ್ರೊ. ಪಿ. ವ್ಹಿ. ವಜ್ರಮಟ್ಟಿ (ಮೇಘಮಿತ್ರ) 'ಅರುಣೋದಯ'
ಬಸವ ನಗರ, ಜಮಖಂಡಿ – ೫೮೭ ೩೦೨ ವಿಜಾಪೂರ ಜಿಲ್ಲೆ

೧೭. ಶಿವಶರಣೆ ನೀಲಮ್ಮತಾಯಿ ಅಸುಂಡಿ, ಆಧ್ಯಾತ್ಮ ಮಹಿಳಾ ಆಶ್ರಮ
ಅಸುಂಡಿ. ಧಾರವಾಡ ಜಿಲ್ಲೆ

೧೮. ಶಂ. ಗು. ಬಿರಾದಾರ, ಕಮಲಕುಂಜ, ಶಾಸ್ತ್ರಿನಗರ, ತೊರವಿ ರಸ್ತೆ,
ವಿಜಾಪೂರ – ೫೮೬ ೧೦೧

೧೯. ಯೋಗೀಶ ಯಡ್ರಾವಿ, ನಿವೃತ್ತ ಗ್ರಂಥ ಪಾಲಕರು, 'ಶಾಂತಿ – ಯೋಗ'
ಶಿವಗಿರಿ, ಧಾರವಾಡ – ೫೮೦ ೦೦೨.

೨೦. ಶಾಂತಲಾ ಯೋಗೀಶ ಯಡ್ರಾವಿ 'ಶಾಂತಿ – ಯೋಗ'
ಶಿವಗಿರಿ, ಧಾರವಾಡ – ೫೮೦ ೦೦೨.

೨೧. ಸುಮಿತ್ರಾ ಕುಂಬಾರ, ಚಿಂಚಣಿ. ಬೆಳಗಾವಿ ಜಿಲ್ಲೆ.

೨೨. ಡಾ. ಎಂ. ಎಸ್. ವಾಲಿ, ಕನ್ನಡ ವಿಭಾಗದ ಮುಖ್ಯಸ್ಥರು,
ಶಿವಾನಂದ ಕಾಲೇಜ, ಕಾಗವಾಡ – ೫೯೧ ೨೨೩ ಬೆಳಗಾವಿ ಜಿಲ್ಲೆ

೨೩. ಸೋಮಶೇಖರ ದಾ. ಜತ್ತಿ, ಕೃಷಿ ಸಹಾಯಕರು,
ಕೆಲೂರ – ೫೮೭ ೧೫೯ ವಿಜಾಪೂರ ಜಿಲ್ಲೆ

೨೪. ಕೆ. ಎಂ. ಜ್ಞಾನಯೋಗೀಶ್ವರ ಶಾಸ್ತ್ರಿಗಳು, ಪ್ರವಚನಕಾರರು,
ಬೆಳಧಡಿ, ಧಾರವಾಡ ಜಿಲ್ಲೆ

೨೫. ಡಾ. ಸಿಂಪಿ ಲಿಂಗಣ್ಣ, ಶ್ರೀ ಅರವಿಂದ ಗ್ರಂಥಾಲಯ,
ಚಡಚಣ – ೫೮೬ ೨೦೫ ವಿಜಾಪೂರ ಜಿಲ್ಲೆ

೨೬. ಬಸವರಾಜ ಬಿ. ದೇಸಾಯಿ, ಪ್ರಥಮ ದರ್ಜೆ ಸಹಾಯಕ, ಯು.ಕೆ.ಪಿ.
ಕ್ಯಾಂಪ್, ಸಾಲೋಟಗಿ, ವಿಜಾಪೂರ ಜಿಲ್ಲೆ.

೨೭. ವಿಜಯ ಮಹಾಂತದೇವರು ಹಿರೇಮಠ, ವೀರಮೇಲಿನಗವಿ ಸಿಂಹಾಸನ ಸಂಸ್ಥಾನಮಠ, ಶಿವಗಂಗಾ. ಶಿವಗಂಗಾಕ್ಷೇತ್ರ
ಬೆಂಗಳೂರು ಗ್ರಾಮಾಂತರ ಜಿಲ್ಲೆ.

೨೮. ಜಿ. ಎಸ್. ಅನ್ನದಾನಿ, ಸಾಲ ವಿಸ್ತರಣಾ ಅಧಿಕಾರಿಗಳು, ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಚೇರಿ, ಹುನಗುಂದ–೫೮೭ ೧೧೮ ವಿಜಾಪೂರ ಜಿಲ್ಲೆ.

೨೯. ಮಹೇಶಕುಮಾರ ಎಂ. ಗಣಾಚಾರಿಮಠ,
ನೇಜ – ೫೯೧ ೨೧೪ ಬೆಳಗಾವಿ ಜಿಲ್ಲೆ

೩೦. ಶಿವಲಿಂಗಶಾಸ್ತ್ರಿ ಹಿರೇಮಠ, ಪ್ರವಚನಕಾರರು.
ಗುಡೂರ – ೫೮೭ ೨೦೨ ವಿಜಾಪೂರ ಜಿಲ್ಲೆ

೩೧. ಪ್ರೊ. ಬಿ. ಆರ್. ಪೋಲಿಸ್‌ಪಾಟೀಲ, 'ವಾತ್ಸಲ್ಯ'. ಸೋಮವಾರ ಪೇಟೆ,
ಬನಹಟ್ಟಿ – ೫೮೭ ೩೧೧ ವಿಜಾಪೂರ ಜಿಲ್ಲೆ

೩೨. ಬಸಯ್ಯ ನಿಂಗಯ್ಯ ಮಠಪತಿ. ಊರನ ಮಠದ ಹತ್ತಿರ.
ಸಿಂದಗಿ – ೫೮೬ ೧೨೮ ವಿಜಾಪೂರ ಜಿಲ್ಲೆ

೩೩. ಸಿದ್ಧರಾಮ ಉಪ್ಪಿನ, ಚೇತನ ಪ್ರಿಂಟರ್ಸ್,
ಬಸ್‌ನಿಲ್ದಾಣದ ಹತ್ತಿರ. ಶಹಾಪೂರ – ೫೮೫ ೨೨೩ ಕಲಬುರ್ಗಿ ಜಿಲ್ಲೆ

೩೪. ಬಾಬು ನಾಯಿಕ, ಪತ್ರಕರ್ತರು.
ಹುಕ್ಕೇರಿ, ಬೆಳಗಾವಿ ಜಿಲ್ಲೆ

೩೫. ಬಾಲಶೇಖರ ಬಂದಿ, ಗ್ರಂಥಪಾಲಕ, ಜ್ಯೂನಿಯರ ಕಾಲೇಜು
ಮೂಡಲಗಿ – ೫೯೧ ೩೧೨ ಬೆಳಗಾವಿ ಜಿಲ್ಲೆ

೩೬. ಶಿವಲಿಂಗಸ್ವಾಮಿ ಹಿರೇಮಠ, ಹಿರೇಪಡಸಲಗಿ. ವಿಜಾಪೂರ ಜಿಲ್ಲೆ

೩೭. ಈರಯ್ಯ ಕೆ. ಕಣಬೂರ, ತಿಕೋಟಾ – ೫೮೬ ೧೩೦ ವಿಜಾಪೂರ ಜಿಲ್ಲೆ

೩೮. ಸಿದ್ದಣ್ಣ ವಡಿಗೇರಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ವಿಜಾಪೂರ

೩೯. ಕಾ. ಹು. ಬಿಜಾಪೂರ, ಸಾಮಾಜಿಕ ಧುರೀಣರು.
ಗೊಳಸಂಗಿ. ವಿಜಾಪೂರ ಜಿಲ್ಲೆ

೪೦. ಬ. ವೀ. ಹಂಪನಗೌಡ್ರು, ವೀರೇಶ ನಿಲಯ – ೪೮, ಮಲ್ಲಿಕಾರ್ಜುನ ನಗರ
ಸೋಲಾಪೂರ ರಸ್ತೆ, ವಿಜಾಪೂರ – ೫೮೬ ೧೦೩

೪೧. ವ್ಹಿ. ಪಿ. ಡೋಣಿ, ಗ್ರಂಥಾಲಯಾಧಿಕಾರಿ, ಜಿಲ್ಲಾ ಕೇಂದ್ರ ಗ್ರಂಥಾಲಯ ಶಾಖೆ, ಬಸವನ ಬಾಗೇವಾಡಿ. ವಿಜಾಪೂರ ಜಿಲ್ಲೆ

೪೨. ರಾಜಯ್ಯಸ್ವಾಮಿ ಹಿರೇಮಠ, ರಾಜ್ಯ ಪ್ರಶಸ್ತಿ ವಿಜೇತ ಸಂಗೀತಗಾರರು.
ತೊಗಲಬಾಗಿ. ವಿಜಾಪೂರ ಜಿಲ್ಲೆ

೪೩. ರಾಮಣ್ಣ ಭೀ. ಗೊರವರ, ನಿವೃತ್ತ ಕಾರ್ಯದರ್ಶಿ,
ಶೇತ್ಕಿ ಸಹಕಾರಿ ಸಂಘ ನಿಯಮಿತ, ಹೊಸೂರ – ೫೮೭ ೧೫೬
ವಿಜಾಪೂರ ಜಿಲ್ಲೆ

೪೪. ಡಾ. ಅಶೋಕ ಸಮಗಂಡಿ, ಪತ್ರಕರ್ತ 'ಸಮಗಂಡಿ ಪ್ರಕಾಶನ'
ಗುಳೇದಗುಡ್ಡ – ೫೮೭ ೨೦೩ ವಿಜಾಪೂರ ಜಿಲ್ಲೆ

೪೫. ಅಬ್ಬಾಸ್ ಮೇಲಿನಮನಿ. ಕನ್ನಡ ಅಧ್ಯಾಪಕರು,
ಬಾಲಕಿಯರ ಸರಕಾರಿ ಪ್ರೌಢ ಶಾಲೆ, ಗುಳೇದಗುಡ್ಡ – ೫೮೭ ೨೦೩
ವಿಜಾಪೂರ ಜಿಲ್ಲೆ

೪೬. ಪ್ರೊ. ಮಲ್ಲಿಕಾರ್ಜುನ ಹಿರೇಮಠ, 'ಬೆಳಕು' ವಿದ್ಯಾನಗರ,
ಹುನಗುಂದ – ೫೮೭ ೧೧೮ ವಿಜಾಪೂರ ಜಿಲ್ಲೆ

೪೭. ಕು. ರಾ. ನಾ. ಜೀವವಿಮಾ ಪ್ರತಿನಿಧಿ, ೧೩೧೮, ತಿಪ್ಪಾಪೇಟ.
ಗುಳೇದಗುಡ್ಡ – ೫೮೭ ೨೦೩ ವಿಜಾಪೂರ ಜಿಲ್ಲೆ

೪೮. ಸುಭಾಸ ಸಂ. ಪೋರೆ (ಸು.ಸಂ.ಪೋ) ಮುಖ್ಯೋಪಾಧ್ಯಾಯರು,
ಹೊಸಪೇಟೆ ಸ್ಟ್ರೀಟ್, ರಟ್ಟೀಹಳ್ಳಿ – ೫೮೧ ೧೧೬ ಧಾರವಾಡ ಜಿಲ್ಲೆ

೪೯. ಡಾ. ಬಿ. ಕೆ. ಹಿರೇಮಠ, ಕನ್ನಡ ಪ್ರಾಧ್ಯಾಪಕರು,
ಬಸವೇಶ್ವರ ಕಲಾ ಮಹಾವಿದ್ಯಾಲಯ. ಬಾಗಲಕೋಟ – ೫೮೭ ೧೦೧
ವಿಜಾಪೂರ ಜಿಲ್ಲೆ

೫೦. ಪ್ರೊ. ಜಿ. ಜಿ. ಹೂಗಾರ, ಕನ್ನಡ ವಿಭಾಗ
ಭಂಡಾರಿ ವ, ರಾಠಿ ಪದವಿ ಮಹಾವಿದ್ಯಾಲಯ,
ಗುಳೇದಗುಡ್ಡ – ೫೮೭ ೨೦೩ ವಿಜಾಪೂರ ಜಿಲ್ಲೆ

೫೧. ಪ್ರೊ. ಸಿದ್ಧರಾಮಯ್ಯ ಮಠಪತಿ, ಸಂಗೀತ ವಿಭಾಗ.
ಬಸವೇಶ್ವರ ಕಲಾ ಮಹಾವಿದ್ಯಾಲಯ, ಬಾಗಲಕೋಟ – ೫೮೭ ೧೦೧
ವಿಜಾಪೂರ ಜಿಲ್ಲೆ

೫೨. ಡಾ. ಶಿವಕುಮಾರಸ್ವಾಮಿ ಮಾಲಗಿತ್ತಿಮಠ,
ಗುಡೂರು – ೫೮೭ ೨೦೨ ವಿಜಾಪೂರ ಜಿಲ್ಲೆ

೫೩. ರೇವತಿ ಎಸ್. ಉಪ್ಪಿನ, ಚೇತನ ಪ್ರಿಂಟರ್ಸ್, ಬಸ್ ನಿಲ್ದಾಣದ ಹತ್ತಿರ,
ಶಹಾಪೂರ – ೫೮೫ ೨೨೩ ಕಲಬುರ್ಗಿ ಜಿಲ್ಲೆ

೫೪. ಗಂಗಾತನಯ (ಅ. ರಾ. ಜಂಬಗಿ), ಜಾನಪದ ಸಾಹಿತ್ಯರತ್ನ
ಪ್ರಶಸ್ತಿ ವಿಜೇತರು, ಬನಹಟ್ಟಿ – ೫೮೭ ೩೧೧ ಕಲಬುರ್ಗಿ ಜಿಲ್ಲೆ

೫೫. ಪ. ಗು. ಸಿದ್ಧಾಪೂರ, ಕಲಾ ಶಿಕ್ಷಕರು,
ಶ್ರೀ ಮಲ್ಲಿಕಾರ್ಜುನ ಮಾಧ್ಯಮಿಕ ಶಾಲೆ,
ಮುಳವಾಡ – ೫೮೬ ೧೨೯ ವಿಜಾಪೂರ ಜಿಲ್ಲೆ

೫೬. ಜಂಬುನಾಥ ಕಂಚ್ಯಾಣಿ, ಅಧ್ಯಾಪಕರು, ಎಸ್. ಎಂ. ಹೈಸ್ಕೂಲ್
ಮುಳವಾಡ – ೫೮೬ ೧೨೯ ವಿಜಾಪೂರ ಜಿಲ್ಲೆ

೫೭. ಪ್ರೊ. ಬಿ. ಕೆ. ನಂದನೂರ, ಶಿಕ್ಷಣ ವಿಭಾಗ,
ಭಂಡಾರಿ ವ, ರಾಠಿ ಪದವಿ ಮಹಾವಿದ್ಯಾಲಯ,
ಗುಳೇದಗುಡ್ಡ – ೫೮೭ ೨೦೩ ವಿಜಾಪೂರ ಜಿಲ್ಲೆ

೫೮. ವೇ. ವಿರೂಪಾಕ್ಷಕವಿ ಹಿರೇಮಠ, ಅಂಚೆ ಕಚೇರಿ,
ರಾಮಪುರ ವಿಜಾಪೂರ ಜಿಲ್ಲೆ

೫೯. ಶಿವಕವಿ (ಸಂಗಮೇಶ ಹೊಸಮನಿ),
ರಾಮವಾಡಗಿ. ವಿಜಾಪೂರ ಜಿಲ್ಲೆ

೬೦. ಶಿ. ಅ. ದರೂರ, ನಿವೃತ್ತ ಶಿಕ್ಷಕರು,
ಅರಭಾವಿ. ಬೆಳಗಾವಿ ಜಿಲ್ಲೆ

೬೧. ಡಾ. ಕರವೀರಪ್ರಭು ಕ್ಯಾಲಕೊಂಡ, ವೈದ್ಯಾಧಿಕಾರಿಗಳು,
ಪ್ರಾಥಮಿಕ ಆರೋಗ್ಯ ಕೇಂದ್ರ,
ಪಟ್ಟದಕಲ್ಲು – ೫೮೭ ೨೧೧ ವಿಜಾಪೂರ ಜಿಲ್ಲೆ



ಶ್ರೀ ದಾನಪ್ಪ ಜತ್ತಿಯವರು ನಮ್ಮ ನಾಡಿನ ಬಲು ಅಪರೂಪದ ವ್ಯಕ್ತಿ. ಬಹುಮುಖ ಪ್ರತಿಭಾವಂತರೆನ್ನುವ ಶಬ್ದವೂ ಅವರನ್ನು ಪೂರ್ಣವಾಗಿ ಬಣ್ಣಿಸಲು ಅಸಮರ್ಥವಾಗುತ್ತದೆ. ಅವರು ಸರ್ವಮುಖ ಪ್ರತಿಭಾವಂತರು. ಅವರಲ್ಲಿ ಏನಿದೆ? ಎಂದು ಹುಡುಕುವುದಕ್ಕಿಂತ ಅವರಲ್ಲಿ ಏನಿಲ್ಲ? ಎಂದು ಹುಡುಕುವದೇ ಹೆಚ್ಚು ಸುಲಭ.

ವಿಧಾತನ ವಿಶೇಷ ಸೃಷ್ಟಿಯಾದ ಶರಣ ದಾನಪ್ಪ ಜತ್ತಿ ಅವರು ಕೈ ಹಾಕದ ಕ್ಷೇತ್ರವಿಲ್ಲ. ಬಾಯಿ ಹಾಕದ ವಿಷಯವಿಲ್ಲ. ರಾಜಕಾರಣದಿಂದ ಹಿಡಿದು ಧರ್ಮಕಾರಣದವರೆಗೆ, ನಾಟಕ-ಸಿನೇಮಾ ವೇದಿಕೆಯಿಂದ ಪ್ರವಚನ ವೇದಿಕೆಯವರೆಗೆ ಅವರ ಬದುಕಿನ ಬಳ್ಳಿ ಹರಡಿದೆ.

★ ನೀಲಗುಂದ ಶ್ರೀಗಳು

---

ಶ್ರೀ ದಾನಪ್ಪ ಜತ್ತಿಯವರೊಂದಿಗೆ ಸಂಪಾದಕರು

